# ಕನ್ನಡ ಕಸ್ತೂರಿ

## ಪಠ್ಯ ಮತ್ತು ಉಪ ಪಠ್ಯ

## ಹನ್ನೊಂದನೆಯ ತರಗತಿ

# KANNADA KASTHURI

**(Kannada Reader and Supplementary Reader)**

## Higher Secondary First year

ಅಸ್ಪೃಶ್ಯತೆಯು ಒಂದು ಪಾಪಕಾರ್ಯ
ಅಸ್ಪೃಶ್ಯತೆಯು ಒಂದು ಮಹಾ ಅಪರಾಧ
ಅಸ್ಪೃಶ್ಯತೆಯು ಒಂದು ಅಮಾನುಷ ಕೃತ್ಯ

**ತಮಿಳುನಾಡು ಪಠ್ಯ ಪುಸ್ತಕ ಸಂಸ್ಥೆ**
**ಕಾಲೇಜು ರಸ್ತೆ, ಚೆನ್ನೈ 600 006.**
**TAMILNADU TEXTBOOK CORPORATION**
**College Road, Chennai 600 006.**

First Edition - 2004

**CHAIRPERSON**

**Dr. Srikrishna Bhat Arthikaje**
Prof. and Head
Department of Kannada
University of Madras
Chennai - 600 005.

**REVIEWER**

**Dr. K. Renuka Shetty**
Part Time Lecturer
Dept. of Kannada
University of Madras,
Chennai - 600 005.

**AUTHORS**

**Dr. C.S. Urmila Sathyan**
P.G. Assistant
Kannada Sangha Hr. Sec.School
Ayanavaram,
Chennai - 600 023.

**Sri K. Kumar Achar**
P.G. Asst. in Kannada
Karnataka Sangha Hr. Sec. School
T. Nagar
Chennai - 600 017.

**Price: Rs. 22.00**

This book has been prepared by the Directorate of School Education on behalf of the Government of Tamilnadu

This book has been printed in 60 G.S.M. paper

***Printed by Web Offset at:***
**PANAMA GRAPHICS, CHENNAI - 600091**

# ರಾಷ್ಟ್ರಗೀತೆ

ಜನ ಗಣ ಮನ ಅಧಿನಾಯಕ ಜಯ ಹೇ!
ಭಾರತ ಭಾಗ್ಯ ವಿಧಾತಾ!!
ಪಂಜಾಬ ಸಿಂಧು ಗುಜರಾತ ಮರಾಠಾ!
ದ್ರಾವಿಡ ಉತ್ಕಲ ವಂಗ!!
ವಿಂಧ್ಯ ಹಿಮಾಚಲ ಯಮುನಾ ಗಂಗಾ
ಉಚ್ಛಲ ಜಲಧಿ ತರಂಗಾ!!
ತವಶುಭ ನಾಮೆ ಜಾಗೇ
ತವಶುಭ ಆಶಿಷಮಾಗೇ!
ಗಾಹೇ ತವ ಜಯ ಗಾಥಾ!!
ಜನಗಣ ಮಂಗಲ ದಾಯಕ ಜಯಹೇ!
ಭಾರತ ಭಾಗ್ಯ ವಿಧಾತಾ!!
ಜಯಹೇ ಜಯಹೇ ಜಯಹೇ
ಜಯ ಜಯ ಜಯ ಜಯ ಹೇ!!

- ರವೀಂದ್ರನಾಥ್ ಠಾಗೂರ್

# ರಾಷ್ಟ್ರಗೀತೆಯ ಸಾರ

ಭಾರತ ಮಾತೆಯೇ! ಪ್ರಜೆಗಳ ಸುಖ ದುಃಖಗಳನ್ನು ನಿರ್ಣಯಿಸುವ ನೀನೇ ಎಲ್ಲರ ಮನದಲ್ಲೂ ನೆಲೆಸಿದ್ದೀಯೇ. ನಿನ್ನ ಶ್ರೀನಾಮ ಪಂಜಾಬ್, ಸಿಂಧು, ಗುಜರಾತ್, ಮಹಾರಾಷ್ಟ್ರ, ದ್ರಾವಿಡ, ಉತ್ಕಲ (ಒರಿಸ್ಸಾ) ಬಂಗಾಳ ಪ್ರಾಂತ್ಯಗಳನ್ನು ಮನೋದ್ದೀಪನಗೊಳಿಸುತ್ತದೆ.

ಮತ್ತೆ ನಿನ್ನ ಶ್ರೀನಾಮ, ವಿಂಧ್ಯ, ಹಿಮಾಚಲ ಪರ್ವತ ಶ್ರೇಣಿಗಳಲ್ಲಿ ಪ್ರತಿಧ್ವನಿಸುತ್ತದೆ; ಯಮುನಾ, ಗಂಗಾ ನದಿಗಳ ಮಧುರ ನಾದದಲ್ಲಿ ಲೀನವಾಗುತ್ತದೆ; ಹಿಂದೂ ಮಹಾಸಾಗರದ ಅಲೆಗಳಲ್ಲಿ ನಮನಗೊಳ್ಳುತ್ತದೆ.

ಅವು ನಿನ್ನ ಕೃಪೆಯನ್ನು ಬೇಡುತ್ತವೆ; ನಿನ್ನ ಕೀರ್ತಿಯನ್ನು ಹರಡುತ್ತವೆ. ಭಾರತದ ಸುಖ ದುಃಖಗಳನ್ನು ನಿರ್ಣಯಿಸುವ ತಾಯೇ! ನಿನಗೆ

ಜಯಹೇ! ಜಯಹೇ! ಜಯಹೇ.

## ದೇಶೀಯ ಗೀತೆ

ವಂದೇ ಮಾತರಂ
ಸುಜಲಾಂ ಸುಫಲಾಂ ಮಲಯಜ ಶೀತಲಾಂ
ಸಸ್ಯ ಶ್ಯಾಮಲಾಂ ಮಾತರಂ
ವಂದೇ ಮಾತರಂ
ಶುಭ್ರ ಜ್ಯೋತ್ಸ್ನಾ ಪುಲಕಿತ ಯಾಮಿನೀಂ
ಫುಲ್ಲ ಕುಸುಮಿತ ದ್ರುಮದಲ ಶೋಭಿನೀಂ
ಸುಹಾಸಿನೀಂ ಸುಮಧುರ ಭಾಷಿಣೀಂ
ಸುಖದಾಂ ವರದಾಂ ಮಾತರಂ
ವಂದೇ ಮಾತರಂ
ವಂದೇ ಮಾತರಂ

**- ಬಂಕಿಂ ಚಂದ್ರ ಚಟರ್ಜಿ**

## ಪ್ರತಿಜ್ಞೆ

ಭಾರತ ನನ್ನ ದೇಶ. ಭಾರತೀಯರೆಲ್ಲರೂ ನನ್ನ ಒಡಹುಟ್ಟಿದವರು. ನನ್ನ ದೇಶವನ್ನು ನಾನು ಬಹಳ ಪ್ರೀತಿಸುತ್ತೇನೆ. ಈ ನಾಡಿನ ಭವ್ಯ ಪರಂಪರೆಯನ್ನು ವೈಶಿಷ್ಟ್ಯವನ್ನು ಕಂಡು ಹೆಮ್ಮೆ ಪಡುತ್ತೇನೆ. ಈ ನಾಡಿನ ಹಿರಿಮೆಯನ್ನು ಹೆಚ್ಚಿಸಲು ಅನವರತ ದುಡಿಯುತ್ತೇನೆ.

ನನ್ನ ತಂದೆ ತಾಯಿಯರು, ಶಿಕ್ಷಕರು ಮತ್ತು ಹಿರಿಯರನ್ನು ನಾನು ಗೌರವಿಸುತ್ತೇನೆ. ಎಲ್ಲರೊಡನೆಯೂ ಪ್ರೀತಿ ಹಾಗೂ ಗೌರವದಿಂದ ನಡೆದುಕೊಳ್ಳುತ್ತೇನೆ. ನನ್ನ ನಾಡಿಗೂ, ನನ್ನ ನಾಡಿನ ಪ್ರಜೆಗಳಿಗೂ ಸೇವೆ ಮಾಡಲು ಮುಂದೆ ನಿಲ್ಲುತ್ತೇನೆ. ಅವರು ಏಳಿಗೆಯನ್ನೂ, ಸಮೃದ್ಧಿಯನ್ನೂ ಹೊಂದುವುದನ್ನು ಕಂಡು ನಾನು ಅತ್ಯಾನಂದ ಪಡುತ್ತೇನೆ.

## ರಾಷ್ಟ್ರೀಯ ಸಮಗ್ರತೆಯ ಪ್ರತಿಜ್ಞೆ

ರಾಷ್ಟ್ರದ ಸ್ವಾತಂತ್ರ್ಯ ಮತ್ತು ಒಗ್ಗಟ್ಟನ್ನು ಕಾಪಾಡುವ ಮತ್ತು ಬಲಪಡಿಸುವ ಕಾರ್ಯದಲ್ಲಿ ನಾನು ನನ್ನನ್ನು ಅರ್ಪಿಸಿಕೊಳ್ಳುತ್ತೇನೆ ಎಂದು ಹೃತ್ಪೂರ್ವಕವಾಗಿ ಪ್ರತಿಜ್ಞೆ ಮಾಡುತ್ತೇನೆ. ಅಲ್ಲದೆ ಎಂದೂ ನಾನು ಹಿಂಸೆಗೆ ಆಸ್ಪದ ಕೊಡುವುದಿಲ್ಲವೆಂದೂ, ಮತೀಯ, ಭಾಷಿಕ, ಪ್ರಾದೇಶಿಕ ಅಥವಾ ರಾಜಕೀಯ ಅಥವಾ ಆರ್ಥಿಕ ಸಂಕಷ್ಟಗಳ ಸಂದರ್ಭಗಳಲ್ಲಿ ಬರುವ ಎಲ್ಲ ಭಿನ್ನಾಭಿಪ್ರಾಯಗಳು ಮತ್ತು ವಿವಾದಗಳು ಶಾಂತಿಯುತವಾಗಿಯೂ ಸಂವಿಧಾನಕ್ಕನುಸಾರವಾಗಿಯೂ ಪರಿಹರಿಸಲ್ಪಡಬೇಕೆಂದೂ ದೃಢಪಡಿಸುತ್ತೇನೆ.



## ತಮಿಳ್‌ತಾಯ್ ವಾಳ್ತು

ನೀರಾರುಂ ಕಡಲುಡುತ್ತ ನಿಲಮಡಂದೈಕ್ಕೆಳಿಲೊಳುಗುಂ
ಸೀರಾರುಂ ವದನಮೆನತ್ತಿಗಳ್ ಭರತ ಖಂಡಮಿದಿಲ್
ತೆಕ್ಕಣಮುಂ ಅದಿಲ್ ಸಿರಂದ ದ್ರಾವಿಡನಲ್ ತಿರುನಾಡುಂ
ತಕ್ಕಸಿರು ಪಿರೈನುದಲುಂ ತರತ್ತನರುಂ ತಿಲಕಮುಮೇ
ಅತ್ತಿಲಕವಾಸನೈಪೋಲ್ ಅನೈತ್ತುಲಗುಂ ಇನ್ಬಮುರ
ಎತ್ತಿಸೈಯುಂ ಪುಗಳ್ ಮಣಕ್ಕ ಇರುಂದು ಪೆರುಂತಮಿಳಣಂಗೇ!
ತಮಿಳಣಂಗೇ!
ಉನ್ ಸೀರಿಳಮೈತ್ತಿರಂವಿಯಂದು
ಸೆಯಲ್ ಮರಂದು ವಾಳ್ತುದುಮೇ!
ವಾಳ್ತುದುಮೇ!
ವಾಳ್ತುದುಮೇ!

**- ಮನೋನ್ಮಣೀಯಂ ಪಿ. ಸುಂದರಂ ಪಿಳ್ಳೈ**

## ನಾಡಗೀತೆ

ಜಯ್ ಭಾರತ ಜನನಿಯ ತನುಜಾತೆ
ಜಯ ಹೇ ಕರ್ನಾಟಕ ಮಾತೆ!
ಜಯ ಸುಂದರ ನದಿವನಗಳ ನಾಡೆ
ಜಯ ಹೇ ರಸಋಷಿಗಳ ಬೀಡೆ

ಭೂದೇವಿಯ ಮಕುಟದ ನವಮಣಿಯೇ
ಗಂಧದ ಚಂದದ ಹೊನ್ನಿನ ಗಣಿಯೆ
ರಾಘವ ಮಧುಸೂದನರವತರಿಸಿದ
ಭಾರತ ಜನನಿಯ ತನುಜಾತೆ
ಜಯ ಹೇ ಕರ್ನಾಟಕ ಮಾತೆ

ಜನನಿಯ ಜೋಗುಳ ವೇದದ ಘೋಷ
ಜನನಿಗೆ ಜೀವವು ನಿನ್ನಾವೇಶ,
ಹಸುರಿನ ಗಿರಿಗಳ ಸಾಲೆ
ನಿನ್ನಯ ಕೊರಳಿನ ಮಾಲೆ
ಕಪಿಲ ಪತಂಜಲ ಗೌತಮ ಜಿನನುತ
ಭಾರತ ಜನನಿಯ ತನುಜಾತೆ
ಜಯ ಹೇ ಕರ್ನಾಟಕ ಮಾತೆ

ಶಂಕರ ರಾಮಾನುಜ ವಿದ್ಯಾರಣ್ಯ
ಬಸವೇಶ್ವರ ಮಧ್ವರ ದಿವ್ಯಾರಣ್ಯ
ರನ್ನ ಷಡಕ್ಷರಿ ಪೊನ್ನ
ಪಂಪ ಲಕುಮಿಪತಿ ಜನ್ನ
ಕಬ್ಬಿಗರುದಿಸಿದ ಮಂಗಳಧಾಮ
ಕವಿಕೋಗಿಲೆಗಳ ಪುಣ್ಯಾರಾಮ
ನಾನಕ ರಾಮಾನಂದ ಕಬೀರರ
ಭಾರತ ಜನನಿಯ ತನುಜಾತೆ
ಜಯಹೇ ಕರ್ಣಾಟಕ ಮಾತೆ

ತೈಲಪ ಹೊಯ್ಸಳರಾಳಿದ ನಾಡೆ,
ಡಂಕಣ ಜಕಣರ ನೆಚ್ಚಿನ ಬೀಡೆ
ಕೃಷ್ಣ ಶರಾವತಿ ತುಂಗ
ಕಾವೇರಿಯ ವರರಂಗ
ಚೈತನ್ಯ ಪರಮಹಂಸ ವಿವೇಕರ
ಭಾರತ ಜನನಿಯ ತನುಜಾತೆ
ಜಯ ಹೇ ಕರ್ಣಾಟಕ ಮಾತೆ

ಸರ್ವಜನಾಂಗದ ಶಾಂತಿಯ ತೋಟ
ರಸಿಕರ ಕಂಗಳ ಸೆಳೆಯುವ ನೋಟ
ಹಿಂದೂ ಕ್ರೈಸ್ತ ಮುಸಲ್ಮಾನ
ಪಾರಸಿಕ ಜೈನರುದ್ಯಾನ
ಜನಕನ ಹೋಲುವ ದೊರೆಗಳ ಧಾಮ
ಗಾಯಕವೈಣಿಕರಾರಾಮ
ಕನ್ನಡ ನುಡಿ ಕುಣಿದಾಡುವ ಗೇಹ
ಕನ್ನಡ ತಾಯಿಯ ಮಕ್ಕಳ ದೇಹ
ಜಯ್ ಭಾರತ ಜನನಿಯ ತನುಜಾತೆ
ಜಯ ಹೇ ಕರ್ಣಾಟಕ ಮಾತೆ

**- ಕುವೆಂಪು**

ಭಾರತ ಮಾತೆಯ ಮುಂದೆ ವಿದ್ಯಾರ್ಥಿ/ವಿದ್ಯಾರ್ಥಿನಿಯಾದ ನಾನು ಕೈಗೊಳ್ಳುವ ಪ್ರತಿಜ್ಞೆ.

ಹೆಸರು : ತರಗತಿ :

ಶಾಲೆ :

ನಾನು ಒಬ್ಬ ಭಾರತೀಯ, ಜಾತಿ, ಮತಭೇದಗಳನ್ನು ತೊರೆದು ಶಾಲಾ ಶಿಕ್ಷಣದ ಮೂಲಕ ಪಡೆಯುವ ಒಳ್ಳೆಯ ಗುಣಗಳನ್ನು ನನ್ನ ತಾಯ್ನಾಡಿನ ಶ್ರೇಯಸ್ಸಿಗಾಗಿ ಉಪಯೋಗಿಸುತ್ತೇನೆ.

ವಂದೇ ಮಾತರಂ. ಸಹಿ:



# ಮುನ್ನುಡಿ

ತಮಿಳುನಾಡಿನ ಶಾಲೆಗಳಲ್ಲಿ ಹನ್ನೊಂದನೆಯ ತರಗತಿಯಲ್ಲಿ ಕಲಿಯುವ ಅಲ್ಪಸಂಖ್ಯಾತ ಕನ್ನಡ ಮಕ್ಕಳ ಉಪಯೋಗಕ್ಕಾಗಿ ತಮಿಳು ಸರಕಾರವು ಈ ಪುಸ್ತಕವನ್ನು ಪ್ರಕಟಿಸಿದೆ. ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸ ಹೊರೆಯಾಗಬಾರದೆಂಬ ಉದ್ದೇಶದಿಂದ ಪಠ್ಯ ಪುಸ್ತಕ ಹಾಗೂ ಪಾಠಗಳ ಪ್ರಮಾಣವನ್ನು ಕಡಿಮೆಗೊಳಿಸಿ ತರಗತಿಯೊಳಗಿನ ಚಟುವಟಿಕೆಗಳಿಗೆ ಹೆಚ್ಚಿನ ಗಮನ ಹರಿಸಲಾಗಿದೆ. ಗ್ರಾಮೀಣ ಹಾಗೂ ನಗರ ಪ್ರದೇಶದಲ್ಲಿರುವ ಮಕ್ಕಳ ಆಸಕ್ತಿಗೆ ಅನುಕೂಲವಾಗಿ ಪಾಠಗಳನ್ನು ಯೋಜಿಸಲಾಗಿದೆ. ತಮಿಳುನಾಡು ಮತ್ತು ಕರ್ನಾಟಕ ರಾಜ್ಯಗಳ ಹಿರಿಮೆಯನ್ನು ಪ್ರತಿಬಿಂಬಿಸುವಂತಹ ಸಂಸ್ಕೃತಿ, ಸಾಹಿತ್ಯ ಹಾಗೂ ಇತಿಹಾಸಗಳಿಗೆ ಸಂಬಂಧಪಟ್ಟ ಲೇಖನ ಹಾಗೂ ವ್ಯಕ್ತಿ ಚಿತ್ರಗಳು ಇಲ್ಲಿವೆ. ಸಣ್ಣಕಥೆ, ಲಲಿತ ಪ್ರಬಂಧ, ಪರಿಸರ ಪ್ರಜ್ಞೆ, ಕ್ರೀಡೆ, ಆರೋಗ್ಯ ಶಿಕ್ಷಣ, ಮಾನವ ವಿಕಾಸ, ತಾಂತ್ರಿಕ ವಿಜ್ಞಾನ, ವೈಚಾರಿಕತೆ ಮುಂತಾದ ಪ್ರಚಲಿತ ವಿಷಯಗಳಿಗೆ ಸಂಬಂಧಿಸಿದ ಲೇಖನಗಳಿಗೆ ಇಲ್ಲಿ ಮಹತ್ವ ನೀಡಲಾಗಿದೆ. ಪ್ರವಾಸ ಕಥನ ಹಾಗೂ ನಾಟಕದ ಭಾಗವನ್ನೂ ಈ ಪಠ್ಯಪುಸ್ತಕ ಒಳಗೊಂಡಿದೆ. ಪದ್ಯ ಭಾಗದಲ್ಲಿ ಹಳಗನ್ನಡ, ನಡುಗನ್ನಡ ಹಾಗೂ ಹೊಸಗನ್ನಡದ ಪ್ರಮುಖ ಕವಿಗಳ ಕಾವ್ಯಭಾಗ ಮತ್ತು ಕವನಗಳಿಗೆ ಸಮಾನ ಸ್ಥಾನವನ್ನು ನೀಡಲಾಗಿದೆ. ಪ್ರತಿಯೊಂದು ಪಾಠದ ಕೊನೆಯಲ್ಲಿ ವಿದ್ಯಾರ್ಥಿಗಳ ಭಾಷಾ ಸಾಮರ್ಥ್ಯವನ್ನು ಪರೀಕ್ಷಿಸಲು ಅಭ್ಯಾಸ ಪ್ರಶ್ನೆಗಳನ್ನು ಕೊಡಲಾಗಿದೆ. ಪಠ್ಯ ಪುಸ್ತಕದ ಕೊನೆಯಲ್ಲಿ ವಿದ್ಯಾರ್ಥಿಗಳಿಗೆ ಅನುಕೂಲವಾಗುವಂತೆ ವ್ಯಾಕರಣ, ಛಂದಸ್ಸು, ಅಲಂಕಾರ ಮುಂತಾದವುಗಳನ್ನು ಸಂಕ್ಷಿಪ್ತವಾಗಿ ಕೊಡಲಾಗಿದೆ. ಭಾಷೆಗೆ ಸಂಬಂಧಿಸಿದಂತೆ ವಿದ್ಯಾರ್ಥಿಗಳ ವಿವಿಧ ರೀತಿಯ ಸಾಮರ್ಥ್ಯಗಳನ್ನು ಹೆಚ್ಚಿಸುವ ಅಂಶಗಳಿಗೆ ಪಠ್ಯವಸ್ತುವಿನಲ್ಲಿ ವಿಶೇಷ ಗಮನ ಹರಿಸಲಾಗಿದೆ.

ಭಾಷೆಯ ನಾನಾಬಗೆಯ ಸೂಕ್ಷ್ಮತೆಗಳು, ಅರ್ಥವಿಸ್ತಾರಗಳು, ವ್ಯಾಕರಣಾಂಶಗಳು ಹಾಗೂ ಉಪಯೋಗಗಳ ಬೋಧನೆಯು ಉಚಿತವಾದ ಸಾಹಿತ್ಯ ಪಾಠಗಳ ಮೂಲಕವೇ ನಡೆಯಬೇಕು. ಪಠ್ಯಪುಸ್ತಕ ಬೋಧನೆ, ಪ್ರಶ್ನೆ ಪತ್ರಿಕೆ ಮತ್ತು ಮೌಲ್ಯಮಾಪನಗಳ ನಡುವೆ ನೇರವಾದ ಮತ್ತು ಅರ್ಥಪೂರ್ಣವಾದ ಸಂಬಂಧವಿರಬೇಕು. ಕನ್ನಡವನ್ನು ವಿವಿಧೋದ್ದೇಶಗಳಿಗಾಗಿ ಬಳಸುತ್ತಿರುವುದರಿಂದಲೂ ಇನ್ನಷ್ಟು ವ್ಯಾಪಕವಾಗಿ ಬಳಸಬೇಕಾಗಿರುವುದರಿಂದಲೂ ಪಠ್ಯಭಾಗಗಳ ವಿಷಯ ಹಾಗೂ ನಿರೂಪಣೆಯ ದೃಷ್ಟಿಯಿಂದ ಸಾಧ್ಯವಿದ್ದಷ್ಟೂ ವೈವಿಧ್ಯ ಪೂರ್ಣವಾಗಿರುವಂತೆ ನೋಡಿಕೊಳ್ಳಲಾಗಿದೆ.

ತಮಿಳುನಾಡಿನ ವಿವಿಧ ಶಾಲೆ, ಕಾಲೇಜು ಹಾಗೂ ವಿದ್ಯಾಸಂಸ್ಥೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ನುರಿತ ಅಧ್ಯಾಪಕರ ನೆರವಿನಿಂದ ಈ ಪಠ್ಯಪುಸ್ತಕವನ್ನು ರಚಿಸಲಾಗಿದೆ. ಈ ಪಠ್ಯ ಪುಸ್ತಕದ ಸಿದ್ಧತೆಯಲ್ಲಿ ಸಹಕರಿಸಿದ ಎಲ್ಲರಿಗೂ ಕೃತಜ್ಞತೆಗಳು.

**ಡಾ। ಶ್ರೀಕೃಷ್ಣಭಟ್ ಅರ್ತಿಕಜೆ**

ಅಧ್ಯಕ್ಷರು, ಕನ್ನಡ ಪಠ್ಯಪುಸ್ತಕ ರಚನಾ ಸಮಿತಿ

ಹನ್ನೊಂದನೆಯ ತರಗತಿ

# ಪರಿವಿಡಿ

# ಗದ್ಯ ಭಾಗ

## 1. ದಿವಾನಖಾನೆಯ ಅಂದಚೆಂದ

**- ಎ.ಎನ್. ಮೂರ್ತಿರಾವ್**

ಇತ್ತೀಚೆಗೆ ನನ್ನ ಸ್ವಂತ ದಿವಾನಖಾನೆಯನ್ನು ಪ್ರವೇಶಿಸುವ ಧೈರ್ಯ ನನಗೇ ಇಲ್ಲ. ಸ್ವಲ್ಪ ಮಟ್ಟಿಗೆ ನಾನೇ ಸಂಪಾದಿಸಿದ, ಬಹುಮಟ್ಟಿಗೆ ಇತರರ ಸಂಪಾದನೆಯಿಂದ ಸಾಲ ತಂದ — ಅಂತೂ ಶ್ರಮದಿಂದ ಒಟ್ಟುಗೂಡಿಸಿದ ಹಣವನ್ನು ಹುರುಳಿಯ ಕಾಳಿನಂತೆ ಚೆಲ್ಲಿ , ಮಳೆಯೆನ್ನದೆ ಬಿಸಿಲೆನ್ನದೆ ನಿಂತು ಒಂದೊಂದು ಇಟ್ಟಿಗೆಯನ್ನು ಜೋಡಿಸುವಾಗಲೂ ಎಲ್ಲಿ ಕೆಟ್ಟುಹೋಗುವುದೋ ಎಂದು ಆತಂಕಪಟ್ಟು , ಆ ಮನೆಯಲ್ಲಿ ನನಗೆ ಸುಖವುಂಟೆಂಬ ಭ್ರಾಂತಿಯಿಂದ ಅದನ್ನು ಕಟ್ಟಿದ್ದಾಯಿತು. ಆ ದಿವಾನಖಾನೆಯಂತೂ ನನಗಾಗಿ ನನ್ನೊಬ್ಬನಿಗಾಗಿ ಮಾತ್ರ ಕಟ್ಟಿದ್ದು. ಬೀದಿಯ ಮತ್ತು ಮನೆಯ ಗಲಭೆಯಿಂದ ದೂರವಾಗಿರಲೆಂದು ಮಹಡಿಯ ಮೇಲೆ ಕಟ್ಟಿದ ಕೊಠಡಿ — ಅದಕ್ಕಾಗಿ ನಾನು ವಹಿಸಿದ ಶ್ರಮವೆಷ್ಟು , ಸುರಿದ ಹಣವೆಷ್ಟು ! ಅಂತರಿಕ್ಷದಲ್ಲಿ ಯಾವ ದಿಕ್ಕಿನಿಂದ ಗಾಳಿ ಬೀಸಿದರೂ ಅದು ನನ್ನ ಕೊಠಡಿಯನ್ನು ತಂಪು ಮಾಡದಿರುವುದಿಲ್ಲ. ಮಳೆ ಬಿಸಿಲುಗಳ ಹೊಡೆತವನ್ನು ತಡೆಯುವಂತೆ ಸುತ್ತಲೂ ಪಡಸಾಲೆಗಳು. ಕೊಠಡಿಯಲ್ಲಿ ಕುಳಿತು ಪೂರ್ವಕ್ಕೂ ಉತ್ತರಕ್ಕೂ ತಿರುಗಿ ನೋಡಿದರೆ ಒಂದು ಕಡೆ ಚಾಮುಂಡಿಯ ಬೆಟ್ಟ ; ನಡುವೆ ದೂರದಲ್ಲಿ ಕರೀಘಟ್ಟದ ಶ್ರೇಣಿ; ಇನ್ನೊಂದು ಕಡೆ ಬೆಚ್ಚನೆಯ ಬಿಸಿಲಿನಲ್ಲಿ ಮೆಲುಕುಹಾಕುವ ಬಸವನಂತೆ, ತನಗೆ ಸಹಜವಾದ ಕ್ರೌರ್ಯವನ್ನು ಮರೆತು ಶಾಂತ ಮುದ್ರೆಯಿಂದ ನಿದ್ರಿಸುವ ಸಿಂಹದಂತೆ ಹಿರೋಡೆಯ ಬೆಟ್ಟಗಳು. ಅಲ್ಲಿಂದ ಎಡಕ್ಕೆ ತಿರುಗಿದರೆ ನಸುನೀಲಿಯ ಬಣ್ಣದಿಂದ ಕಂಗೊಳಿಸುತ್ತ ನನ್ನ ಕುಲದೈವದ ವಾಸದಿಂದ ಪವಿತ್ರವಾದ ಯದುಗಿರಿ. ನನಗೂ ಈ ಬೆಟ್ಟಗಳಿಗೂ ನಡುವೆ ಹಸುರು ಹೊಲಗಳ, ತೆಂಗಿನ ತೋಟಗಳ, ನಾನಾ ವಿಧವಾದ ಗಿಡಮರಗಳ, ವಿಶಾಲವಾದ ಕಣಿವೆ. ಇದೆಲ್ಲವನ್ನೂ ಕೊಠಡಿಯೊಳಗಿನಿಂದಲೇ ನೋಡುವಂತೆ ಬಿಸಿಲು ಮಚ್ಚು ಮಾಡಿಸಿ ಆ ಕಡೆಗೆ ದೊಡ್ಡ ಬಾಗಿಲನ್ನಿಟ್ಟಿದ್ದೇನೆ. ನನ್ನ ಭಾಗಕ್ಕೆ ಮನೆಯೆಂದರೆ ಇದೊಂದು ಕೊಠಡಿ ಮಾತ್ರ. ಅಡಿಗೆಮನೆ, ಊಟದ ಮನೆ, ಮೊದಲಾದುವು —ಇರಬೇಕೇನೊ,

ಇದ್ದುಕೊಳ್ಳಲಿ. ನನ್ನ ಜೀವನ ಬಹುಮಟ್ಟಿಗೆ ಇದೊಂದು ಕೊಠಡಿಯಲ್ಲೇ ಸಾಗುತ್ತದೆ.

ಹೀಗೆ ನನ್ನ ಮನಸ್ಸನ್ನು ತುಂಬಿ ಹೃದಯವನ್ನಾಕ್ರಮಿಸಿರುವ ಕೊಠಡಿಗೇ ಈಗ ಪ್ರವೇಶವಿಲ್ಲ. ಬಾಗಿಲಿನಲ್ಲಿ ದವಾಲಿ ಧರಿಸಿದ ಚಪ್ರಾಸಿಯೊಬ್ಬ ನಿಂತು ನನ್ನನ್ನು ತಡೆಯುತ್ತಾನೆಂದಲ್ಲ ; ಆ ಅನುಭವ ಬೇರೆ ಕಡೆ ಆಗಿದೆ ; ನನ್ನ ಮನೆಯಲ್ಲೂ ಇತರರಿಗೆ ಆಗಲೆಂಬ ತುಚ್ಛ ಬಯಕೆ ಆಗಾಗ ಮನಸ್ಸಿನಲ್ಲಿ ಸುಳಿದಿರಬಹುದು. ಗೃಹಾಧಿದೇವತೆ ಲಲಿತಾದೇವಿ ಬಾಗಿಲಿಗೆ ಬೀಗಮುದ್ರೆ ಮಾಡಿದ್ದಾಳೆಂದೂ ಅಲ್ಲ. ಅವಳು ಅಧಿಕಾರ ಚಲಾಯಿಸುವ ರೀತಿ ಪರಿಣಾಮಕಾರಿಯಾದರೂ ಅಷ್ಟು ಅನಾಗರಿಕವಲ್ಲ ಅಥವಾ ಕೊಠಡಿ ಅವ್ಯವಸ್ಥಿತವಾಗಿದ್ದು ಅದರೊಳಕ್ಕೆ ಹೋಗುವುದು ಬೇಸರವಾಗುತ್ತದೆಂದೂ ಅಲ್ಲ — ಅದರ ಅಂದಚೆಂದ ಹೇಳತೀರದು. ವಾಸ್ತವವಾಗಿ ನೋಡಿದರೆ ಅದರ ಸೌಂದರ್ಯವೇ ಒಂದು ದುಷ್ಟ ಶಕ್ತಿಯಾಗಿ ಪರಿಣಮಿಸಿ ನನ್ನನ್ನು ಹೊರದೂಡಿದೆ.

ಈ ಪರಿಸ್ಥಿತಿ ಏಕಾಏಕಿ ಒದಗಲಿಲ್ಲ. ಮನೆ ಕಟ್ಟಿದ ಮೇಲೆ ಕೈಬರಿದಾಗಿ ನಾನು ಫರ್ನಿಚರ್ ಕೊಳ್ಳುವ ಗೊಡವೆಗೆ ಹೋಗಲಿಲ್ಲ. ಮನೆಯಲ್ಲಿದ್ದ ಮೂರು ಸುಂದರ್ ಕುರ್ಚಿಗಳ ಮೇಲೆ ಸಣ್ಣ ಮೆತ್ತೆಗಳನ್ನು ಹಾಕಿಸಿದರೆ ಅವೇ ಸೋಫಾದ ಕರ್ತವ್ಯವನ್ನು ನಿರ್ವಹಿಸಬಹುದೆನ್ನಿಸಿತು. ನಮ್ಮ ತಂದೆಯ ಕಾಲದಿಂದಲೂ ಬಂದ ದೊಡ್ಡ ಮೇಜೊಂದಿದೆ. ಅದರ ಮೇಲೆ ಖಾದಿ ವಸ್ತ್ರವನ್ನು ಹರಡಿದರೆ ಇತ್ತ ಯಥಾಶಕ್ತಿ ದೇಶಸೇವೆಯಾಯಿತು, ಗಾಂಧಿ ತತ್ವಕ್ಕೆ ಮನ್ನಣೆ ಕೊಟ್ಟಂತಾಯಿತು. ಅತ್ತ ಸುಲಭದ ಖರ್ಚಿನಲ್ಲಿ ಮೆರುಗಿಲ್ಲದ ಮರವನ್ನು ಮುಚ್ಚಿ ಗೌರವ ಉಳಿಸಿಕೊಂಡಂತಾಯಿತು. ನಯವಾಗಿ ಸಿಮೆಂಟು ಮಾಡಿಸಿ ಬಣ್ಣದ ಹೆಂಚುಗಳಿಂದ ಅಂಚುಕಟ್ಟಿರುವ ನೆಲವಿರುವಾಗ ಅದಕ್ಕೆ ಜಮಖಾನೆಯ ಅವಶ್ಯಕತೆಯೇನೂ ಇಲ್ಲ. ಜಮಖಾನೆಯಿದ್ದರೆ ಅದರಲ್ಲಿ ಬಂಡಿಗಟ್ಟಲೆ ಧೂಳು ಸೇರಿಕೊಳ್ಳುತ್ತದೆ. ಅದನ್ನು ಪದೇ ಪದೇ ಬಡಿದು ಹಾಕುವುದು ಕಷ್ಟ. ಹಾಗೆ ಬಡಿಯುವಾಗ ಧೂಳು ಕುಡಿದು ಎಷ್ಟೋ ಜನರಿಗೆ ಕ್ಷಯರೋಗ ಬಂದಿದೆಯಂತೆ — ನಮ್ಮ ಮನೆಯವರ ಶ್ವಾಸಕೋಶ ಅಷ್ಟೇನೂ ಗಟ್ಟಿಮುಟ್ಟಾದದ್ದಲ್ಲ !..... ಕೈಯಲ್ಲಿ ಹಣವಿಲ್ಲದಿರುವಾಗ ಸರಳ ಜೀವನದ ಪರವಾಗಿ ಈ ಬಗೆಯ ವಾದ ಹೂಡುವುದೇನೂ ಕಷ್ಟವಲ್ಲ.

ಹಲವಾರು ವರ್ಷ ಹೀಗೆಯೇ ಕಳೆದ ಮೇಲೆ ಒಂದು ದಿನ ಲಲಿತೆ ನನಗೆ ಪರಿಚಿತರಾದವರೊಬ್ಬರ ಮನೆಗೆ ಅರಿಸಿನ ಕುಂಕುಮಕ್ಕೆ ಹೋಗಬೇಕಾಗಿ ಬಂತು.



ಅವರು ಯುದ್ಧ ಕಾಲದಲ್ಲಿ ತಮ್ಮ ಹುದ್ದೆಗೆ ರಾಜಿನಾಮೆಯನ್ನು ಕೊಟ್ಟು ದೇಶವನ್ನು ಹಿಟ್ಲರ್, ಟೋಜೋ, ಮೊದಲಾದ ನರರಾಕ್ಷಸರಿಂದ ಪಾರುಮಾಡಬೇಕೆಂಬ ಘನೋದ್ದೇಶದಿಂದ ಯುದ್ಧ ಕಾರ್ಯಗಳಿಗೆ ನೆರವಾಗಿ ನಿಂತರು. ಮಿಲಿಟೆರಿ ಕಂಟ್ರಾಕ್ಟು ಹಿಡಿಯುವುದೇ ಅವರ ಸೇವಾ ಕ್ಷೇತ್ರ. ದೇಶವು ಯುದ್ಧ ಪಾತಕಿಗಳ ಪಿಶಾಚಮುಷ್ಟಿಯಿಂದ ಪಾರಾಗುತ್ತ ಬಂದ ಹಾಗೆಲ್ಲಾ ರಾಯರೂ ಬಡತನದಿಂದ ಪಾರಾಗುತ್ತ ಬಂದರು — ಅವರು ಯಾವಾಗಲೂ ಸ್ವಾಮಿಕಾರ್ಯಕ್ಕೂ ಸ್ವಕಾರ್ಯಕ್ಕೂ ಭೇದ ಕಲ್ಪಿಸಿದವರಲ್ಲ. ನಮ್ಮಲ್ಲಿ ಹುದುಗಿರುವ ಸದ್ಗುಣಗಳೂ ತೇಜಸ್ಸೂ ಯುದ್ಧ ಕಾಲದಲ್ಲಿ ಹೊರಹೊಮ್ಮಿ ದುಸ್ಸಾಧ್ಯವಾದ ಕೆಲಸಗಳನ್ನು ಸುಲಲಿತವಾಗಿ ಸಾಗಿಸುತ್ತವಷ್ಟೆ. ಅಂತೆಯೇ ರಾತ್ರಿ ಕೇವಲ ಗುಮಾಸ್ತೆಯಾಗಿದ್ದ ರಾಯರು ಬೆಳಗ್ಗೆ 'ಕೈಗಾರಿಕೆಯ ಕ್ಯಾಪ್ಟನ್' ಆದರು; ತಮ್ಮ ಹೊಸ ಅಂತಸ್ತಿಗೆ ತಕ್ಕಂತೆ ದೊಡ್ಡ ಮನೆಯನ್ನು ಕಟ್ಟಿ ಅದನ್ನು ತಮಗೆ ಮೆಚ್ಚಿದ ರೀತಿಯಲ್ಲಿ ಅಳವಡಿಸಿದರು. ಲಲಿತೆ ಅವರ ಮನೆಗೆ ಹೋದ ದಿನ ರಾಯರ ಪತ್ನಿ ತಮ್ಮ ದಿವಾನಖಾನೆಯನ್ನು ಬಹಳ ಹೆಮ್ಮೆಯಿಂದ ತೋರಿಸಿದರಂತೆ. ಆ ವಿಷಘಳಿಗೆಯಿಂದ ನನ್ನ ಸಂಕಟ ಪ್ರಾರಂಭವಾಯಿತು.

ಮನೆಗೆ ಬರುವ ಹೊತ್ತಿಗೆ ಲಲಿತೆಗೆ ಹಲವು ವಿಷಯಗಳಲ್ಲಿ ಜ್ಞಾನೋದಯವಾಗಿತ್ತು. ನನಗೆ ಮುನ್ನೂರು ರೂಪಾಯಿನ ಸಂಬಳವಿದೆ, ಅದಕ್ಕನುಗುಣವಾದ ಸ್ಥಾನಮಾನಗಳಿವೆ, ಎನ್ನುವುದು ಅವಳ ಗಮನಕ್ಕೆ ಅಷ್ಟಾಗಿ ಬಂದಿರಲಿಲ್ಲ. ಈಗ ಅವಳ ಕಣ್ಣು ತೆರೆಯಿತು. ಯೋಗ್ಯತೆಗೆ ಸರಿಯಾಗಿ ನಮ್ಮ ಜೀವನದ ಮಟ್ಟ ಏರಬೇಡವೇ ? ಮೂರುವರೆ ರೂಪಾಯಿನ ಸುಂದರ್ ಕುರ್ಚಿಗಳು, ಜನಮೇಜಯರಾಯ ಹಸುಗೂಸಾಗಿದ್ದ ಕಾಲದಲ್ಲಿ ಮಾಡಿಸಿದ ಮೇಜವೊಂದು — ಇಷ್ಟೇ ನಮ್ಮ ಮನೆಯಲ್ಲಿದ್ದ ಚರಸ್ವತ್ತು ! ಯಾರಾದರೂ ಮನೆಗೆ ಬಂದಾಗ ಕೂರಿಸುವುದಕ್ಕೆ ಸರ್ವದಾ ಅಚ್ಚುಕಟ್ಟಾಗಿ ಅಲಂಕರಿಸಿದ ಕೊಠಡಿಯೊಂದಿರಬೇಡವೆ ? ಸ್ನೇಹಿತರು ಬಂದರೆ ಯಾವ ಮುಖದಿಂದ ಅವರನ್ನು ಒಳಕ್ಕೆ ಕರೆಯುತ್ತೇನೋ ? ರಾಯರ ಮನೆಯ ದಿವಾನಖಾನೆಯನ್ನು ನೋಡಬಾರದೆ ! ಅವರು ನನ್ನಷ್ಟು ಓದಿದವರಲ್ಲವಾದರೂ ಮನೆಯನ್ನು ಅದೆಷ್ಟು ಲಕ್ಷಣವಾಗಿಟ್ಟುಕೊಂಡಿದ್ದಾರೆ ! ಈ ಅವಸ್ಥೆಯಲ್ಲಿಟ್ಟುಕೊಳ್ಳುವ ಭಾಗ್ಯಕ್ಕೆ ನಾವು ಅಷ್ಟು ದೊಡ್ಡ ಮನೆಯನ್ನು ಕಟ್ಟಿದ್ದಾದರೂ ಏಕೆ ? ಇದನ್ನೆಲ್ಲಾ ನಾನು ಮೌನವಾಗಿ ಕೇಳಿದೆ. ಅವಳ ಮಾತು ನ್ಯಾಯವಾಗಿಯೇ ತೋರಿತು. ನನ್ನ ಸ್ನೇಹಿತರೆಲ್ಲಾ ನಾನು

ಕಾಸುಗಳ್ಳನೆಂದೇ ತಿಳಿದಿರಬೇಕು. ಏನೋ ಮರ್ಯಾದಸ್ಥರಾದ್ದರಿಂದ ಬಾಯಲ್ಲಿ ಆಡದೆ ಸುಮ್ಮನಿದ್ದಾರೆ. ಇನ್ನು ಮುಂದಾದರೂ ಮನೆಯ ಶೃಂಗಾರದ ಕಡೆಗೆ ಸ್ವಲ್ಪ ಗಮನಕೊಡಬೇಕೆಂದು ನಿಶ್ಚಯಿಸಿದೆ!

ಅದುವರೆಗೆ ನನ್ನ ದಿವಾನಖಾನೆಯ ಗೋಡೆಗಳು ಸುಣ್ಣ ತೊಡೆದದ್ದೊಂದು ಹೊರತು ಬೇರೆ ಯಾವ ಉಪಚಾರವನ್ನೂ ಕಂಡಿರಲಿಲ್ಲ. ಆದರೆ ಸುಣ್ಣ ತೊಡೆದ ಗೋಡೆಗಳು ಮುನ್ನೂರು ರೂಪಾಯಿ ಸಂಬಳ ತರುವವನ ಅಂತಸ್ತಿಗೆ ತೀರ ಕಡಮೆಯೆಂದು ಈಗ ಸ್ಪಷ್ಟವಾಯಿತು. ಗುಮಾಸ್ತರ ಮನೆಗಳಲ್ಲೂ ಸುಣ್ಣ ತೊಡೆದಿರುತ್ತಾರೆಂದ ಮೇಲೆ ನನ್ನ ಹೆಚ್ಚುಗಾರಿಕೆಯೇನಾಯಿತು ? ಆದ್ದರಿಂದ ಆ ಸುಣ್ಣವನ್ನೆಲ್ಲಾ ಉಜ್ಜಿಸಿ ಅದಕ್ಕೆ ಬದಲು ಕಾಲ್ಕೇರಿಯಂ ಹಾಕಿಸುವ ಯೋಚನೆ ಮಾಡಿದೆವು. ‘ಸಿಂಧು’ ಪತ್ರಿಕೆಯ ‘ಗೃಹಶೃಂಗಾರ’ ಭಾಗದಲ್ಲಿ ಯಾರೋ ಮಹಿಳೆ, ಅಥವಾ ಮಹಿಳೆಯ ಹೆಸರಿಟ್ಟುಕೊಂಡ ಮಹನೀಯ ಬರೆದಿದ್ದನಂತೆ — ಸಮುದ್ರದ ಹಸುರಿನ ಬಣ್ಣ ಕಣ್ಣಿಗೆ ಬಹಳ ಒಳ್ಳೆಯದೆಂದು. ಆತನ ಅಭಿಪ್ರಾಯಕ್ಕೆ ತಲೆಬಾಗಿ ನಾವು ಅದೇ ಬಣ್ಣದ ಕಾಲ್ಕೇರಿಯಂ ತರಿಸಿದೆವು. ಸುಣ್ಣದ ಖರ್ಚಿಗಿಂತ ಎಂಟರಷ್ಟು ಹೆಚ್ಚು ಖರ್ಚಾಯಿತು. ಆದರೆ ಒಂದು ಸಾರಿ ತೊಡೆದಮೇಲೆ ಹತ್ತು ವರ್ಷ ಅದರ ಗೊಡವೆಗೆ ಹೋಗಬೇಕಾಗಿಲ್ಲವೆಂದು ‘ಸಿಂಧು’ ಪತ್ರಿಕೆ ಭರವಸೆಕೊಟ್ಟಿತ್ತು. ಕಾಲ್ಕೇರಿಯಂ ಕೆಲಸ ಮುಗಿಯುವುದರೊಳಗೆ ಕೊಠಡಿಯ ಅಳತೆಗೆ ಸರಿಯಾದ ಜಮಖಾನೆಯೂ ಬಂತು. ಇದಾದ ಮೇಲೆ ಫರ್ನಿಚರ್ ಅಂಗಡಿಗೆ ಹೋಗಿ ಇಬ್ಬರು ಕೂಡಬಹುದಾದ ಸೋಫಾ, ಅದೇ ಮಾದರಿಯ ಕುರ್ಚಿಗಳೆರಡು, ಅದಕ್ಕೆ ಹೊಂದುವಂತಿದ್ದ ಟೀಪಾಯಿ, ಕಂಚಿನಲ್ಲಿ ಕುಸುರಿಯ ಕೆಲಸ ಮಾಡಿದ್ದ ಪುಷ್ಪಪಾತ್ರೆ — ನಾನೂರು ರೂಪಾಯಿ ತೆತ್ತು ಇದನ್ನೆಲ್ಲಾ ತಂದೆವು. ಕೊಠಡಿಯ ದಕ್ಷಿಣದ ಗೋಡೆಯನ್ನನುಸರಿಸಿ ಸೋಫಾವನ್ನೂ ಅಕ್ಕಪಕ್ಕದ ಗೋಡೆಗಳಿಗೆ ಸರಿಯಾಗಿ ಎರಡು ಕುರ್ಚಿಗಳನ್ನೂ ಅಣಿಯಾಗಿ ಇಟ್ಟಿದ್ದಾಯಿತು. ಟೀಪಾಯಿ ಕೊಠಡಿಯ ಮಧ್ಯ ಭಾಗವನ್ನು ಅಲಂಕರಿಸಿತು. ಉತ್ತರ ಭಾಗ ಮಾತ್ರ ಸ್ವಲ್ಪ ಬೆತ್ತಲೆಯಾಗಿಯೇ ಕಾಣುತ್ತಿತ್ತು. ಅದರ ಮಾನರಕ್ಷಣೆಗಾಗಿ ಒಂದು ಮೂಲೆಯಲ್ಲಿ ಬೀಟೆಯ ಮರದ ಕಾಲುಮಣೆಯನ್ನಿಟ್ಟು ಅದರ ಮೇಲೆ ನಮ್ಮ ರೇಡಿಯೋ ಯಂತ್ರವನ್ನು ಸ್ಥಾಪನೆ ಮಾಡಿದೆವು. ಅದರ ಬಳಿಯಲ್ಲೇ ಬೀಟೆ ಮರದ ಕುರ್ಚಿಯೊಂದು ಬಂದು ಕೂತಿತು. ಈ ನವನಾಗರಿಕತೆಯ ದಾಳಿಯನ್ನು ಎದುರಿಸಲಾರದೆ ನಮ್ಮ ಸುಂದರ್ ಕುರ್ಚಿಗಳು ಒಳಕೊಠಡಿಗೆ ಹಿಮ್ಮೆಟ್ಟಿದವು. ಮೇಜಿಗಂತೂ ದಿವಾನಖಾನೆಯಲ್ಲಿ



ಸ್ಥಾನವೇ ಇಲ್ಲವಷ್ಟೆ.

ಈ ಏರ್ಪಾಟೆಲ್ಲಾ ನಡೆದದ್ದು ಕೇವಲ ಆ ಘಳಿಗೆಯಲ್ಲಿ ಹುಚ್ಚು ತೋರಿದಂತಲ್ಲ. ಇದಕ್ಕೆಲ್ಲಾ ಆಧಾರಭೂತವಾದ ತತ್ವವೊಂದಿತ್ತು. ‘ಸಿಂಧು’ ಪತ್ರಿಕೆಯಲ್ಲಿ ಲೇಖನ ಬರೆದಿದ್ದಾಕೆ ಹೇಳಿದ್ದಳಂತೆ: ಕೊಠಡಿಯಲ್ಲಿ ಪ್ರತಿಯೊಂದು ಅಂಶವೂ ಉಳಿದವುಗಳಿಗೆ ಹೊಂದಿಕೊಂಡಿರಬೇಕು, ಅದೇ ಸೌಂದರ್ಯದ ಮೂಲ ತತ್ವ ಎಂದು. ನಮ್ಮ ಸೋಫಾ ಮತ್ತು ಕುರ್ಚಿಗಳು ಬೀಟೆಯ ಮರದಲ್ಲಿ ಮಾಡಿದವು: ಆದ್ದರಿಂದ ರೇಡಿಯೋ ಯಂತ್ರವನ್ನಿಟ್ಟಿದ್ದ ಕಾಲುಮಣೆ, ಅದರ ಬಳಿ ಇದ್ದ ಕುರ್ಚಿ, ಟೀಪಾಯಿ, ಎಲ್ಲಾ ಬೀಟೆಯ ಮರದ್ದೇ ಆಗಬೇಕಾಯಿತು. ನನ್ನ ಪುಣ್ಯಕ್ಕೆ ಜಂತಿಗಳೂ ಕಿಟಕಿಯ ಬಾಗಿಲುಗಳೂ ಬೀಟೆಯ ಮರದ್ದೇ ಆಗಬೇಕೆಂದು ಲಲಿತೆ ಹಟ ಹಿಡಿಯಲಿಲ್ಲ. ಇಷ್ಟಾದರೂ ನಮ್ಮ ಹೊಂದುವಣೆಯ ತತ್ವಕ್ಕೆ ಭಂಗ ತರುವ ಅಂಶವೊಂದು ಉಳಿದೇ ಉಳಿಯಿತು — ಗೋಡೆಗಳಿಗೆ ಮೊದಲೇ ಸಮುದ್ರದ ಹಸುರಿನ ಬಣ್ಣ ಹಾಕಿಸಿಬಿಟ್ಟಿದ್ದೆವು. ಆದರೆ ಅದನ್ನು ಸರಿಪಡಿಸಲು ಲಲಿತೆ ಉಪಾಯವೊಂದನ್ನು ಇಟ್ಟಿದ್ದಳು.

ಒಂದು ದಿನ ಸಂಜೆ ನಾನು ಮನೆಗೆ ಬರುವ ಹೊತ್ತಿಗೆ ಕೊಠಡಿಯ ಅಲಂಕಾರ ಕೊನೆಯ ಘಟ್ಟವನ್ನು ದಾಟಿ ಪೂರ್ಣರೂಪವನ್ನು ತಳೆದಿತ್ತು. ಕಿಟಕಿಗಳ ಕೆಳಭಾಗವೆಲ್ಲಾ ಪರದೆಗಳಿಂದ ಮುಚ್ಚಿಹೋಗಿತ್ತು. ಬಾಗಿಲುಗಳಿಂದಲೂ ಪರದೆಗಳು ಇಳಿಯಬಿದ್ದಿದ್ದವು — ಸಮುದ್ರದ ಹಸುರು ಬಣ್ಣದವೆಂದು ಮತ್ತೆ ಹೇಳಬೇಕಾದ್ದಿಲ್ಲ. ಸೋಫಾ, ಕುರ್ಚಿಗಳು, ಟೀಪಾಯಿ ಎಲ್ಲವೂ ಉಡುಪು ಧರಿಸಿದ್ದವು — ಎಲ್ಲಕ್ಕೂ ಅದೇ ಸಮುದ್ರದ ಹಸುರು ಬಣ್ಣದ ಮೇಲಂಗಿ. ಕೊನೆಗೆ ರೇಡಿಯೋ ಯಂತ್ರವೂ ಅದೇ ಬಣ್ಣದ ಕುಲಾವಿ ಹಾಕಿಕೊಂಡು ಅದರ ಮಧ್ಯದಿಂದ ಇಣಿಕಿ ನೋಡಿತು. ಅದರ ದೃಷ್ಟಿಯಲ್ಲಿ ಒಂದು ಬಗೆಯ ದೈನ್ಯ, ಅವಮಾನ, ತನ್ನ ದುರವಸ್ಥೆಯಿಂದ ನಾನಾದರೂ ಬಿಡಿಸಬಹುದೇನೋ ಎಂಬ ಆಸೆ, ಎಲ್ಲಾ ಮಿಳಿತವಾದಂತೆ ತೋರಿತು. ಅದರಿಂದ ಹೊರಡುತ್ತಿದ್ದ ಗಾನವೂ ಹೃದಯವಿದ್ರಾವಕವಾಗಿಯೇ ಇತ್ತು — ಆದರೆ ಅದು ನಮ್ಮ ಸಂಗೀತದ ವೈಖರಿಯೇ ಹೊರತು ಯಂತ್ರದ ಗೋಳುಕರೆಯಿರಲಾರದು. ಇದೆಲ್ಲಾ ಹೇಗಾದರೂ ಇರಲಿ, ಕೊಠಡಿಯ ಅಲಂಕಾರ ಒಟ್ಟಿನಲ್ಲಿ ನನ್ನ ಗಮನವನ್ನು ಸೆಳೆಯಿತು. ಸಮುದ್ರದ ಹಸುರು ಸ್ವಲ್ಪ ಹೆಚ್ಚಾಯಿತೆಂದರೂ ನಮ್ಮ ಕೈತೋಟದಿಂದ ಆರಿಸಿ ತಂದು ಪುಷ್ಪಪಾತ್ರೆಯಲ್ಲಿಟ್ಟಿದ್ದ

ಗುಲಾಬಿ ಹೂವುಗಳು ಸ್ವಲ್ಪಮಟ್ಟಿಗೆ ವರ್ಣವೈವಿಧ್ಯವನ್ನು ಕೊಟ್ಟಿದ್ದವು. ಹೊರಗಿನಿಂದ ಅನ್ಯಮನಸ್ಕನಾಗಿ ಬಂದ ನನ್ನೆದುರಿಗೆ ಹಠಾತ್ತಾಗಿ ಮೆರೆದ ಈ ಸೊಬಗನ್ನು ನೋಡಿ ಆ ಘಳಿಗೆಯಲ್ಲಿ ಸಂತೋಷವಾಯಿತೆಂದೇ ಒಪ್ಪಬೇಕು. ಬೆಕ್ಕಿನ ಹಾಗೆ ಸದ್ದಿಲ್ಲದೆ ನನ್ನ ಹಿಂದೆಯೇ ಬಂದು ನನ್ನ ಆನಂದದಲ್ಲಿ ಭಾಗಿಯಾಗಲು ನಿಂತಿದ್ದ ಲಲಿತೆಯ ಕಡೆ ನೋಡಿದೆ. ಅವಳ ಮುಖದಲ್ಲಿದ್ದ ಸಂತೃಪ್ತಿಗಂತೂ ಮಿತಿಯೇ ಇಲ್ಲ. ಕೊಠಡಿಯ ಪುನರ್ನಿರ್ಮಾಣ ಕಾರ್ಯದಲ್ಲಿ ಅವಳದ್ದೇ ಪ್ರಧಾನ ಪಾತ್ರವಷ್ಟೆ. ಅದುವರೆಗೆ ಅವಳ ಕಲ್ಪನೆಯ ರಾಜ್ಯದಲ್ಲಿದ್ದ ಸುಂದರವಾದ ಕನಸೊಂದು ಈಗ ವಾಸ್ತವತೆಯ ರೂಪುರೇಖೆಗಳನ್ನು ತಳೆದಿತ್ತು. ''ನನ್ನ ವಶಕ್ಕೆ ಬಿಟ್ಟರೆ ಮನೆ ಹೇಗಿರುತ್ತೆ, ನೋಡಿ'' ಎನ್ನುವಂತೆ ದೃಷ್ಟಿಯಿಂದಲೇ ನನ್ನ ಅಭಿನಂದನೆಯನ್ನು ಕೋರಿದಳು, ಪಡೆದಳು.

ಒಂದು ನಿಮಿಷ ಬಾಗಿಲಿನಲ್ಲೇ ನಿಂತು ಕೊಠಡಿಯ ಅಂದವನ್ನು ಸವಿದ ಮೇಲೆ ಅಂಗಿಯನ್ನು ಸೋಫಾದ ಮೇಲೆ ಬಿಚ್ಚಿ ಹಾಕಿ ಜೋಡನ್ನು ಕಳೆಯುವುದರಲ್ಲಿದ್ದೆ. ಅಷ್ಟರಲ್ಲೇ ಲಲಿತೆ ಚೇಳುಕಡಿದವಳಂತೆ ಚೀರಿದಳು! ನನ್ನ ಹಳೆಯ ಶ್ವಪಚತನವನ್ನು ಇನ್ನಾದರೂ ಬಿಡಬೇಡವೆ ? ಬೀದಿಯ ಮಣ್ಣನ್ನೆಲ್ಲಾ ಹೊತ್ತು ತಂದು ಜಮಖಾನೆಯ ಮೇಲೆಯೇ ಇಳಿಸಬೇಕೆ ? ಬಟ್ಟೆಗಳನ್ನು ಹೀಗೆ ನಿಂತ ಕಡೆ ಎಸೆಯುವುದಾದರೆ ದಿವಾನಖಾನೆಯನ್ನು ಓರಣವಾಗಿಡುವುದು ಹೇಗೆ ? ಅಂಗಿ ಇಡುವುದಕ್ಕೆ ಬೇರೆ ಸ್ಥಳವಿದೆ, ಇಲ್ಲಿ ತನ್ನಿ, ಇತ್ಯಾದಿ ಬುದ್ಧಿಯ ಮಾತುಗಳು ಬಂದವು. ನನಗೆ ಕೋಪ ಬರಲಿಲ್ಲ. ಎಷ್ಟೇ ಆಗಲಿ ನ್ಯಾಯಕ್ಕೆ ತಲೆಬಾಗುವ ಸ್ವಭಾವ. ಮರುಮಾತಾಡದೆ ಒಳಕೊಠಡಿಗೆ ಹೋಗಿ ಬಟ್ಟೆಗಳನ್ನು ಬದಲಾಯಿಸಿ ಮತ್ತೆ ದಿವಾನಖಾನೆಗೆ ಬಂದು ಕುರ್ಚಿಯ ಮೇಲೆ ಕುಳಿತೆ. ಅದರ ಮೆತ್ತೆಗಳು ಎಲ್ಲ ಕಡೆಯಿಂದಲೂ ನನ್ನನ್ನು ಅಪ್ಪಿದವು. ಎದುರಿನ ಬಾಗಿಲಿನಿಂದ ನನಗೆ ಪ್ರಿಯವಾದ ಬೆಟ್ಟಗಳ ಮತ್ತು ಕಣಿವೆಯ ದೃಶ್ಯವು ಚೌಕಟ್ಟು ಹಾಕಿಸಿದ ಸುಂದರವಾದ ವರ್ಣಚಿತ್ರದಂತೆ ಕಾಣುತ್ತಿತ್ತು. ಪರದೆಗಳು ಅಲುಗಿದಾಗ ಕೊಠಡಿಯಲ್ಲೆಲ್ಲಾ ನೆರಳುಗಳು ಮೃದುವಾಗಿ ಒಲೆದಾಡಿದವು. ಗುಲಾಬಿಯ ಕಂಪು ವ್ಯಾಪಿಸಿತ್ತು. ಕಣ್ಣಿಗೆ ಕಂಡ ಸೊಬಗನ್ನು ಅಲ್ಲಿಯೇ ಸೆರೆಹಿಡಿದಿಟ್ಟುಕೊಳ್ಳುವವನಂತೆ ಕಣ್ಣು ಮುಚ್ಚಿಕೊಂಡೆ.

ಲಲಿತೆ ಮಹಡಿಯಿಂದ ಕೆಳಗಿಳಿದು ಹೋಗಿದ್ದವಳು ಉಪಾಹಾರದ ತಟ್ಟೆಯನ್ನು ತೆಗೆದುಕೊಂಡು ಬಂದಳು. ಕುಳಿತ ಕಡೆಯಿಂದಲೇ ನಾನು ಕೈ ನೀಡಿದೆ. ಆದರೆ ನನ್ನ ಅನ್ನಪೂರ್ಣೆಯ ವರದ ಹಸ್ತ ಮುಂದೆ ಬರಲಿಲ್ಲ. ಉಪಾಹಾರ ತೆಗೆದುಕೊಳ್ಳುವುದು



ದಿವಾನಖಾನೆಯಲ್ಲಲ್ಲ, ಒಳಕೊಠಡಿಗೆ ಹೋಗಬೇಕು. ಇಲ್ಲದಿದ್ದರೆ ಜಮಖಾನೆಯ ಮೇಲೆಲ್ಲಾ ತಿಂಡಿಯ ಚೂರುಗಳು ಬೀಳಬಹುದು. ಟೀ ಚೆಲ್ಲಿದರಂತೂ ಅದರ ಗುರುತು ಹೋಗುವುದೇ ಕಷ್ಟ ..... ಇಲ್ಲ, ಟೀಪಾಯಿಗೆ ಸಹ ಟೀ ಕುಡಿಸಬಾರದು, ಒಳಕೊಠಡಿಗೇ ಹೋಗಬೇಕು. ನನಗೆ ಕುರ್ಚಿಯನ್ನು ಬಿಟ್ಟು ಏಳಲು ಮನಸ್ಸಿಲ್ಲದಿದ್ದರೂ ಅವಳ ತರ್ಕವನ್ನು ಎದುರಿಸಲಾಗಲಿಲ್ಲ.

ಮಾರನೆಯ ದಿನ ಸಂಜೆ ಮನೆಗೆ ಬಂದೊಡನೆ ಹಿಂದಿನ ದಿನ ಕಲಿತ ಪಾಠವನ್ನೊಪ್ಪಿಸುವವನಂತೆ ಬಾಗಿಲಿನಲ್ಲೇ ಕಾಲೊರಸಿ ಬಟ್ಟೆಗಳನ್ನು ನಿರ್ದಿಷ್ಟ ಸ್ಥಾನಗಳಲ್ಲಿಟ್ಟು ಉಪಾಹಾರವನ್ನು ಮುಗಿಸಿದ ಮೇಲೆ ದಿವಾನಖಾನೆಗೆ ಬಂದೆ. ನಾವು ಮಾತಾಡುತ್ತಿದ್ದಾಗ ರಾಮು ಕೂಗು ಹಾಕುತ್ತಾ ಮೆಟ್ಟಲು ಹತ್ತಿ ಬಂದ. ಕೊಠಡಿಗೆ ಬಂದವನೇ ಕುರ್ಚಿಯ ಮೇಲೆ ಹತ್ತಿ ಅದರ ಕೈ ಹಿಡಿದುಕೊಂಡು ಕುಣಿಯಲಾರಂಭಿಸಿದ. ಹಸನ್ಮುಖಿಯಾಗಿ ಕುಳಿತಿದ್ದ ಲಲಿತೆಯ ಹುಬ್ಬು ಗಂಟಿಕ್ಕಿತು, ಕಣ್ಣು ಕೆಂಪಾಯಿತು. ಅವನನ್ನೆತ್ತಿ ಗದರಿಸಿಕೊಂಡು ಕೆನ್ನೆಯನ್ನು ಚಿವುಟಿದಳು. ರಾಮುವಿಗೆ ಪೆಟ್ಟಾಗದಿದ್ದರೂ ಅವಮಾನವಾಯಿತು; ಸಂದರ್ಭೋಚಿತವಾಗಿ ಗಂಟಲನ್ನು ದೊಡ್ಡದು ಮಾಡಿಕೊಂಡು ಬೊಬ್ಬೆಯಿಟ್ಟ. ಲಲಿತೆಯ ಗಮನವೆಲ್ಲಾ ಕುರ್ಚಿಯ ಮೇಲೆ. ಅದಕ್ಕೆ ಹೊದಿಸಿದ್ದ ಸಮುದ್ರದ ಹಸುರುಬಣ್ಣದ ಬಟ್ಟೆಯ ಮೇಲೆ ರಾಮುವಿನ ಪುಟ್ಟಪಾದಗಳ ಮುದ್ರೆ ಬಿದ್ದಿತ್ತು. ಬೀದಿಯ ಧೂಳಿನಿಂದ ರಚಿಸಿದ ಚಿತ್ರ. ನಾನು ರಾಮುವನ್ನು ಎತ್ತಿಕೊಂಡು ಲಲಿತೆ ಚಿವುಟಿದ್ದು ಅವನನ್ನಲ್ಲವೆಂದು ವಾದಿಸುತ್ತಿದ್ದಾಗ ಅವಳು ಕುರ್ಚಿಯ ಮೇಲಿನ ಧೂಳು ಹೊಡೆಯುತ್ತಿದ್ದಳು. ನನ್ನ ಮನಸ್ಸಿನಲ್ಲೊಂದು ಪ್ರಶ್ನೆ ತಲೆ ಹಾಕಿತು; ಕುರ್ಚಿಯೋ ಮಗುವೋ — ಯಾವುದು ಹೆಚ್ಚು ? ಲಲಿತೆ ಮಾಡಿದ್ದೇನೂ ತಪ್ಪಲ್ಲ ; (ಅವಳು ಮಾಡುವುದು ಯಾವುದು ತಪ್ಪು!) ಮಕ್ಕಳಿಗೆ ಚೊಕ್ಕಟವಾಗಿರುವುದನ್ನು ಕಲಿಸಬೇಕು; ಮುದ್ದು ಮಾಡುವುದಕ್ಕೂ ಒಂದು ಮಿತಿಯಿದೆ. ಆದರೂ ಮಗುವಿನ ಪಾದದ ಚಿತ್ರವನ್ನು ನೆನೆದು ನನಗೇನೋ ಆನಂದವಾಯಿತು.

ಅಂದಿನಿಂದಾಚೆಗೆ ದಿವಾನಖಾನೆಯ ರಕ್ಷಣೆ ಇನ್ನೂ ಹೆಚ್ಚಿನ ಭರದಿಂದ ಸಾಗಿತು. ಬೀದಿಯಿಂದ ಬಂದಾಗ ದಿವಾನಖಾನೆಯ ಪವಿತ್ರವಾದ ನೆಲವನ್ನು ತುಳಿಯದಂತೆ ಬೇರೆ ಬಾಗಿಲಿನಿಂದ ಒಳಕೊಠಡಿಗೆ ಹೋಗುವ ಅಭ್ಯಾಸ ಮಾಡಿಕೊಂಡೆವು. ಮನೆಗೆ ಬಂದೊಡನೆ ಕುಳಿತ ಕಡೆ ಹೊರಗಿನ ಬಟ್ಟೆಗಳನ್ನು

ಕಳೆದೆಸೆದು ಬೇರೆ ಬಟ್ಟೆಗಳನ್ನು ಹಾಕಿಕೊಳ್ಳುವುದು ನನಗೆ ಹಿಂದಿನಿಂದಲೂ ಬಂದ ಪದ್ಧತಿ. ಈಗ ಆ ಸುಖ ಪೂರ್ತಿ ಇಲ್ಲವಾಯಿತು. ಹಾಯಾಗಿ ಕೂರುವ ಬದಲು ಮೂರು ಕೊಠಡಿಗಳನ್ನು ಸುತ್ತಬೇಕು; ಬಟ್ಟೆಗಳನ್ನೂ ಜೋಡುಗಳನ್ನೂ ಪುಸ್ತಕಗಳನ್ನೂ ಆಯಾ ಕೊಠಡಿಗಳಿಗೆ ಹಂಚಿಕೊಡಬೇಕು. ಅನಂತರ ದಿವಾನಖಾನೆಗೆ ಬಂದು ಕೂಡಬೇಕು. ಆಗಲೂ ನನಗೆ ಹಿತವಾಗುವಂತೆ ಕಾಲು ಮಡಿಸಿ ಕೂರುವಂತಿಲ್ಲ; ಅಜ್ಞಾನದಲ್ಲೇನಾದರೂ ಹಾಗೆ ಮಾಡಿದರೆ ಕುರ್ಚಿಯ ಹೊದಿಕೆ ಮಲಿನವಾಗಿ ಹೋಗುತ್ತದೆ. ಕಾಲು ನೀಡಿ ಒರಗಿಕೊಳ್ಳುವಂತೆಯೂ ಇಲ್ಲ; ಕುರ್ಚಿಯ ಬೆನ್ನಿಗೆ ತಲೆಸೋಕಿ ಅದರ ಬಣ್ಣ ಮಾಸಲಾಗುತ್ತದೆ. ಬಾಗಿಲಿನ ಎದುರಿಗಿರುವ ಕುರ್ಚಿ ನನಗೆ ಪ್ರಿಯವಾದದ್ದು; ಆದರೆ ಸದಾ ಒಂದೇ ಕುರ್ಚಿಯ ಮೇಲೆ ಕುಳಿತರೆ ಅದರ ಸ್ಪ್ರಿಂಗ್ ಕೆಟ್ಟುಹೋಗುತ್ತದೆ. ಆದ್ದರಿಂದ ನನ್ನ ವಿಶ್ವಾಸವನ್ನು ಎಲ್ಲಾ ಕುರ್ಚಿಗಳಿಗೂ ನಿಷ್ಪಕ್ಷಪಾತವಾಗಿ ಹಂಚಬೇಕು. ಸೋಫಾದ ಮೇಲೆ ಕುಣಿದಾಡಬಾರದೆಂಬ ಪರಿಜ್ಞಾನವೇ ಇಲ್ಲದಿರುವ ಆ ಕಿರಾತ ರಾಮುವನ್ನಂತೂ ದಿವಾನಖಾನೆಯಿಂದ ಗಡೀಪಾರು ಮಾಡಬೇಕಾಯಿತು. ಯಾವುದಾದರೂ ಪದಾರ್ಥಗಳು ಬೇಕಾದರೆ ಒಂದೊಂದಕ್ಕೂ ಒಂದೊಂದು ಕೊಠಡಿಗೆ ಪ್ರಯಾಣ ಬೆಳೆಸಬೇಕು. ಈ ಬಗೆಯ ವ್ಯಾಯಾಮ ದೇಹಾರೋಗ್ಯಕ್ಕೆ ಒಳ್ಳೆಯದೆಂದರೂ ಮನಶ್ಶಾಂತಿಗೆ ಭಂಗ ತರುತ್ತದೆ. ನನ್ನಂಥವನಿಗೆ ಕುಳಿತ ಕಡೆಯಿಂದ ಕೈಚಾಚಿದರೆ ಬೇಕಾದ ಪದಾರ್ಥ ಸಿಕ್ಕುವಂತಿರಬೇಕು. ಮಹಡಿಯ ಮೇಲೆ ನನಗಾಗಿಯೇ ಮೂರು ಕೊಠಡಿಗಳು ಮೀಸಲಾಗಿದ್ದರೂ ನಾನು ಬರೆಯುವ ಮೇಜು, ಪುಸ್ತಕದ ಬೀರುಗಳು, ಬಟ್ಟೆಯ ನಿಲುವು, ರೇಡಿಯೋ, ಎಲ್ಲವನ್ನೂ ಒಂದೇ ಕೊಠಡಿಯಲ್ಲಿ ತುಂಬಿಕೊಂಡಿರುತ್ತೇನೆ. ನನ್ನ ಜೀವನವೆಲ್ಲಾ ಅಲ್ಲಿಯೇ.

ನನ್ನ ಸ್ನೇಹಿತರು ಬಂದರೆ ಅಲ್ಲಿಗೇ ಬರುತ್ತಾರೆ. ಹಾಗೆ ನಮ್ಮ ಮನೆಗೆ ಬಂದು ಇಳಿಯುವವರು ನನಗೆ ಅತ್ಯಂತ ಪ್ರಿಯರಾದವರು ಮಾತ್ರ. ಪಾಶ್ಚಾತ್ಯ ಪದ್ಧತಿಯಂತೆ ಅವರನ್ನು ಅಣಿಯಾದ ಬೇರೊಂದು ಕೊಠಡಿಯಲ್ಲಿ ಪ್ರತಿಷ್ಠಿಸಿ ಅವರ ಸನ್ನಿಧಿಗೆ ಹೋಗುವ ಮುನ್ನ ಬಾಗಿಲು ತಟ್ಟಿ ಭೇಟಿಯ ಚೀಟಿಯನ್ನು ಕೊಟ್ಟು ಕಳುಹಿಸುವುದೇನೂ ಕಷ್ಟವಲ್ಲ. ಆದರೆ ಆ ರೀತಿಯ ಸತ್ಕಾರ ಮಾಡಿದರೆ ಬಂದೀಖಾನೆಯಲ್ಲಿಟ್ಟಂತೆ ಎಂದೇ ನನ್ನ ಮತ್ತು ಅವರ ಭಾವನೆ. ಅತಿಥಿಸತ್ಕಾರಕ್ಕೆ ಈ ನಾಗರಿಕತೆಯ ಮೆರುಗು ಬಂದರೆ ಸರಳತೆ ನಾಶವಾಗುತ್ತದೆ. ಸಮಾಜದಲ್ಲಿ ಈ ಬಗೆಯ ಮೆರುಗು ಅವಶ್ಯಕವಿರಬಹುದು. ಆದರೆ ಮನೆಯಲ್ಲಾದರೂ ಸ್ವತಂತ್ರ



ವಾತಾವರಣವನ್ನು ಕಲ್ಪಿಸಿಕೊಳ್ಳಬೇಡವೆ ? ಈ ಸ್ವಾತಂತ್ರ್ಯವೂ ಸರಳತೆಯೂ ಬೇಡದವರು, ಇಪ್ಪತ್ತುನಾಲ್ಕು ಘಂಟೆಯೂ ಕಾಲರ್ ಟೈ ಸಮೇತ ಗರಿಮುರಿಯದ ಸೂಟು ಧರಿಸಿ ಅಚ್ಚುಕಟ್ಟಾದ ಕೊಠಡಿಯಲ್ಲಿ ತಮ್ಮ ಪಾಡಿಗೆ ತಾವು ಇರುವ ಅಭ್ಯಾಸವುಳ್ಳವರು, ನಮ್ಮ ಮನೆಗೆ ಬರಲು ಅಸಹ್ಯಪಟ್ಟರೆ — ಅವರಿಗೆ ದೂರದಿಂದಲೇ ನನ್ನ ನಮಸ್ಕಾರವಿರಲಿ. ನನ್ನ ಅತಿಥಿಗಳೇನೋ ನನ್ನ ಕೊಠಡಿಯಲ್ಲಿಯೇ ನನ್ನೆದುರಿಗೆ ಕುಳಿತಿರುತ್ತಾರೆ. ತಾವೊಬ್ಬರೇ ಇರಬೇಕೆಂಬ ಅಪೇಕ್ಷೆ ಬಿದ್ದರೆ ''ಇನ್ನೆರಡು ಘಂಟೆ ನನ್ನ ಪಾಡಿಗೆ ನನ್ನನ್ನು ಬಿಡಿ, ನಿಮ್ಮ ಮುಖ ತೋರಿಸಬೇಡಿ'' ಎಂದು ಸ್ಪಷ್ಟವಾಗಿ ಹೇಳುತ್ತಾರೆ. ಇಬ್ಬರ ಮನಸ್ಸಿಗೂ ಯಾವ ಘಳಿಗೆಗೆ ಯಾವ ಯೋಚನೆ ಬಂದರೂ ಅದನ್ನು ಹೊರಹಾಕಿ ಚರ್ಚೆ ನಡೆಸುತ್ತೇವೆ. ಕ್ಷೌರಕ್ಕೆ ಕುಳಿತರೆ ಸಾಬೂನು ನೊರೆ ಮುಸುಕಿದ ಮುಖದ ಮೇಲೆ ವ್ಯಾಖ್ಯಾನ ಮಾಡುತ್ತೇವೆ. ಕೊಠಡಿಯ ಅವ್ಯವಸ್ಥೆಯನ್ನೇ ಆಧಾರವಾಗಿಟ್ಟುಕೊಂಡು ನಮ್ಮ ಕಷ್ಟ ಸುಖಗಳನ್ನು ಹೇಳಿಕೊಳ್ಳುತ್ತೇವೆ. ಘನವಾದ ಗಂಭೀರ ವಿಷಯಗಳು, ಅಲ್ಪವಾದ ತುಚ್ಛ ವಿಷಯಗಳು, ಕೊನೆಗೆ ಮೃದುವಾದ ಹಾಸ್ಯದ ತೆರೆಯಲ್ಲಿ ತನ್ನ ಭೀಭತ್ಸವನ್ನು ಅಡಗಿಸಿ ಸೂಕ್ಷ್ಮವಾಗಿ ಅಡಿಯಿಡುತ್ತಾ ಬಂದು ಸುಳಿದು ಕಂಡು ಕಾಣದಂತೆ ಅದೃಶ್ಯವಾಗುವ ವ್ಯಂಗ್ಯ ಅಶ್ಲೀಲ — ಒಂದಾದ ಮೇಲೊಂದು ಯಾವ ತಡೆಯೂ ಇಲ್ಲದೆ ಸಂಭಾಷಣೆಯ ಹೊನಲು ಹರಿಯಬೇಕಾದರೆ ಇಂಥ ಅವ್ಯವಸ್ಥಿತ ವಾತಾವರಣದಲ್ಲೇ. ಈಗಿನ ದಿವಾನಖಾನೆಯಲ್ಲಿ ಈ ಸೌಹಾರ್ದವೂ ಸಾಮೀಪ್ಯವೂ ದುರ್ಲಭವಾಗಿವೆ. ಈ ಕೊಠಡಿ ಒಂದು ಬಗೆಯ ದೇವಾಲಯ. ಆದರೆ ದೇವಾಲಯದಲ್ಲಿ ನಾವು ವಾಸ ಮಾಡಲಾಗುವುದಿಲ್ಲ. ದೈವಸನ್ನಿಧಿಯಲ್ಲಿ ಆಡಬಾರದ ಮಾತುಗಳೂ ಯೋಚಿಸಬಾರದ ಯೋಚನೆಗಳೂ ನಮ್ಮ ಜೀವನದಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿವೆ. ನಿತ್ಯಶುಚಿಯಾದ ನಿತ್ಯಪವಿತ್ರವಾದ ಆ ವಾತಾವರಣ ಸಾಮಾನ್ಯ ಮಾನವನ ದಿನದಿನದ ಜೀವನಕ್ಕೆ ಹೊಂದಿಕೊಳ್ಳುವುದಿಲ್ಲ. ಅದಕ್ಕೆ ಅಭಿಷೇಕಮಾಡಿಸಿ, ಅಲಂಕರಿಸಿ, ಪುಷ್ಪಾಂಜಲಿಯನ್ನು ಅರ್ಪಿಸಿ ಅಷ್ಟರಲ್ಲೇ ತೃಪ್ತನಾಗುತ್ತೇನೆ.

ಮನೆಯವರೂ ಆಪ್ತಮಿತ್ರರೂ ಹಾಗಿರಲಿ, ಹೊರಗಿನವರು ಬಂದು ಸ್ವಲ್ಪ ಕಾಲ ಅಲ್ಲಿ ಕುಳಿತರೆ ಅವರ ಮನಸ್ಸಿನಲ್ಲಿ ಸಹ ಈ ಕೊಠಡಿ ಭಯವನ್ನು ಬಿತ್ತುತ್ತದೆ. ಅವರಲ್ಲಿ ಕೆಲವರು ಸಿಗರೇಟ್ ಸೇದುವವರು. ಅಷ್ಟು ಚೊಕ್ಕಟವಾಗಿಟ್ಟಿರುವ ಕೊಠಡಿಯಲ್ಲಿ ಜಮಖಾನೆಯ ಮೇಲೇನಾದರೂ ಸಿಗರೇಟಿನ ಬೂದಿ ಉದುರಿದರೆ!

ಈ ಯೋಚನೆಯೇ ಅವರನ್ನು ಬಾಧಿಸುತ್ತಿರುತ್ತದೆ. ನೆಸ್ಯ ಹಾಕುವವರ ಪಾಪಕೃತ್ಯಗಳಿಗಂತೂ ಮಿತಿಯೇ ಇಲ್ಲ. ಅವರ ಮನಸ್ಸಿನ ಶಂಕೆಯನ್ನು ನೆನೆದು ನಾನು ಎಷ್ಟೋ ವೇಳೆ ಮರುಗಿದ್ದೇನೆ. ಇತ್ತ ಕಡೆ ನಮಗೂ ಶಾಂತಿಯಿಲ್ಲ ; ಅತಿಥಿಗಳು ಕೊಠಡಿಯ ಅಂದವನ್ನೆಲ್ಲಿ ಕೆಡಿಸುವರೋ ಎಂಬ ಭಯ ಕೊರೆಯುತ್ತಿರುತ್ತದೆ. ಇಂಥ ವಾತಾವರಣದಲ್ಲಿ ಸೌಹಾರ್ದ ಬೆಳೆಯಲಾದೀತೆ! ಹಿಂದಿನಂತೆ ಅವ್ಯವಸ್ಥಿತವಾದ ಕೊಠಡಿಯಾದರೆ ಅದರ ಮಾತೇ ಬೇರೆ. ಯಾರಾದರೂ ಬೀದಿಯಿಂದ ಕೂಗಿದ್ದು ಕೇಳಿದರೆ ನಾನು ಅವಸರದಿಂದ ಕುರ್ಚಿಯ ಮೇಲಿನ ಟವಲನ್ನು ಮಡಿಸಿಟ್ಟು ಕಾಫಿ ಬಟ್ಟಲನ್ನು ಒಳಕೊಠಡಿಗೆ ಸಾಗಿಸಿ, ಎಲೆ ಅಡಕೆಯನ್ನು ಕಸದ ಬುಟ್ಟಿಗೂ, ಕಸದ ಬುಟ್ಟಿಯನ್ನು ಮೇಜಿನ ಕೆಳಕ್ಕೂ ತಳ್ಳಿ, ಪತ್ತೆದಾರಿ ಕಾದಂಬರಿಯನ್ನು ಮರೆಮಾಡಿ ಭಗವದ್ಗೀತೆಯನ್ನು ಮುಂದಿಟ್ಟು , ಅವರು ಮೆಟ್ಟಲು ಹತ್ತಿ ಬರುವುದರೊಳಗೆ ಕೊಠಡಿಯನ್ನು ಅಣಿ ಮಾಡುತ್ತೇನೆ. ತಾವು ಬರುವ ಮುನ್ನ ಇಷ್ಟೆಲ್ಲಾ ಸಂಭ್ರಮ ನಡೆದಿದೆಯೆಂದು ಅವರೂ ಬಲ್ಲರು. ಅವರ ಆಗಮನದ ಸುಳಿವು ತಿಳಿದೊಡನೆ ಅನಾಸಕ್ತಿಯಿಂದಿರದೆ ಸಂಭ್ರಮದಿಂದ ಅವರನ್ನು ಬರಮಾಡಿಕೊಂಡರೆ ಅವರಿಗೂ ಸಂತೋಷವಾಗಬೇಕು. ಕೊಠಡಿ ನಿತ್ಯಾಲಂಕಾರಭೂಷಿತವಾಗಿರದೆ ಸಮಯಕ್ಕೆ ತಕ್ಕಂತೆ ಬದಲಾವಣೆ ಹೊಂದುವುದೇ ಹಿತ. ಮಾಸಲಾಗದ ರಂಗೋಲೆಯನ್ನೂ ಕಾರಣೆಯನ್ನೂ ಎಳೆದಿರುವ ಮನೆಯಲ್ಲಿ ಹಬ್ಬದ ದಿನ ಬಂದರೆ ಯಾವ ಸಡಗರವೂ ಸಾಧ್ಯವಿಲ್ಲ.

ನನ್ನ ಮನೆಯ ಈ ಹೊಸ ದಿವಾನಖಾನೆ ನನಗೆ ಪರಿಚಿತವಾದದ್ದಲ್ಲ. ನನ್ನ ಮತ್ತು ನನ್ನವರ ವ್ಯಕ್ತಿತ್ವವೇನಿದ್ದರೂ ಅದರ ಪ್ರಭಾವ ಇಲ್ಲಿ ಗೋಚರಿಸುವುದಿಲ್ಲ. ಈ ಕೊಠಡಿಗೆ ಮನುಷ್ಯನ ಸಂಪರ್ಕವೇ ಇಲ್ಲ — ಅಥವಾ ತಾತ್ಕಾಲಿಕವಾಗಿ ಅಂಥ ಸಂಪರ್ಕ ಬಂದರೂ ಅದು ಕೂಡಲೇ ಆ 'ಮಾಲಿನ್ಯ'ವನ್ನು ಕಳೆದುಕೊಂಡು ತನ್ನ ನಿತ್ಯಶುದ್ಧತೆಯನ್ನು ಮತ್ತೆ ಪಡೆಯುತ್ತದೆ. ಅದು ನನ್ನ ಕೊಠಡಿಯೆನ್ನುವುದಕ್ಕೆ ಗುರುತೇನು? ಅದನ್ನು ಅಳವಡಿಸಿರುವ ರೀತಿ ನನ್ನ ಸ್ವಭಾವಕ್ಕನುಗುಣವಾಗಿಲ್ಲ. ಆ ಸಮುದ್ರದ ಹಸುರು ಬಣ್ಣ — ಎತ್ತನೋಡಿದರೂ ತಾನೇ ತಾನಾಗಿ ಹೂಂಕಾರಮಾಡುತ್ತಿರುವ ಆ ಅಸಹ್ಯ ವರ್ಣದ ಹೆಸರು ಕೇಳಿದರೆ ನನಗೆ ಮೈ ಉರಿಯುತ್ತದೆ. ಅದಕ್ಕೆ ಔತಣ ಕೊಟ್ಟವರು ಯಾರು? ನಮ್ಮ ಮೇಲೆ ಒತ್ತಾಯದಿಂದ ಆ ಬಣ್ಣವನ್ನು ಬಳಿದ ಆ ಸಿಂಧು ಪತ್ರಿಕೆಯ ಬರಹಗಾತಿಗೆ ನನ್ನ ಶಾಪವಿರಲಿ!



ಕೊಠಡಿಯನ್ನು ಸಜ್ಜುಗೊಳಿಸಿರುವ ಕ್ರಮವನ್ನಾಗಲಿ, ಅಲ್ಲಿ ಸರ್ವಾಧಿಕಾರ ನಡಸುತ್ತಿರುವ ಆ ಬಣ್ಣವನ್ನಾಗಲಿ, ನಾವು ಬದಲಾಯಿಸುವಂತಿಲ್ಲ. ಆ ಕುರ್ಚಿಗಳಿಗೋ ನಮ್ಮ ಆದರ ಬೇಕಿಲ್ಲ, ನಮ್ಮ ಕೋಪತಾಪಗಳನ್ನೂ ಅವು ಸಹಿಸವು. ಅಲ್ಲಿಯ ವ್ಯವಸ್ಥೆಯನ್ನು ನಾವು ಅನುಸರಿಸಿ ನಡೆಯಬೇಕೇ ಹೊರತು ನಮ್ಮ ಮನಸ್ಸಿನಲ್ಲಾಗುವ ಸಾವಿರ ಮಾರ್ಪಾಟುಗಳಿಗೆ ಅದು ಹೊಂದಿಕೊಳ್ಳುವುದಿಲ್ಲ. ಬೆಳಕಿನಲ್ಲಿ ಹೊಳೆದು, ನೆರಳಿನಲ್ಲಿ ನೀಲವಾಗಿ, ಇಲ್ಲಿ ಶಾಂತವಾಗಿ ಹರಿದು, ಅಲ್ಲಿ ಉತ್ಸಾಹದಿಂದ ಮುಂದೆ ನುಗ್ಗಿ, ಒಮ್ಮೆ ಸಾಹಸದಿಂದ ಧುಮುಕಿ ಮತ್ತೊಮ್ಮೆ ಒಲುಮೆಯಿಂದ ಸರಸವಾಡಿ, ಒಮ್ಮೆ ಕೋಪದಿಂದ ಗರ್ಜಿಸಿ ಮತ್ತೊಮ್ಮೆ ಮಂಜುಳವಾಗಿ ಹಾಡಿಕೊಂಡು ಹರಿಯಬೇಕಾದ ಜೀವನವಾಹಿನಿ ಇಲ್ಲಿ ಮಾತ್ರ ನಿಶ್ಚಲವಾಗಿ ನಿಂತು ಹೋಗಿದೆ. ಒಂದು ವಿಧವಾದ ಪರಿಪೂರ್ಣತೆಯನ್ನು ಪಡೆದ ಈ ಸೌಂದರ್ಯ ನನ್ನ ಕಣ್ಣಿಗೆ ಸಿಂಗರಿಸಿದ ಶವದಂತೆ ಕಾಣುತ್ತದೆ. ಪ್ರಕೃತಿಯ ಜೀವನದಲ್ಲಾಗಲಿ ಮಾನವನ ಜೀವನದಲ್ಲಾಗಲಿ ಈ ಬಗೆಯ ಪರಿಪೂರ್ಣತೆಯೂ ನಿಶ್ಚಲತೆಯೂ ಕಾಣುವುದಿಲ್ಲ. ಆ ಟೀಪಾಯಿಯ ಮೇಲಿರುವ ಹೂವುಗಳು ಹತ್ತಾರು ಸಲ ತಮ್ಮ ಬಣ್ಣವನ್ನು ಬದಲಾಯಿಸಿವೆ; ಆದರೆ ಚಲನೆ ವೈವಿಧ್ಯಗಳೆಷ್ಟೇ ಇರಲಿ, ಜೀವನದ ಯಾವುದೊಂದು ಘಟ್ಟದಲ್ಲೂ ಅವುಗಳ ಆಕರ್ಷಣ ಶಕ್ತಿಗೆ ಚ್ಯುತಿ ಬಂದಿಲ್ಲ. ನನ್ನ ರಾಮು ಕ್ಷಣಕಾಲ ನಿಂತಲ್ಲಿ ನಿಲ್ಲುವುದಿಲ್ಲ ; ಅವನ ಮುಖದ ಕಳೆ ನಿಮಿಷಕ್ಕೆ ಹತ್ತು ಸಲ ಬದಲಾವಣೆ ಹೊಂದುತ್ತದೆ. ಬೀದಿಯ ಧೂಳಿನಿಂದ ಮಸಕಾಗಿದ್ದರೂ ಪ್ರಫುಲ್ಲವಾದ ಮುಖದಿಂದ ಒಳಗೆ ನುಗ್ಗುತ್ತಾನೆ ; ಎಡವಿ ಮುಗ್ಗರಿಸುವುದನ್ನೂ ಲೆಕ್ಕಿಸದೆ ಓಡಿಬಂದು ಮೈಮೇಲೆ ಬೀಳುತ್ತಾನೆ. ನನ್ನ ಬಟ್ಟೆಗಳು ಕೊಳೆಯಾಗಬಹುದೆಂಬ ಎಣಿಕೆ ಅವನಿಗೂ ಇಲ್ಲ, ನನಗೂ ಇಲ್ಲ .... ''ಧನ್ಯಾಸ್ತದಂಗ ರಜಸಾ ಮಲಿನೀ ಭವಂತಿ!'' ಅವನ ಕೆನ್ನೆಗಳು ಕ್ಷಣಕ್ಷಣಕ್ಕೂ ವಿಚಿತ್ರ ಸೌಂದರ್ಯದಿಂದ ಗುಳಿಬಿದ್ದು ಮತ್ತೆ ತುಂಬಿಕೊಳ್ಳುತ್ತವೆ. ಗದರಿಸಿದರೆ ಅವನ ನಗು ಮಾಯವಾಗಿ ಕಣ್ಣಿನಲ್ಲಿ ಕಂಬನಿ ಹೊಳೆಯುತ್ತದೆ, ಮತ್ತೆ ಅದರ ಮೂಲಕವೇ ನಗು ಮಿಂಚುತ್ತದೆ. ಒಂದು ಮನೋಭಾವಕ್ಕೂ ಮತ್ತೊಂದಕ್ಕೂ ಸಾದೃಶ್ಯವಿಲ್ಲ ; ಆದರೆ ಅವೆಲ್ಲವೂ ಮೇಳೈಸಿದುದರ ಫಲವಾಗಿ ದಿವ್ಯಸೌಂದರ್ಯವೊಂದು ಉತ್ಪನ್ನವಾಗುತ್ತದೆ.

ನನಗೆ ಪ್ರಿಯವಾದ ವಾಸಗೃಹದಲ್ಲಿ ಈ ಚಂಚಲತೆ ಬೇಕು, ವೈವಿಧ್ಯದ ಮೇಳವಿರಬೇಕು, ಜೀವನದ ಏರುಪೇರುಗಳೂ ಓರೆಕೋರೆಗಳೂ ತುಂಬಿರಬೇಕು.

ಅದು ನಿಜವಾಗಿಯೂ ನನ್ನದಾದರೆ ಕೊಠಡಿಯಲ್ಲೊಂದು ಕಡೆ ಲಲಿತೆಯ ಮುಡಿಯಿಂದ ಕಳಚಿಬಿದ್ದ ಹೂವು ಕಣ್ಣಿಗೆ ಬೀಳುತ್ತದೆ — ಅದನ್ನು ನೋಡಿ ಬೇಸರಗೊಳ್ಳಬಹುದೆ ? ಏನನ್ನೋ ನೆನೆಯುತ್ತಿದ್ದ ಅವಳ ಕಣ್ಣಿನಿಂದ ಕಂಬನಿಯೊಂದು ಉರುಳಿಬಿದ್ದು ನಾನು ಬರೆದಿಟ್ಟಿರುವ ಹಾಳೆಯ ಮೇಲೆ ಅಕ್ಷರಗಳು ಅಳಿಸಿಹೋಗಿದೆ — ಅದನ್ನು ನೋಡಿ ಕೋಪಗೊಳ್ಳಲಾರೆ. ಅಲ್ಲೇ ಒಂದು ಕಡೆ ಅವಳ ಹಣೆಯಿಂದ ಸ್ವಲ್ಪ ಕುಂಕುಮ ಉದುರಿದೆ ; ಕರವಸ್ತ್ರದಿಂದ ಅದನ್ನು ಗುಡಿಸಿಹಾಕಲಾರೆ — ಮುತ್ತು ಕೊಟ್ಟರೆ ಮುಖ ಒರಸಿಕೊಂಡವರುಂಟೆ ! ನೆಲದ ಮೇಲೆ ರಾಮುವಿನ ಗೋಲಿ ಉರುಳುತ್ತಿದೆ; ಅವನು ಕೋಪದಿಂದ ಎಸೆದ ಆಟದ ಮೋಟಾರು ತಳಮೇಲಾಗಿ ಬಿದ್ದು ಕಾಲಿಗೆ ಸಿಕ್ಕುತ್ತದೆ. ಅಲ್ಲಿಯ ಪದಾರ್ಥಗಳೊಂದೂ ಇಟ್ಟ ಕಡೆ ಇರುವುದಿಲ್ಲ: ಎಲ್ಲಾ ನನ್ನೊಡನೆ ಕಣ್ಣು ಮುಚ್ಚಾಲೆ ಆಡುತ್ತವೆ. ನನ್ನ ಲೇಖನಿ ಎಲ್ಲಿ ಮಾಯವಾಯಿತು ಎಂದು ಹುಡುಕುತ್ತಿದ್ದರೆ ಅದು ಒಂದು ಕಡೆ ಅವಿತುಕೊಂಡು ನನ್ನ ಪರದಾಟವನ್ನು ನೋಡಿ ನಗುತ್ತಿರುತ್ತದೆ. ಹುಡುಕಿ ಬೇಸರವಾಗಿ ನಾನು ಸೋತೆನೆಂದು ಒಪ್ಪುವ ವೇಳೆಗೆ "ಇಗೋ ಇಲ್ಲಿದ್ದೇನೆ!" ಎನ್ನುವಂತೆ ಕಾಗದಗಳ ನಡುವೆ ತುಂಟದೃಷ್ಟಿಯಿಂದ ಇಣಿಕಿ ನೋಡುತ್ತದೆ. ಅದು ಸಿಕ್ಕದೆಯೇ ಇದ್ದರೆ ಲಲಿತೆಗೆ ಒಂದು ಕೂಗು ಹಾಕುತ್ತೇನೆ. "ನಿಮ್ಮ ಪದಾರ್ಥ ನೀವು ನೋಡಿಕೊಳ್ಳಬಾರದೆ ?" ಎಂದು ಅವಳು ರೇಗಿದರೆ ನಾನು ಕುಚೋದ್ಯ ಮಾಡುತ್ತೇನೆ, ಅಥವಾ ನಾನು ರೇಗಿದರೆ ಅವಳು ಕುಚೋದ್ಯ ಮಾಡುತ್ತಾಳೆ. ನಾವು ಕೊಠಡಿಯನ್ನು ಬಿಟ್ಟು ಹೋದೊಡನೆ ಅಲ್ಲಿಯ ವಸ್ತುಗಳೆಲ್ಲಾ ನಮ್ಮ ಹುಚ್ಚಾಟವನ್ನು ನೆನೆದು ಹಾಸ್ಯ ಮಾಡಿ ನಗುತ್ತವೆಯೆಂದೇ ನನ್ನ ನಂಬಿಕೆ. ಅಂತೂ ಅಲ್ಲಿ ಯಾರಿರಲಿ, ಇಲ್ಲದಿರಲಿ, ಜೀವನದ ನೃತ್ಯ ಬಿಡುವಿಲ್ಲದೆ ಸಂತತವಾಗಿ ಸಾಗುತ್ತದೆ. ಕ್ಷಣಕಾಲ ಎಲ್ಲವೂ ನಿಶ್ಚಲವಾಗಿ ಕಂಡರೂ ಆ ನಿಶ್ಚಲತೆ ಲಾಸ್ಯದ ಒಂದು ಭಂಗಿ ಮಾತ್ರ.

ನನ್ನ ಮತ್ತು ನನಗೆ ಪ್ರಿಯರಾದವರ ವ್ಯಕ್ತಿತ್ವವೆಲ್ಲಾ, ನಮ್ಮ ಮನಸ್ಸಿನಲ್ಲಿ ಸುಳಿದು ಮಾಯವಾಗುವ ಸಾವಿರ ಭಾವನೆಗಳೆಲ್ಲಾ, ಆ ಕೊಠಡಿಯಲ್ಲಿ ಬೆರೆದು ಅದಕ್ಕೂ ಮಾನವತೆ ಬಂದಂತಿದೆ. ಲಲಿತೆ ನನ್ನನ್ನು ಕಂಡೊಡನೆ ನಗುಮುಖದಿಂದ ಏಳುವ ಹಾಗೆ ಕೊಠಡಿಯೂ ಮತ್ತೊಬ್ಬ ಪ್ರೇಯಸಿಯಂತೆ ಎದ್ದು ಸ್ವಾಗತಿಸಿ ಅಪ್ಪುತ್ತದೆ. ಅದು ಸಿಂಗರಿಸಿಕೊಂಡಿದ್ದರೆ ಆ ಶೃಂಗಾರವೆಲ್ಲಾ ನನಗಾಗಿಯೇ ಅಲ್ಲವೆ! ಸಲಿಗೆಯಿಂದ ಆ ಅಲಂಕಾರವನ್ನು ಕದಲಿಸದಿದ್ದರೆ, ನೆಟ್ಟಗೆ ಬಾಚಿರುವ ಕುರುಳಿನ ಮೇಲೆ ಒಲವಿನಿಂದ ಕೈಯಿಟ್ಟು ಅದನ್ನು ಚದರಿಸದಿದ್ದರೆ, ನನಗೆ ತೃಪ್ತಿಯಿಲ್ಲ. ಆದರೆ ಈಗಿನ



ದಿವಾನಖಾನೆಗೆ ನನ್ನ ಒಲವು ನಲಿವುಗಳು ಬೇಕಾಗಿಲ್ಲ. ಅದರ ಕುರುಳನ್ನು ಚದರಿಸುವ ಧೈರ್ಯ ನನಗಿಲ್ಲ.

ಆದ್ದರಿಂದ ನಾನು ಅಲ್ಲಿಗೆ ಕಾಲಿಡುವುದನ್ನೇ ಬಿಟ್ಟಿದ್ದೇನೆ. ಒಳಕೊಠಡಿಯಲ್ಲಿ ನನ್ನ ಪೂರ್ವ ಸ್ನೇಹಿತರಾದ ಸುಂದರ್ ಕುರ್ಚಿಗಳಿವೆ; ಹಸಿವಾದಾಗ ನನ್ನೊಡನೆ ತಿಂದು ಬಾಯಾರಿಕೆಯಾದಾಗ ನನ್ನೊಡನೆ ಕುಡಿದಿರುವ ಹಳೆಯ ಮೇಜಿದೆ. ಅವುಗಳೊಡನೆ ನಾನು ಯಾವ ಸ್ವಾತಂತ್ರ್ಯ ವಹಿಸಿದರೂ ಎಷ್ಟು ಸಲಿಗೆಯಿಂದಿದ್ದರೂ ತಡೆಯುತ್ತದೆ. ಈಗಿನ ದಿವಾನಖಾನೆಯಲ್ಲಿ ಕಾಣುವ ಪಾಷಾಣಹೃದಯದ ನಿಶ್ಚಲ ಸೌಂದರ್ಯ ನನಗೂ ಬೇಡ, ನನ್ನ ಆತ್ಮೀಯರಿಗೂ ಬೇಡ.

## ಕೃತಿ -ಕರ್ತೃ ವಿಚಾರ

ಪ್ರಸ್ತುತ ಲೇಖನವನ್ನು ಎ.ಎನ್. ಮೂರ್ತಿರಾವ್ ಅವರ 'ಅಲೆಯುವ ಮನ' ಎಂಬ ಪ್ರಬಂಧ ಸಂಕಲನದಿಂದ ಆರಿಸಿಕೊಳ್ಳಲಾಗಿದೆ. ಮೂರ್ತಿರಾವ್ ಅವರ ಹುಟ್ಟೂರು ಮಂಡ್ಯ ಜಿಲ್ಲೆಯ ಅಕ್ಕಿ ಹೆಬ್ಬಾಳು. ಅವರು ಹಲವು ವರ್ಷಗಳವರೆಗೆ ಕರ್ನಾಟಕ ಸಾಹಿತ್ಯ ಮತ್ತು ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕರಾಗಿದ್ದರು. ಅವರದು ಬಹುಮುಖ ಪ್ರತಿಭೆ. ನಾಟಕ, ಪ್ರಬಂಧ, ಕತೆ, ಕಾದಂಬರಿ, ಪ್ರವಾಸ ಕಥನ, ವಿಡಂಬನ ಸಾಹಿತ್ಯ ಮೊದಲಾದ ಸಾಹಿತ್ಯದ ವಿವಿಧ ಪ್ರಕಾರಗಳನ್ನು ಅವರು ಸಂಪನ್ನಗೊಳಿಸಿದರು. ಬೆಂಗಳೂರು ಸೆಂಟ್ರಲ್ ಕಾಲೇಜಿನ ಪ್ರಾಧ್ಯಾಪಕರಾಗಿದ್ದ ಅವರು 1955 ರಲ್ಲಿ ನಿವೃತ್ತಿ ಹೊಂದಿದರು. ಅವರಿಗೆ 1974 ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, 1978 ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಗೌರವ ಡಿ.ಲಿಟ್ ಪ್ರಶಸ್ತಿ , 1984 ರಲ್ಲಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ದೊರೆತುವು. ಅವರು 2003 ರ ಆಗಸ್ಟ್ 23 ರಂದು ತಮ್ಮ 103 ನೇ ವಯಸ್ಸಿನಲ್ಲಿ ನಿಧನರಾದರು.

ಎ.ಎನ್. ಮೂರ್ತಿರಾವ್ ಅವರು ಪ್ರಸ್ತುತ ಪ್ರಬಂಧದಲ್ಲಿ ದಿವಾನಖಾನೆಯ ಅಂದ ಚೆಂದವನ್ನು ಹೆಚ್ಚಿಸಲು ಪಟ್ಟ ಶ್ರಮ, ಸುರಿದ ಹಣ, ಪಟ್ಟ ಸಂಕಟ ಮುಂತಾದುವುಗಳನ್ನು ವಿವರಿಸಿ ಹಾಸ್ಯದ ಹೊನಲನ್ನು ಹರಿಸಿದ್ದಾರೆ. ದಿವಾನಖಾನೆಯ ಸ್ವಚ್ಛತೆಯನ್ನು ಕಾಪಾಡಿಕೊಳ್ಳಲು ತಮ್ಮ ಹೆಂಡತಿ ಹಾಕಿದ ನೀತಿ ನಿಯಮಾವಳಿಗಳ ಬಗ್ಗೆ ಅವರಿಗೆ ಬೇಸರವಾಗುತ್ತದೆ. ಕೊನೆಯಲ್ಲಿ ದಿವಾನಖಾನೆಯ

ಸೌಂದರ್ಯದಲ್ಲಿ ಕಾಣುವ ಪಾಷಾಣ ಹೃದಯದ ನಿಶ್ಚಲ ಸೌಂದರ್ಯ ನನಗೂ ಬೇಡ ನನ್ನ ಆತ್ಮೀಯರಿಗೂ ಬೇಡ ಎಂದು ಹೇಳಿರುವ ಮಾತು ಎಷ್ಟೋ ಮನೆಗಳಲ್ಲಿ ಇಂದಿಗೂ ನಡೆಯುವ ನಿಜಸ್ಥಿತಿಯನ್ನು ಪ್ರತಿಬಿಂಬಿಸುತ್ತದೆ.

## I. ಕಠಿಣ ಪದಗಳ ಅರ್ಥ

ದಿವಾನಖಾನೆ =ಪಡಸಾಲೆ, ಹಜಾರ (Drawing Room); ಗಲಭೆ =ಗಲಾಟೆ; ಚಪ್ರಾಸಿ =ಕಚೇರಿಯ ಸಿಪಾಯಿ, ಬಿಲ್ಲೆ ಧರಿಸಿದ ಜವಾನ; ಅಂತರಿಕ್ಷ =ಆಕಾಶ; ದವಾಲಿ =ಬ್ಯಾಜ್‌ನಿಂದ ಕೂಡಿದ ಬೆಲ್ಟ್ ; ಏಕಾಏಕಿ =ಒಮ್ಮೆಲೆ, ಇದ್ದಕ್ಕಿದ್ದಂತೆ; ಮರ್ಯಾದಸ್ಥ =ಗೌರವಯುತ; ಚರಸ್ವತ್ತು =ಚಲಿಸುವ ಆಸ್ತಿ ; ಮೆತ್ತೆ =ಮೃದುವಾದ ಹಾಸು, ಸುಪ್ಪತ್ತಿಗೆ; ತೆತ್ತು =ಕೊಟ್ಟು ; ಅಣಿಯಾಗಿ =ಅಚ್ಚುಕಟ್ಟಾಗಿ; ಕುಲಾವಿ =ತಲೆಯುಡಿಗೆ, ಟೋಪಿ; ಪುನರ್ನಿರ್ಮಾಣ =ಮತ್ತೊಮ್ಮೆ ರಚಿಸುವುದು; ಶ್ವಪಚತನ =ಕೀಳುತನ; ಜೋಡು =ಪಾದರಕ್ಷೆ, ಮೆಟ್ಟು ; ಬಂದೀಖಾನೆ =ಸೆರೆಮನೆ, ಕಾರಾಗೃಹ; ಬಣ್ಣ ಮಾಸಲಾಗುವುದು =ಬಣ್ಣ ಕುಂದುವುದು; ಹೃದಯ ವಿದ್ರಾವಕ =ಮನಕರಗಿಸುವಂತಹ; ಅನ್ಯಮನಸ್ಕ =ಬೇರೆಯ ಕಡೆಗೆ ಮನಸ್ಸಿಟ್ಟವನು; ಚ್ಯುತಿ =ತೊಂದರೆ, ಹಾನಿ; ಭಂಗಿ =ರೀತಿ, ವಿಧಾನ; ಕುರುಳು =ಕೂದಲು; ಪಾಷಾಣ =ಕಲ್ಲು

## II. ಈ ಪ್ರಶ್ನೆಗಳಿಗೆ ಸಂಕ್ಷಿಪ್ತವಾಗಿ ಉತ್ತರಿಸಿ.

1. ಲೇಖಕರು ದಿವಾನಖಾನೆಯನ್ನು ಪ್ರವೇಶಿಸಲು ಏಕೆ ಹಿಂಜರಿದರು ?
2. ಮನೆಯಲ್ಲಿ ಜಮಖಾನೆ ಹಾಕಿದರೆ ಆಗುವ ಕುಂದುಕೊರತೆಗಳೇನು ?
3. ಲೇಖಕರಿಗೆ ಏಕೆ ಸಂಕಟ ಪ್ರಾರಂಭವಾಯಿತು ?
4. ಲೇಖಕರು ಮನೆಯ ಶೃಂಗಾರದ ಕಡೆಗೆ ಗಮನ ಹರಿಸಲು ಕಾರಣವೇನು ?
5. ದಿವಾನಖಾನೆಯನ್ನು ಹೇಗೆ ಸಿಂಗರಿಸಲಾಯಿತು ?
6. 'ಸಿಂಧು' ಪತ್ರಿಕೆಯಲ್ಲಿ ಕೊಠಡಿಯನ್ನು ಸಿಂಗರಿಸುವ ಬಗ್ಗೆ ಏನೆಂದು ತಿಳಿಸಲಾಗಿತ್ತು ?



7. ಕೊಠಡಿಯ ಅಲಂಕಾರ ಲೇಖಕರ ಗಮನವನ್ನು ಹೇಗೆ ಸೆಳೆಯಿತು ?
8. ಲಲಿತೆಯು ಲೇಖಕರನ್ನು ನೋಡಿ ಏಕೆ ಚೀರಿದಳು ?
9. ಲಲಿತೆಯು ಕೋಪಗೊಳ್ಳಲು ಕಾರಣವೇನು ?
10. ದಿವಾನಖಾನೆಯು ಲೇಖಕರ ಮನಸ್ಸಿನ ಮೇಲೆ ಯಾವ ಪ್ರಭಾವವನ್ನು ಬೀರಿತು ?

## III. ಈ ಪ್ರಶ್ನೆಗಳಿಗೆ ವಿವರವಾಗಿ ಉತ್ತರಿಸಿ.

1. ಲೇಖಕರು ಮನೆಕಟ್ಟಿದ ನಂತರ ಹೇಗೆ ಮನೆಯನ್ನು ಸಜ್ಜುಗೊಳಿಸಿದರು ?
2. ಲಲಿತೆಗೆ ದಿವಾನಖಾನೆಯನ್ನು ಅಂದ ಚೆಂದವಾಗಿಡಬೇಕೆಂಬ ಆಸೆ ಹೇಗೆ ಉಂಟಾಯಿತು ?
3. 'ಸಿಂಧು' ಪತ್ರಿಕೆಯಲ್ಲಿ 'ಗೃಹ ಶೃಂಗಾರ' ದ ಭಾಗವನ್ನು ಓದಿದ ನಂತರ ಲೇಖಕರ ಮನೆಯಲ್ಲಿ ಆದ ಮಾರ್ಪಾಟುಗಳೇನು ?
4. ಲಲಿತೆ ಲೇಖಕರಿಗೆ ಹಾಕಿದ ನಿಬಂಧನೆಗಳೇನು ?
5. ಲೇಖಕರ ಮಗ ರಾಮು ದಿವಾನಖಾನೆಗೆ ಬಂದಾಗ ಲಲಿತೆ ಏಕೆ ಕೋಪಿಸಿಕೊಂಡಳು ?
6. ಪರಿಪೂರ್ಣತೆಯನ್ನು ಪಡೆದ ದಿವಾನಖಾನೆಯ ಸೌಂದರ್ಯ ಲೇಖಕರ ಕಣ್ಣಿಗೆ ಸಿಂಗರಿಸಿದ ಶವದಂತೆ ಕಾಣಿಸಲು ಕಾರಣವೇನು ?
7. ಲೇಖಕರು ತಮ್ಮ ಪ್ರಿಯವಾದ ವಾಸಗೃಹ ಹೇಗಿರಬೇಕೆಂದು ಅಭಿಪ್ರಾಯ ಪಡುತ್ತಾರೆ ?

## IV. ಭಾಷಾಭ್ಯಾಸ

**1. ಈ ಪದಗಳನ್ನು ಸ್ವಂತ ವಾಕ್ಯಗಳಲ್ಲಿ ಉಪಯೋಗಿಸಿ.**

ಪ್ರವೇಶಿಸು, ಆತಂಕ, ಸಂತೃಪ್ತಿ, ಸೌಹಾರ್ದ, ಕಂಗೊಳಿಸು

2. **ವಿರುದ್ಧಾರ್ಥಗಳನ್ನು ಬರೆಯಿರಿ.**

   ಗೌರವ, ನಾಗರಿಕ, ಸ್ಪಷ್ಟ, ಪುಣ್ಯ, ಸಂತೋಷ, ಆತಂಕ, ಪವಿತ್ರ, ಆಧಾರ, ವ್ಯವಸ್ಥೆ, ಸ್ವಾತಂತ್ರ್ಯ, ಅನಾಸಕ್ತಿ

3. **ಈ ಪದಗಳನ್ನು ಬಿಡಿಸಿ ಸಂಧಿಯ ಹೆಸರು ಬರೆಯಿರಿ.**

   ಪುಷ್ಪಾಂಜಲಿ, ಕಾಸುಗಳ್ಳ, ಸಂದರ್ಭೋಚಿತ, ಉಪಾಹಾರ, ಗೃಹಾಧಿದೇವತೆ, ಘನೋದ್ದೇಶ.

4. **ಈ ಪದಗಳ ವಿಗ್ರಹ ವಾಕ್ಯ ಮಾಡಿ ಸಮಾಸಗಳನ್ನು ಹೆಸರಿಸಿ.**

   ಕಾಸುಗಳ್ಳ, ಪುಷ್ಪಪಾತ್ರೆ, ದೇವಾಲಯ

**V. ಚಟುವಟಿಕೆ**

1. ನಿಮ್ಮ ಮನೆಯ ದಿವಾನಖಾನೆಯನ್ನು ಹೇಗೆ ಸುಂದರವಾಗಿಡುವಿರಿ ಎಂಬ ಬಗ್ಗೆ ಪುಟ್ಟ ಪ್ರಬಂಧವನ್ನು ಬರೆಯಿರಿ.
2. ನಿಮ್ಮ ಮನೆಯ ಕೋಣೆಯನ್ನು ಸಜ್ಜು ಗೊಳಿಸುವ ಬಗ್ಗೆ ತರಗತಿಯಲ್ಲಿ ಒಂದು ಸಂಭಾಷಣೆಯನ್ನು ನಡೆಸಿ.
3. ನಿಮ್ಮ ಮನೆಯ ರೇಖಾಚಿತ್ರವನ್ನು ಬರೆಯಿರಿ.

---



# 2. ಮಾಸ್ಕೊ ಮಹಾನಗರದ ಉಪಚಾರ

**- ಕು.ಶಿ. ಹರಿದಾಸಭಟ್**

ರಾತ್ರಿ ತೆಳುವಾಗಿ ಬೀಳುತ್ತಿದ್ದ ಹಿಮ ಮುಂಜಾನೆ ಏಳುವ ಹೊತ್ತಿಗೆ ಭೂಮಿಯ ಮೇಲೆ ಹತ್ತಿಯ ಹಾಸುಗೆ ಬಿಡಿಸಿಬಿಟ್ಟಿತು. ಇಕ್ಕೆಲದ ಮರಗಳ ಮೇಲೆ, ಮನೆಗಳ ಮಾಡಿನ ಮೇಲೆ ಬಿಳೀ ಚಾದರ ಹೊದೆಸಿತು. ಸೂರ್ಯನೂ ಕಣ್ಣಿಗೆ ಕಾಣಿಸಲಿಲ್ಲ. ಹಿಮದ ರೇಕುಗಳದೇ ಮೌನಪತನ. ಎರಡನೆ ದಿನ ಒಂದಡಿ ಎತ್ತರದ ಹಿಮದ ಆಚ್ಛಾದನೆ — ರಸ್ತೆಯ ನಟ್ಟನಡುವಿನ ಭಾಗ ಮಾತ್ರ ವಾಹನ ಸಂಚಾರದಿಂದಾಗಿ ಹಿಮವಿರಹಿತ. ಉಳಿದಲ್ಲಿ ಎತ್ತ ತಿರುಗಿದರೂ ಹಿಮದ ಹಾಸು; ಬೀಸು. ನಡೆದರೆ ಬೂಟು ಮುಳುಗುತ್ತದೆ. ಹೆಜ್ಜೆಯ ಮೇಲೆ ಹೆಜ್ಜೆಯನ್ನಿಕ್ಕುವುದು ಇಲ್ಲಿನ ನಡಿಗೆಯ ರೀತಿ. ಅಂಥ ಮುಂಜಾನೆ, ಅಂಥ ಚಳಿ, ಅಂಥ ಹಿಮದಲ್ಲೂ ಜನರು ಕೆಲಸಕ್ಕೆ ಹೋಗುತ್ತಾರೆ, ಮಕ್ಕಳನ್ನು ಶಾಲೆಗೆ ಎಳೆದುಕೊಂಡು ಹೋಗುತ್ತಾರೆ. ಉಪವನಗಳ ಹಿಮಗಡ್ಡೆಗಳ ನಡುವೆ ಮಕ್ಕಳು ಹಿಮದ ಚಂಡಾಟ ಆಡುತ್ತಾರೆ. ದಾರಿಯ ಮೇಲೆ ಬಿದ್ದ ಹಿಮ ಗುಡಿಸಲು ಮಾರಿಯಂತ್ರಗಳನ್ನು ಕಟ್ಟಿಕೊಂಡ ಮೋಟಾರುಗಳಿವೆ. ಹತ್ತಿಪ್ಪತ್ತು ಕಾರುಗಳ ನಡುವೆ ಇಂಥ ಒಂದು ಯಂತ್ರ ಅಹರ್ನಿಶಿ ಕಾರ್ಯತತ್ಪರವಾಗಿದ್ದರೆ ಮಾತ್ರ ದಾರಿ ವಾಹನಯೋಗ್ಯವಾಗಿ ಉಳಿದೀತು. ಹಿಮ ಗುಡಿಸುವುದೇ ಇಲ್ಲಿನ ಹಿಮಗಾಲದ ಮಹೋದ್ಯಮ. ಗುಪ್ತ ಹೇಳಿದರು: 'ಚಳಿಗಾಲದ ನಾಲ್ಕು ತಿಂಗಳು ನಮ್ಮ ಕಾರುಗಳೆಲ್ಲ ಹಿಮಗತವಾಗಿಬಿಡುತ್ತವೆ. ಇದಕ್ಕೆ ನೀವು ವಿಶೇಷ ಪ್ರಯಾಸಪಡಬೇಕಾಗಿಲ್ಲ, ಮನೆಯ ಮುಂದೆ ಕಾರಿಡುತ್ತೀರಲ್ಲ ಅಲ್ಲೇ ಅದರ ಮೇಲೆ ಬಿದ್ದ ಹಿಮ ಗುಡ್ಡದಂತೆ ಬೆಳೆದು ಹಿಮವಲ್ಮೀಕವನ್ನು ರಚಿಸಿಬಿಡುತ್ತದೆ. ಹಿಮಗಾಲ ಮುಗಿದ ಮೇಲೆ ಕೊಡಲಿಯಿಂದ ಹಿಮದ ಹೊದಿಕೆಯನ್ನು ಕಡಿದು ನಿಮ್ಮ ಕಾರನ್ನು ನೀವೇ ಅಗೆದು ತೆಗೆಯಬೇಕು. ಆಮೇಲೆ ಬಿಸಿನೀರಿನಲ್ಲಿ ಸ್ನಾನಮಾಡಿಸಿ ಸ್ವಚ್ಛ ಮಾಡಬೇಕು. ಇದೊಂದು ವಾರ್ಷಿಕ ಆಚರಣೆ-ಪ್ರತಿಯೊಬ್ಬರಿಗೂ. ಹಾಗಾಗಿ ಚಳಿಗಾಲದಲ್ಲಿ ಕಾರುಗಳ ಓಡಾಟ ಕಡಿಮೆ.' ಹಿಮದಲ್ಲಿ ನಡೆಯುವುದೆಷ್ಟೋ ಕಾರು ಬಿಡುವುದೂ ಅಷ್ಟೇ ಅಪಾಯ. ಒಸ್ತಾಂಕಿನಿ ಹೋಟೆಲನ್ನು ಕಂಡು ಹಿಡಿಯಲು ಎರಡು ಹೆಗ್ಗುರುತು ಹೇಳುತ್ತಾರೆ. ಒಂದು ಸೋವಿಯತ್ ರಶಿಯದ ಅತ್ಯುನ್ನತ ಟಿವಿ ಗೋಪುರ. ಮತ್ತೊಂದು ಮೊಸ್ಕೊದ ಪ್ರಖ್ಯಾತ ಸಸ್ಯೋದ್ಯಾನ. ಗೋಪುರದ ಸುತ್ತಮುತ್ತಲೂ ಹಿಮ. ಸಸ್ಯೋದ್ಯಾನದಲ್ಲಿರುವ ಎಲ್ಲ ಸಸ್ಯಗಳೂ ಈಗ ಬಿಳೀ ಗಡ್ಡ,

ಹೊದಿಕೆ ಹೊದ್ದಂಥವು. ಒಸ್ತಾಂಕಿನಿಯಿಂದ ಮಾಸ್ಕೊ ನಗರಕ್ಕೆ ಹೋಗಲು ಮುಕ್ಕಾಲು ತಾಸು ಹಿಡಿಯುತ್ತದೆ — 30 ಕಿ.ಮೀ. ದೂರ.

ಹದಿನೈದು ದಿನ ಒಳ್ಳೆಯ ಹವೆ, ಉಪಚಾರಗಳ ಸವಿಯುಂಡ ನಮಗೆ ಮಾಸ್ಕೊ ಮಹಾನಗರ ನೀಡಿದ ಎರಡನೆಯ ಸ್ವಾಗತ ಅಲ್ಲಿನ ವಾತಾವರಣಕ್ಕೆ ತಕ್ಕ ಹಾಗೆ ಇತ್ತು ಎನ್ನದಿದ್ದರೆ ತಪ್ಪಾದೀತು. 'ಏನೆಲ್ಲಾ ಕ್ರಾಂತಿ ಮಾಡಿದಿರಿ ನೀವು, ಈ ಚಳಿಗೆ ಏನಾದರೂ ಮಾಡದೆ ಇನ್ನೂ ಇದ್ದೀರಲ್ಲಾ ?' ಎಂದು ಕೇಳಿದೆ. ಒಸ್ತಾಂಕಿನಿ ಹೋಟೆಲಿನ ಒಳಗಡೆ ಇದ್ದ ರೆಸ್ಟುರಾ ರಿಪೇರಿಗೆ ಬಿದ್ದಿದ್ದರಿಂದ ಊಟ ತಿಂಡಿಗೆ ಹೊರಗಡೆ ಹೋಗಬೇಕಾಗಿತ್ತು. ಎರಡೇ ಎರಡು ಫರ್ಲಾಂಗು ದೂರವಾದರೂ ಹಿಮಪಾತದ ಚಳಿಗೆ ಯೋಜನೆ ನಡೆದಷ್ಟು ಕಠೋರವಾಗಿರುತ್ತಿತ್ತು. ಮೂಗು-ಕಣ್ಣು ಎರಡನ್ನು ಬಿಟ್ಟು ಉಳಿದೆಲ್ಲ ಅಂಗ ಭಾಗಗಳನ್ನು ಮುಚ್ಚಿ ಮರೆಮಾಡಿ ಓಡುತ್ತಲೇ ರೆಸ್ಟುರಾದ ಬಾಗಿಲು ಬಡಿಯುತ್ತಿದ್ದೆವು. ಬೆಳಗಿನ ಉಪಾಹಾರ, ರಾತ್ರಿಯ ಊಟಗಳನ್ನು ನಾನು ನಿಲ್ಲಿಸಿದೆ — ಈ ಯಮಯಾತನೆಗೆ ಅಂಜಿ. ಭಾಗವತರೂ ಮದ್ದಲೆಗಾರರೂ ಐದು ದಿನ 'ಸೆರೆ ಮನೆವಾಸ' ಅನುಭವಿಸಿದರು. ಕ್ಲಪ್ತಕಾಲಕ್ಕೆ ಅಂದರೆ 10 ಗಂಟೆಗೆ ಬ್ರೇಕ್ ಫಾಸ್ಟ್ , 3 ಗಂಟೆಗೆ ಲಂಚ್ — ಹೊರಗಿಂದ ಊಟಕ್ಕೆ ಹೋದ ಸಂಗಡಿಗರು ತಂದುಕೊಟ್ಟದ್ದು — ಈ ವೇಳಾಪಟ್ಟಿಗೆ ಅವರು ಹೊಂದಿಕೊಂಡು ಬದುಕುವ ದಾರಿ ಹುಡುಕಿಕೊಂಡರು. ಸದ್ಯ ಇದು ನಮಗೆ ಹೇಳಿಸಿದ ಊರೂ ಅಲ್ಲ , ಹವೆಯೂ ಅಲ್ಲ. ಸ್ಪುಟ್ನಿಕ್ ಹಾರಿಸಿದ ಇವರಿಗೆ ಈ ಚಳಿಯನ್ನು ಹಾರಿಸಿ ಓಡಿಸಲು ಯಾಕೆ ಆಗಲಿಲ್ಲ ? ಎಂಬುದು ನಮ್ಮ ಭಾಗವತರ ಪ್ರಶ್ನೆ. ಉಳಿದವರು ಹೊಟ್ಟೆಪಾಡಿಗೆ ಒದ್ದಾಡಿದಷ್ಟು ಬೇರೆ ಯಾವ ದೇಶದಲ್ಲೂ ಒದ್ದಾಡಿರಲಾರರು. ಅಂಥಲ್ಲಿಯೂ ಪ್ರಭಾಕರ ಪೈಗಳ ಊಟದ ಸೊಗಸುಗಾರಿಕೆಯನ್ನು ಹೇಳದಿದ್ದರೆ ಅನ್ಯಾಯವಾದೀತು. ಉಪ್ಪಿನಕಾಯಿ ಮರೆತುಬಂದದ್ದೇ ಆದರೆ ಅವರು ಸಂಜೀವನಿಗೆ ಶಿಕ್ಷೆ ವಿಧಿಸಿಬಿಡುತ್ತಿದ್ದರು. ಮತ್ತೊಮ್ಮೆ ಆತ ಹೋಟೆಲ್ ರೂಮಿಗೆ ಹೋಗಿ ಅದನ್ನು ಹಿಡಿದುಕೊಂಡು ಬರಬೇಕು. 'ಏನು ತಿಂದರೂ ತಿನ್ನದಿದ್ದರೂ ಆಯುಷ್ಯವಿದ್ದರೆ ಬದುಕುತ್ತೀ ಮಾರಾಯಾ, ನಾನು ಗ್ಯಾರಂಟಿ ಕೊಡುತ್ತೇನೆ. ಮಹಾತ್ಮಾ ಗಾಂಧಿ 21 ದಿನ, ಗೋಕಾಕ ಚಳವಳಿಗಾರ 71 ದಿನ ಊಟ ಮಾಡದೆ ಬದುಕಿದ್ದನ್ನು ನೆನಪುಮಾಡಿಕೊಂಡರೆ ಧೈರ್ಯವಾಗುತ್ತದೆ' ಎಂದು ನಾನು ಉಪದೇಶ ಮಾಡಿದ್ದು ವ್ಯರ್ಥ. ಬೇಯಿಸಿದ ಅನ್ನ, ಅದರ ಮೇಲೆ ಸೂಪ್ ಬೀಳುವ ಕಾಲಕ್ಕೆ ಉಪ್ಪಿನಕಾಯಿ ಭರಣಿನದರಿಗೆ ಬೀಳದಿದ್ದರೆ ಪೈಗಳಿಗೆ ಕಸಿವಿಸಿಯೊ



ಕಸಿವಿಸಿ! ಪ್ಲೇಟು, ಚಮಚಗಳ ನಾಗರಿಕ ವರ್ತನೆಯನ್ನೂ ತ್ಯಜಿಸಿ ಕೈಬಾಯಿಯ ಡೈರೆಕ್ಟ್ ಆ್ಯಕ್ಷನ್ — ನೇರ ಕಾರ್ಯಾಚರಣೆ ಅವರದು. ಅವರ ಗಡಿಬಿಡಿ ನನಗೆ ಉಪ್ಪಿನಕಾಯಿಗಿಂತಲೂ ಸ್ವಾದನೀಯವಾಗಿತ್ತು.

ಅಯ್ಯೊ, ಮಾಸ್ಕೋಕ್ಕೆ ಬಂದಮೇಲೆ ನಮ್ಮ ರಾಯಭಾರಿಗಳನ್ನು ನೋಡಲೇಬೇಕಲ್ಲವೆ ? ಎಂದಿದ್ದರು ಗುಪ್ತ ಮಹಾಶಯರು ನನ್ನಲ್ಲಿ ಗುಪ್ತವಾಗಿ. 'ಈ ಚಳಿಯಲ್ಲಿ ನಿಮ್ಮ ಕಚೇರಿಯನ್ನು ಹುಡುಕಿಕೊಂಡು ಅಲೆಯಲಾರೆ; ನೀವೇ ನನ್ನನ್ನೊಯ್ಯುವುದಾದರೆ ಆದೀತು' ಎಂದಿದ್ದೆ. ಅನಾತೊಲಿ ಹತ್ತಿರ ಹೇಳಿ — ನಮ್ಮಲ್ಲಿ ತಂದುಬಿಡುತ್ತಾನೆ ಎಂದಿದ್ದರು ಗುಪ್ತ. ಹಾಗೆಯೆ ಮಾಡಿದೆ. 19ನೇ ತಾರೀಕು ಘನತೆವೆತ್ತ ಭಾರತದ ರಾಯಭಾರಿಗಳನ್ನು ನೋಡದವನಲ್ಲ — ದೇವರಾಯರು ಬಿಡಿ, ಇತಾಲಿಯಲ್ಲಿ ಎಂತೆಂಥ ರಾಯಭಾರಿಗಳನ್ನು ತೂಕಮಾಡಿದ್ದೇನೆ. ಇತಾಲಿಯನ್ ರಾಷ್ಟ್ರಾಧ್ಯಕ್ಷರ ಕೈಕುಲುಕಿದ್ದೇನೆ. ಕೆನಡಿ-ರಾಧಾಕೃಷ್ಣನ್ ಇಬ್ಬರು ಅಧ್ಯಕ್ಷರನ್ನು ಒಂದೇ ಸಲಕ್ಕೆ ಭೇಟಿ (ಕಣ್ಣಿನಲ್ಲಿ) ಮಾಡಿದ್ದೇನೆ. ಇಂಥ ಸ್ವತಃ ನನಗೆ ರಾಯಭಾರಿಗಳೆಂದರೆ ಕರತಲಾಮಲಕವೆಂಬ ಭಾವನೆ ನಿಮಗೆ ಬಂದರೆ ತಪ್ಪಲ್ಲ. ಆದರೆ ಇಂಡಿಯನ್ ರಾಯಭಾರಿ ಕಚೇರಿ ಎಂದರೆ ಹೊರಸುತ್ತಿನಲ್ಲೇ ಇರಲು ಅಪೇಕ್ಷಿಸುವವನು ನಾನು. ದೂರದಲ್ಲಿಯೇ ವಂದಿಸಿದರೆ ಚೆನ್ನೆಂಬುದು ವಿದೇಶಗಳಿಗೆ ಹೋದ ಭಾರತೀಯ ಪ್ರವಾಸಿಗಳ ನಿತ್ಯಸಂಕಟ. ಇದರಲ್ಲಿ ಪ್ರವಾಸಿಗಳ ದೃಷ್ಟಿದೋಷ ಎಷ್ಟಿದೆಯೋ ತಿಳಿಯದು. ಅಂತೂ ಜನಜನಿತ ವಾರ್ತೆ ಇದು. ಪ್ರಸ್ತುತ ಯಾತ್ರೆಯ ಮಟ್ಟಿಗೆ ಹೇಳುವುದಾದರೆ, ನಮ್ಮ ಮಟ್ಟಿಗೆ, ಎಲ್ಲ ಕಡೆಗೂ ನಮ್ಮ ರಾಯಭಾರಿ ಕಚೇರಿಗಳು ನಮ್ಮನ್ನು ಚೆನ್ನಾಗಿ ನೋಡಿಕೊಂಡಿರುವುದಕ್ಕೆ ನಾನು ಸಾಕ್ಷಿಯಾಗಿದ್ದೇನೆ. ಯುಗೋಸ್ಲಾವಿಯದಲ್ಲಿ ಎಚ್.ಈ. ಚಿಬ್ ಅವರು ರಾಜಧಾನಿಯನ್ನು ತ್ಯಜಿಸಿ ಲ್ಯುಬ್ಲಿಯಾನದವರೆಗೆ ಪಾದ ಬೆಳೆಸಿ ನಮ್ಮ ಆಟ ನೋಡಿ ಹೋಗಿದ್ದಾರೆ. ಲಂಡನ್ ಹೈ ಕಮೀಶನರ್ ಅದೃಶ್ಯರಾಗಿದ್ದರೂ ಏಕ್ ಸಮೋಸಾ-ಏಕ್ ವಡೆಯ ಕಾಕ್‌ಟೇಲ್ ಕೊಟ್ಟು ಕೃತಾರ್ಥರಾಗಿದ್ದಾರೆ. ಹಂಗೇರಿಯಲ್ಲಿ ಎಚ್.ಇ. ವರ್ಮಾ ಅವರು ನಮ್ಮ ಮೇಲೆ ಪ್ರೀತಿಯ ಮಳೆ ಕರೆದು ನಮ್ಮ ಸಾಲಿನಲ್ಲೇ ಊಟಕ್ಕೆ ಕೂತಿದ್ದಾರೆ. ಮಾಸ್ಕೊದ ಭಾರತೀಯ ರಾಯಭಾರಿ ಅಹುಜಾ ಒಂದು ತಾಸಿನವರೆಗೆ ನಮ್ಮ ಕಲಾವಿದರ ಯೋಗಕ್ಷೇಮ ವಿಚಾರಿಸಿದ್ದಾರೆ. ಯಕ್ಷಗಾನದ ಕಲಾಸನ್ನಿವೇಶದ ವಿವರ ತಿಳಿದುಕೊಂಡು ನಮ್ಮ ಸಂಸ್ಕೃತಿ ವಿನಿಮಯ ವಿಭಾಗ ಇನ್ನಷ್ಟು ಸಂಘಟಿತವಾಗಿ ಕೆಲಸ

ಮಾಡುವ ಅಗತ್ಯವನ್ನು ನನ್ನ ಹತ್ತಿರ ಹೇಳಿದ್ದಾರೆ. 'ಈ ಕಥಕ್ಕಳಿಯವರು ಸಂಪ್ರದಾಯ ಎಂದು ಮೈಬಿಟ್ಟುಕೊಂಡು ರಂಗದ ಮೇಲೆ ಬರುತ್ತಾರಲ್ಲಾ, ಇದರ ಪರಿಣಾಮ ಇಲ್ಲಿ ವಿಪರೀತ ಅರ್ಥ ಕೊಡುತ್ತದೆ ಗೊತ್ತೆ? ಇಂಡಿಯದ ಜನ ಇನ್ನೂ ಅರೆನಗ್ನಾವಸ್ಥೆಯ ದಾರಿದ್ರ್ಯರೇಖೆಯ ಸಮೀಪ ಇದ್ದಾರೆಂಬುದಕ್ಕೆ ನಾವೇ ಪ್ರತ್ಯಕ್ಷ ಮಾದರಿ ತೋರಿಸಿಕೊಟ್ಟ ಹಾಗೆ ಆಗುತ್ತದೆ' ಎಂದಿದ್ದರು. 'ನಿಮ್ಮಲ್ಲಿ ಕುಡಿತ ಹೇಗಿದೆ?' ಎಂದು ಕೇಳಿದರು. 'ಕೊಟ್ಟರೆ ಎಷ್ಟೂ ಸ್ವೀಕಾರ ಮಾಡಬಲ್ಲ ಮನೋಬಲ ಉಳ್ಳವರಿದ್ದಾರೆನ್ನಿ; ಆದರೆ ನಮ್ಮ ಶಿಸ್ತಿನಲ್ಲಿ ಕುಡಿತ-ಮಾಂಸ ವರ್ಜ್ಯ' ಎಂದೆ. ಅದೇ ಸರಿ. 'ನೋಡಿ, ನಮ್ಮ ಭಾರತದ ಒಂದು ತಂಡಕ್ಕೆ ಈ ಸಲ ಎಲ್ಲೂ ಮಾದಕಪೇಯ ಕೊಡಬಾರದು ಎಂದು ಇಂಡಿಯಾ ಸರ್ಕಾರ ಸುತ್ತೋಲೆ ಹೊರಡಿಸುವಷ್ಟು ಅವರು ಹಿಂದಿನ ಸಲ ಕೀರ್ತಿ ಸಂಪಾದನೆ ಮಾಡಿಬಿಟ್ಟಿದ್ದರು' ಎಂದರು ರಾಯಭಾರಿ ಅಹುಜಾ. ವಿದೇಶದ ಸ್ವತಂತ್ರ ವಾತಾವರಣದಲ್ಲಿ ಗೂಟ ಬಿಡಿಸಿಕೊಂಡ ಎಳಗರುವಿನಂತಾಗುತ್ತಾರೆ ನಮ್ಮ ಜನ. ಬುದ್ಧಿ, ವಿವೇಕ — ಎರಡನ್ನೂ ಕಳೆದುಕೊಂಡಿರುತ್ತಾರೆ.

ರಾಯಭಾರಿ ವಿಷ್ಣು ಅಹುಜಾ ಅವರು ಹಿಂದೆ ದೇವರಾಯರ ಜತೆಗೆ 1950 ರ ದಶಕದಲ್ಲಿ ಮಾಸ್ಕೊದಲ್ಲಿದ್ದರಂತೆ. ಆಮೇಲೆ ಸುತ್ತಿ ತಿರುಗಿ ಕಳೆದ ವರ್ಷ ಇಲ್ಲಿಗೆ ರಾಯಭಾರಿಯೂ ಆದರು. ನಮಗೆ ಯೋಗುರ್ತ್ ಸರಿಯಾಗಿ ಸಿಗುವುದಿಲ್ಲವೆಂದು ಭಾವಿಸಿ ಗುಪ್ತರನ್ನು ಕರೆದು ತನ್ನ ಪಾಕೀಟಿಂದ ಕೂಪನ್ ತೆಗೆದು ಇವರಿಗೆ ಬೇಕಾದಷ್ಟು ಯೋಗುರ್ತ್ ತೆಗೆಸಿಕೊಡು ಎಂದರು. ಕಮ್ಮಿ ಬಿದ್ದರೆ ಇನ್ನಷ್ಟು ಕೊಡಿಸು ಎಂದು ಹೇಳಿದ್ದು ಕರುಣೆಯಿಂದ. ಊಟದ ಹೊತ್ತಿಗೆ ದೇವರಾದರೂ ಸರಿಯೆ ಯೋಗುರ್ತ್ (ಮೊಸರು) ರೂಪದಲ್ಲಿ ಪ್ರತ್ಯಕ್ಷನಾಗಬೇಕೆಂದು ಪ್ರಾರ್ಥಿಸುವ ನಮಗೆ ಇದರಿಂದ ಎಷ್ಟು ಸಂತೋಷವಾಯಿತು ಬಲ್ಲಿರಾ ? ಅಹುಜಾರಿಗೆ ವಂದನೆ ಹೇಳಿ ಮೊದಲ ಆಟಕ್ಕೆ ಬರಲೇಬೇಕೆಂದು ವಿನಂತಿಸಿ ಗುಪ್ತರ ಬೆನ್ನು ಹಿಡಿದೆನೋ, ಯೋಗುರ್ತ್ ಅನುಸಂಧಾನಕ್ಕೆ ಹೊರಟೆನೋ ಹೇಳಲಾರೆ. ಮಾರನೆ ದಿನದ ಮೊದಲ ಪ್ರದರ್ಶನ ಪಂಚವಟಿ — ಅದಕ್ಕೆ ರಾಯಭಾರಿಗಳು ದಂಪತಿ ಸಮೇತ ಆಗಮಿಸಿದರು. ನಗರಮಧ್ಯದ ಸಟಿರಾ ರಂಗಮಂದಿರ ಭರ್ತಿ ತುಂಬಿತುಳುಕುತ್ತಿತ್ತು. ಒಂದೆರಡು ದಿನಗಳ ಮುನ್ನ ಮಾತ್ರ ಟಿಕೀಟು ಮಾರಲು ತೊಡಗಿದರಂತೆ — ಅಷ್ಟರೊಳಗೆ ಟಿಕೀಟು ಪೂರ್ತಿ ಮಾರಾಟವಾಯಿತು. ಮಾಸ್ಕೊದಲ್ಲಿ ನಾಟಕ, ಅಪೆರಾ ಎಂದರೆ ಜನ ಮುಗಿಬೀಳುತ್ತಾರೆ. ಸಿನಿಮಾ ಕ್ಯೂನಂತೆ ಅಲ್ಲಿ ನಾಟಕ



ಟಿಕೀಟಿನ ಕ್ಯೂಗಳು. ನೀವು ಇನ್ನು ಹತ್ತು ಆಟ ಹಾಕಿದರೂ ಇಲ್ಲಿ ಜನ ಇರುತ್ತಾರೆ ಎಂದಳು ಒಬ್ಬ ರಶಿಯನ್ ಮಹಿಳೆ. ಪಂಚವಟಿಯ ಮಧ್ಯಂತರಕಾಲದಲ್ಲಿ ಥೇಟರಿನ ಇನ್ನೊಂದು ಭಾಗದಲ್ಲಿ ಒಂದು ಸಣ್ಣ ಸತ್ಕಾರಕೂಟದಲ್ಲಿ ಮತ್ತೆ ನಮ್ಮ ರಾಯಭಾರಿಗಳ ದರ್ಶನವಾಯಿತು. ಪ್ರದರ್ಶನ ಮುಗಿದ ತರುವಾಯ ಚೌಕಿಗೆ ಬಂದ ಶ್ರೀಮತಿ ಅಹುಜಾ ಅವರು ಭಾಗವತರನ್ನು ಮತ್ತೊಮ್ಮೆ ಹಾಡಲು ಹೇಳಿದರು. ವಿಚಿತ್ರವೇನೆಂದರೆ ಅವರನ್ನು ಆಕರ್ಷಿಸಿದ ಹಾಡು ರಾವಣಸನ್ಯಾಸಿಯ ಹಾಡು — 'ಭಿಕ್ಷವ ನೀಡೆಮಗೆ, ತಾಯಿ ಭಿಕ್ಷವ ನೀಡೆಮಗೆ.' ನಮ್ಮ ನಾವುಂದ ಮಹಾಬಲನ ಹತ್ತಿರ ಅವರು ಇದೇ ಭಾಗವನ್ನು ನಟಿಸಲು ಹೇಳದಿದ್ದುದು ದೊಡ್ಡದು. ನಿಜಕ್ಕೂ ನಮ್ಮ ನಾವುಂದನ ಸನ್ಯಾಸಿ ವೇಷ ಕಪಟಸನ್ಯಾಸಿಯದ್ದಲ್ಲ, ನಿಜವಾದ ಸನ್ಯಾಸಿಯದ್ದೇ ಆಗಿರುತ್ತಿತ್ತು ; ಊರಿನ ಮೇಳಗಳಲ್ಲಿನ ಪುಷ್ಕಳ ಮಾತುಗಾರಿಕೆಯೂ ಇದೆ ಆತನಲ್ಲಿ. ಬಿಟ್ಟರೆ ಏನೇನೋ ಮಾತಾಡಬಲ್ಲಂಥ ವಿದ್ವತ್ತಿದೆ. 'ದೇಶ ದೇಶ ಸುತ್ತಿದರೂ ನಮ್ಮ ಹೊಟ್ಟೆ ತುಂಬುವುದಿಲ್ಲ' ಎಂದು ಕಪಟ ರಾವಣ ಹೇಳಿದನೋ ಯಕ್ಷಗಾನ ಕಲಾವಿದರ ಸಮಗ್ರ ಪ್ರತಿನಿಧಿಯಾಗಿ ನಾವುಂದ ಮಹಾಬಲನೇ ನುಡಿಸುತ್ತಿದ್ದನೋ? ಯಕ್ಷಗಾನದ ಸೌಭಾಗ್ಯವೆಂದರೆ ಯಾವನೇ ಕಲಾವಿದ ಯಾವದೇ ಅಕ್ಷಾಂಶದಲ್ಲಿ ನನಗೆ ಸಿಕ್ಕಿದ್ದು ಹೆಚ್ಚಾಯಿತು ಎಂದು ಇವತ್ತಿನವರೆಗೆ ಉಪಚಾರಕ್ಕಾದರೂ, ಕನಸಿನಲ್ಲಾದರೂ ಹೇಳಿದವನಲ್ಲ! ಯಕ್ಷಗಾನದ ಜೀರ್ಣಶಕ್ತಿ ಅಂಥದು. ಅಸಾಮಾನ್ಯ, ಅದ್ಭುತ.

ಮಾಸ್ಕೊ ದೇಖೋ ಮಾಡಲು ಒಂದು ಹೊತ್ತು ಇಂಟೂರಿಸ್ಟ್ ಬಸ್ಸಿನಲ್ಲಿ ಅತ್ತಿತ್ತ ಸುಳಿದಾಡಿದೆವು. ಮಾಸ್ಕೊ ವಾರ್ಸಿಟಿ ಕಟ್ಟಡ, ಸ್ಪುಟ್ನಿಕ್ ಸ್ಮಾರಕ, ಬೊಲ್ಶೊಯಿ ಥಿಯೇಟರ್, ಲೆನಿನ್‌ಸ್ಕಿ ಮಾರ್ಗ, ಗಾರ್ಕಿ ಬೀದಿ, ಮಾಸ್ಕೊ ನದಿ — ಇತ್ಯಾದಿ ನಗರದ ಗುರುತುಗಳನ್ನು ಬಸ್ಸಿನ ಕಿಟಿಕಿಯೊಳಗಿಂದಲೆ ನೋಡಿ ಧನ್ಯರಾದೆವು. ಜಾಹೀರಾತುವಿರಹಿತವಾದ ಹಾದಿಬೀದಿಗಳನ್ನು ನೋಡಿ ಮನಸ್ಸಿಗೆ ನೆಮ್ಮದಿಯಾಯಿತು. ಇನ್ನು ನಿಮಗೆ ಜಾಹೀರಾತು ಬೇಕೇಬೇಕೆಂದರೆ ಹಿರಿಯಣ್ಣ ಬ್ರೆಜ್ನೇವ್ ಅವರ ಬೃಹತ್ ಚಿತ್ರ ಮತ್ತು ಅದರ ಪಕ್ಕದಲ್ಲೇ ಬರೆದ ದೇಶಭಕ್ತಿಯ ವಚನಗಳು ಅಲ್ಲಿ-ಇಲ್ಲಿ ನೋಡಲು ದೊರೆತಾವು. ಮಾಸ್ಕೊದ ಪ್ರಸಿದ್ಧ ಮಳಿಗೆ (ಡಿಪಾರ್ಟ್‌ಮೆಂಟ್ ಸ್ಟೋರ್) ಎಂದರೆ 'ಗೂಮ್' — ಇಲ್ಲಿ ದಿನ ಒಂದಕ್ಕೆ 3 ಲಕ್ಷ ಜನ ಗಿರಾಕಿಗಳು, ನೋಟಕರೂ ಬರುತ್ತಾರಂತೆ. 30 ಮಿಲಿಯ ರೂಬಲ್ ವ್ಯಾಪಾರವಾಗುತ್ತದಂತೆ. ಇದು ಮುಂಬಯಿಯ ಕ್ರಾಫರ್ಡ್ ಮಾರ್ಕೆಟಿನ ತದ್ರೂಪ.

ಇಲ್ಲಿಲ್ಲದ್ದು ಎಲ್ಲೂ ಇಲ್ಲ. ಹಾಂ, ಮರೆತೆ, ಗೊಂಬೆಗಳ ಮಟ್ಟಿಗೆ ಇನ್ನೊಂದು ಮಳಿಗೆ ಇದೆ. ಗೊಂಬೆ ಅಲ್ಲವಾದರೆ ಜನದಟ್ಟಣೆ ನೋಡಲಿಕ್ಕಾದರೂ ನೀವು ಡೆಟ್‌ಸ್ಕಿಮಿರ್‌ಗೆ ಹೋಗಬೇಕು ಎಂದಿದ್ದರು ಗುಪ್ತಜೀ. ಡೆಟ್‌ಸ್ಕಿ ಅಂದರೆ ಮಕ್ಕಳು, ಮಿರ್ ಅಂದರೆ ಪ್ರಪಂಚ. ಈ 'ಬಾಲಪ್ರಪಂಚ'ದ ತುಂಬಾ ದೊಡ್ಡವರೇ ದೊಡ್ಡವರು — ಅಂದರೆ ಮಕ್ಕಳಿಗಾಗಿ ಗೊಂಬೆಯನ್ನು ತರಲು ಗುಂಪುಕಟ್ಟಿ ತಿರುಪತಿ ದೇವಸ್ಥಾನಕ್ಕೆ ನುಗ್ಗುವಂತೆ ನುಗ್ಗುತ್ತಾರೆ. ಪ್ಲಾಸ್ಟಿಕ್ ಗೊಂಬೆ ಒಂದು ಕಡೆ, ಚಲಿಸುವ ಯಾಂತ್ರಿಕ ಗೊಂಬೆಗಳು ಇನ್ನೊಂದು ಕಡೆ, ಮಕ್ಕಳ ವಾದ್ಯಗಳೊಂದೆಡೆ, ಎಷ್ಟೆಷ್ಟೋ ವಿಭಾಗಗಳು. ಒಂದು ಗೊಂಬೆಯನ್ನು ಕಸಿದುಕೊಂಡು ದುಡ್ಡು ಕೊಟ್ಟು ಬರಬೇಕಾದರೆ ಕ್ಯೂನಲ್ಲಿ ಒಂದು ತಾಸು ಹಿಡಿದರೂ ಹಿಡಿಯಿತೇ. ರಶಿಯನ್ನರಿಗೆ ಸಹನೆ ಇರುವಷ್ಟು ಯಾರಿಗೂ ಇರಲಾರದು ಅನಿಸುತ್ತದೆ — ಈ ಕ್ಯೂಗಳನ್ನು ನೋಡಿದರೆ.

20ನೇ ತಾರೀಕು ಮುಂಜಾನೆ ಅನಾತೊಲಿ ನಮ್ಮನ್ನು ಮಾಸ್ಕೊದ ಪ್ರಾಚ್ಯ ಸಂಶೋಧನ-ಅಧ್ಯಯನ ಸಂಸ್ಥೆಗೆ ಕರೆದುಕೊಂಡು ಹೋಗಲು ನಿಶ್ಚಯಿಸಿದ್ದ. ನನಗೆ ಅಂದು ಪ್ರೋಗ್ರೆಸ್ ಪ್ರಕಾಶಕರನ್ನು ನೋಡಲು ದಿನ ನಿಶ್ಚಿತವಾದ್ದರಿಂದ ಅನಾತೊಲಿ ಕಾರ್ಯಕ್ರಮವನ್ನು ಕೊಡಹಿಕೊಳ್ಳಬೇಕಾಯಿತು. ಇಷ್ಟರಲ್ಲಿ ಪಂಚವಟಿ ಪ್ರದರ್ಶನದ ವೇಳೆ ಚೌಕಿಯಲ್ಲಿ ನಮ್ಮನ್ನು ಭೆಟ್ಟಿಯಾಗಿದ್ದ ರಶಿಯನ್ 'ರಾಮಚಂದ್ರ' — ದವರಿಶ್ ಪೆಶ್‌ಕೊಫ್ — ತಮ್ಮ ತಂಡವನ್ನು ಸೋವಿಯತ್-ಭಾರತ ಮೈತ್ರಿ ಸಂಘಕ್ಕೆ ಆಹ್ವಾನಿಸಿದನೆಂದು ಅನಾತೊಲಿಗೆ ತಿಳಿಸಿದೆ. ಇದರಿಂದ ಅನಾತೊಲಿಗೆ ಸಂತೋಷವಾದಂತೆ ತೋರಲಿಲ್ಲ. ನನಗೆ ಬರಲು ಆಗುವುದು ಕಷ್ಟ ಎಂದ. ನಾನು ಹೋಗಲೇಬೇಕು ಎಂದು ನಿರ್ಧಾರ ಮಾಡಿದ್ದೆ. ಈ ಆಹ್ವಾನದ ಜತೆಗೆ ಒಬ್ಬಾಕೆ ಮಾಸ್ಕೊದ ಭಾರತೀಯ ನಿವಾಸಿ ಭಾಗವತರ ಕಾಲಿಗಡ್ಡಬಿದ್ದು 'ನಾಳೆ ನೀವು ಮೈತ್ರಿ ಸಂಘದ ಸಭೆಗೆ ಬರಲೇಬೇಕು. ನನ್ನ ಕಥಕ್ ಪ್ರದರ್ಶನವಿದೆ' ಎಂದು ಅಂಗಲಾಚಿದ್ದಳು. ಗೊಸ್ ಕೊನ್ಸರ್ಟ್ ಕೂಡ ಈ ಸಭೆಗೆ ಆಶೀರ್ವಾದ ಮಾಡಿತ್ತಾದ್ದರಿಂದ ಮರುದಿನ ಸಭೆಗೆ ಹೋಗಲು ನಮಗೆ ಯಾವ ತೊಂದರೆಯೂ ಆಗಲಿಲ್ಲ. ಕಾಮ್ರೇಡ್ ಅನಾತೊಲಿಯೇ ನಮ್ಮನ್ನು ಅಲ್ಲಿಗೆ ತಂದುಬಿಟ್ಟ. ಮೈತ್ರಿ ಸಂಘದ ಅಧ್ಯಕ್ಷರು ತುಂಬುಹೃದಯದ ಸ್ವಾಗತಮಾಡಿದರು. ಭಾರತೀಯ ಲೇಖಕ ಪ್ರೇಮಚಂದ್ ಶತಮಾನೋತ್ಸವವನ್ನು ಕಳೆದ ವರ್ಷವಷ್ಟೇ ಆಚರಿಸಿದ್ದಲ್ಲದೆ ಇದೀಗ ಸುಬ್ರಹ್ಮಣ್ಯ ಭಾರತಿಯ ಜನ್ಮಶತಾಬ್ದಕ್ಕೆ ತಾವು ಟೊಂಕಕಟ್ಟುತ್ತಿರುವುದನ್ನು ತಿಳಿಸಿದರು.



ಮಹಾಭಾರತ-ರಾಮಾಯಣಗಳ ಬಗ್ಗೆ ತಮಗಿರುವ ಆಸಕ್ತಿಯನ್ನೂ, ಯಕ್ಷಗಾನ ಕಲೆಯಲ್ಲಿ ಈ ಮಹಾಕಾವ್ಯಗಳ ಪ್ರತಿಬಿಂಬವನ್ನೂ, ಪ್ರತಿಸೃಷ್ಟಿಯನ್ನೂ ನೋಡಿ ತಮ್ಮ ಜನಾಂಗಕ್ಕೆ ಸಂತೋಷವಾಗಿರುವುದನ್ನು ಮುಕ್ತಕಂಠದಿಂದ ಪ್ರಶಂಸಿಸಿದರು. ಉತ್ತರರೂಪವಾಗಿ ನಾನು ರಶಿಯಾ ದೇಶಕ್ಕೆ ಕೃತಜ್ಞತೆ ಹೇಳಿದೆ. ಏಶಿಯನ್ ಗಣರಾಷ್ಟ್ರಗಳಲ್ಲಿ ನಮ್ಮ ಮೇಳಕ್ಕೆ ದೊರೆತ ಸಮ್ಮಾನಕ್ಕೆ ವಂದಿಸಿದೆ. 'ನಿಮ್ಮ ದೇಶಕ್ಕೆ ಬಂದು ನಾನು ತೀರ ಬಡವನೂ ಆಗಿಬಿಟ್ಟಿದ್ದೇನೆ. ನಿಮ್ಮೆಲ್ಲರ ಸ್ನೇಹಸೌಹಾರ್ದಗಳ ಭಾರವನ್ನು ಹೊತ್ತಿರುವ ಶ್ರೀಮಂತಿಕೆ, ನನ್ನ ಹೃದಯವನ್ನು ನಿಮ್ಮಲ್ಲಿ ಬಿಟ್ಟು ಹೋಗುವುದರಿಂದ ಅದೊಂದು ಬಡತನ — ಎರಡೂ ನನ್ನನ್ನಾವರಿಸಿದೆ' ಎಂದು 1966 ರಲ್ಲಿ ಪಂಡಿತ ನೆಹರೂ ಹೇಳಿದ್ದನ್ನು 'ಕ್ವೋಟ್' ಮಾಡಿದೆ. ಪ್ರೋಗ್ರೆಸ್ ಪ್ರಕಾಶಕರು ಪ್ರಕಟಿಸಿದ ಒಂದು ನೂತನ ನೆಹರೂ ಜೀವನಚರಿತ್ರೆಯಲ್ಲಿ ಉಲ್ಲೇಖಿಸಿದ ಈ ಉದ್ಗಾರ ನನ್ನ ಭಾಷಣದ ಕೊನೆ ಮಾತಾಯಿತು. ನನಗಿಂತ ಮೊದಲು ನಿಜವಾದ ಒಂದು ಭಾಈ ಭಾಈ ಭಾಷಣಮಾಡಿದವರು, ಮಾಸ್ಕೊ ದಾರಿಯಾಗಿ ಬ್ರೂಸೆಲ್ಸ್‌ಗೆ ಹೊರಟ ವಿ.ಆರ್. ಕೃಷ್ಣಯ್ಯರ್ ಅವರು ತಮ್ಮ ಸ್ಫೂರ್ತಿಯುತ ಭಾಷಣದಲ್ಲಿ ಸಾಮ್ರಾಜ್ಯಶಾಹಿಗಳನ್ನು ಖಂಡತುಂಡವಾಗಿ ಕತ್ತರಿಸಿದರು, ಬಂಡವಾಳಶಾಹಿಗಳನ್ನು ಸದೆಬಡಿದರು, ಇಸ್ರಾಯೆಲ್‌ಗೆ ಚಿತಾವಣೆ ಕೊಡುತ್ತಿರುವ ಮಿತ್ರರಾಷ್ಟ್ರಗಳಿಗೆ ಛೀಮಾರಿಹಾಕಿದರು. 'ನೋಡಿ ನಿಮ್ಮ ಕಲೆ, ಸಾಹಿತ್ಯ, ಶಾಂತಿ! ವಿಶ್ವಶಾಂತಿ ಸ್ಥಾಪನೆಯಾಗುವವರೆಗೆ ನಾವೆಲ್ಲ ಅಹರ್ನಿಶಿ ದುಡಿಯೋಣ' ಎಂದು ನನ್ನನ್ನು ನೋಡನೋಡುತ್ತ ನಮ್ಮ ಕಲಾವಿದರನ್ನು ಕೆಣಕಿದರು. ಅವರಿಗೋ ಗಾಬರಿ, ಇನ್ನು ಹಗಲಿಗೂ ಇಲ್ಲಿ ಆಟ ಕೊಡಲು ಹೇಳಿಯಾರೋ ಎಂಬ ಅಂಜಿಕೆ — ಕಲಾವಿದರು ಅಹರ್ ದುಡಿಯುವುದು ಎಂದರೆ ಇದೇ ಅಲ್ಲವೇ ಅರ್ಥ ?

## ಕೃತಿ-ಕರ್ತೃ ವಿಚಾರ

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಕು.ಶಿ. ಎಂದೇ ಪ್ರಖ್ಯಾತರಾದ ಪ್ರೊ। ಕು.ಶಿ. ಹರಿದಾಸ ಭಟ್ಟರು ಬಹುಮುಖ ಪ್ರತಿಭೆಯ ವ್ಯಕ್ತಿ. ಇವರು ಅರ್ಥಶಾಸ್ತ್ರದ ಪ್ರಾಧ್ಯಾಪಕರಾಗಿ ಉಡುಪಿಯ ಎಂ.ಜಿ.ಎಂ. ಕಾಲೇಜಿನ ಪ್ರಿನ್ಸಿಪಾಲರಾಗಿ ಉತ್ತಮ ಸೇವೆ ಸಲ್ಲಿಸಿದ್ದಾರೆ. ಘೂಂತಮಾರ (ಇಟಾಲಿಯನ್ ಕಾದಂಬರಿ), ಅವ್ಯಕ್ತಮಾನವ

(ಅಲೆಕ್ಸಿಸ್ ಕ್ಯಾರೆಲ್), ಸಾಹಿತ್ಯ ಮತ್ತು ಸಂಸ್ಕೃತಿ (ಜಾನ್ ಡ್ಯೂಯಿ) ಮುಂತಾದುವು ಅವರ ಅನುವಾದಿತ ಕೃತಿಗಳು. ಅರ್ಥಶಾಸ್ತ್ರ, ಏಶಿಯಾದ ಸಂಪತ್ತು ಮುಂತಾದುವು ಇತರ ಉತ್ತಮ ಕೃತಿಗಳು. ಮಕ್ಕಳಿಗಾಗಿ ಅವರು ರಾಷ್ಟ್ರಕವಿ ಗೋವಿಂದ ಪೈ, ಡಾ। ಟಿ.ಎಂ.ಎ. ಪೈ ಎಂಬ ಕಿರು ಹೊತ್ತಗೆಗಳನ್ನು ರಚಿಸಿದ್ದಾರೆ. ಉದಯವಾಣಿ ಪತ್ರಿಕೆಗೆ ಬರೆದ ಲೋಕಾಭಿರಾಮ ಎಂಬ ಲೇಖನಗಳು ಮೂರು ಸಂಪುಟಗಳಲ್ಲಿ ಪ್ರಕಟವಾಗಿವೆ. ಇತಾಲಿಯಾ ನಾನು ಕಂಡಂತೆ ಜಗದಗಲ ಹಾಗೂ ಒಮ್ಮೆ ರಶಿಯಾ ಇನ್ನೊಮ್ಮೆ ಇತಾಲಿಯಾ ಇವರ ಪ್ರವಾಸ ಕಥನಗಳು. ಇವರ ಸಂಪಾದಕತ್ವದಲ್ಲಿ 'ಕಾರಂತ ಪ್ರಪಂಚ' ಎಂಬ ಅಭಿನಂದನ ಗ್ರಂಥ ಪ್ರಕಟವಾಗಿದೆ. ಮಣಿಪಾಲದ ಅಕಾಡೆಮಿ, ಕರ್ನಾಟಕ ರಾಜ್ಯದ ನಾಟಕ ಅಕಾಡೆಮಿ, ಉಡುಪಿಯ ಯಕ್ಷಗಾನ ಕೇಂದ್ರ ಮುಂತಾದ ಹಲವು ಸಂಸ್ಥೆಗಳ ಸದಸ್ಯರಾಗಿ ದುಡಿದಿದ್ದಾರೆ. ಉಡುಪಿಯ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರದ ನಿರ್ದೇಶಕ ಕಾರ್ಯ ನಿರ್ವಹಿಸಿದ್ದಾರೆ. 1982 ರಲ್ಲಿ ಇವರಿಗೆ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ.

ಈ ಭಾಗವನ್ನು ಒಮ್ಮೆ ರಶಿಯಾ ಇನ್ನೊಮ್ಮೆ ಇತಾಲಿಯಾ ಎಂಬ ಪ್ರವಾಸ ಕಥನದಿಂದ ಆರಿಸಲಾಗಿದೆ. ಇದರಲ್ಲಿ ಅವರು ಮಾಸ್ಕೊ ನಗರದಲ್ಲಿ ಹೊಂದಿದ ಅನುಭವಗಳು ನಿರೂಪಿತವಾಗಿವೆ.

## I. ಕಠಿಣ ಪದಗಳ ಅರ್ಥ

ಹಾಸುಗೆ =ಹಾಸಿಗೆ; ಇಕ್ಕೆಲ =ಎರಡು ಬದಿ, ಎರಡು ಪಕ್ಕ; ಚಾದರ =ರೇಷ್ಮೆಯ ಹೊದಿಕೆ; ರೇಕು =ಯಾವುದಾದರೊಂದು ಲೋಹದ ಮೇಲೆ ಹಾಕುವ ಮತ್ತೊಂದು ಲೋಹದ ಹೊದಿಕೆ; ಆಚ್ಛಾದನೆ =ಹೊದಿಕೆ; ಅಹರ್ನಿಶಿ =ಹಗಲುರಾತ್ರಿ; ಮಹೋದ್ಯಮ =ಮಹಾ ಉದ್ಯೋಗ; ಪಾತ =ಬೀಳುವಿಕೆ; ವಲೀಕ =ಹುತ್ತ ; ರೆಸ್ಟುರಾ =ರೆಸ್ಟೋರೆಂಟ್, ಉಪಾಹಾರ ಗೃಹ; ಕ್ಲಪ್ತ =ಗೊತ್ತುಪಡಿಸಿದ, ನಿಗದಿಯಾದ; ಸ್ವಾದನೀಯ =ರುಚಿ; ಗುಪ್ತ =ರಹಸ್ಯ, ಗುಟ್ಟು; ಯೋಗಾರ್ತ =ಮೊಸರು; ಪುಷ್ಕಳ =ಹೇರಳ, ವಿಪುಲ; ಕರತಲಾಮಲಕ =ಅಂಗೈಯೊಳಗಿನ ನೆಲ್ಲಿ, ಅತ್ಯಂತ ಸ್ಪಷ್ಟ; ಚಿತಾವಣೆ =ಪ್ರಚೋದನೆ, ಛೀಮಾರಿ =ಧಿಕ್ಕಾರ, ತಿರಸ್ಕಾರ; ಪೇಯ =ಪಾನೀಯ; ಮುಗಿಬೀಳು =ಮುತ್ತು, ಕವಿಯು; ಚೌಕಿ =ನೇಪಥ್ಯ, ಪಾತ್ರಧಾರಿಗಳು ವೇಷ ಹಾಕುವ ಮನೆ;



## II. ಈ ಪ್ರಶ್ನೆಗಳಿಗೆ ಸಂಕ್ಷಿಪ್ತವಾಗಿ ಉತ್ತರಿಸಿ.

1. ಮಾಸ್ಕೊ ಮಹಾನಗರದ ಹಿಮದ ಚಿತ್ರಣವನ್ನು ಲೇಖಕರು ಹೇಗೆ ಮಾಡಿದ್ದಾರೆ ?
2. ಚಳಿಯನ್ನು ಓಡಿಸುವ ವಿಷಯದಲ್ಲಿ ಭಾಗವತರ ಅಭಿಪ್ರಾಯವೇನು ?
3. ಪ್ರಭಾಕರ ಪೈಗಳ ಉಪ್ಪಿನಕಾಯಿಯ ವೈಶಿಷ್ಟ್ಯವೇನು ?
4. ಕು.ಶಿ. ಯವರು ರಷ್ಯಾಕ್ಕೆ ಹೋದಾಗ ಭಾರತದ ರಾಯಭಾರಿಗಳಾಗಿ ರಷ್ಯಾದಲ್ಲಿದ್ದವರು ಯಾರು ?
5. ರಾಯಭಾರಿಗಳಿಗೆ ಭಾರತ ಸರ್ಕಾರ ಏನೆಂದು ಸುತ್ತೋಲೆ ಹೊರಡಿಸಿತ್ತು ?
6. ಮಾಸ್ಕೋದಲ್ಲಿ ನಡೆಸಿದ ಯಕ್ಷಗಾನ ಪ್ರಸಂಗವೇನು ?
7. ಮಾಸ್ಕೊ ದೇಖೋ ಮಾಡಲು ಹೊರಟವರು ಏನೇನನ್ನು ಕಂಡರು ?
8. ಡೆಟ್‌ಸ್ಕಿ ಅಥವಾ ಬಾಲಪ್ರಪಂಚದ ವೈಶಿಷ್ಟ್ಯವೇನು ?

## III. ಈ ಪ್ರಶ್ನೆಗಳಿಗೆ ವಿವರವಾಗಿ ಉತ್ತರಿಸಿ.

1. ಮಾಸ್ಕೊ ಮಹಾನಗರದ ಹಿಮದ ವರ್ಣನೆಯನ್ನು ಹೇಗೆ ವಿವರಿಸಲಾಗಿದೆ ?
2. ಲೇಖಕರು ಯಾವ ಯಾವ ರಾಯಭಾರಿಗಳನ್ನು ಭೇಟಿಯಾಗಿದ್ದರು ? ಅವರ ಬಗ್ಗೆ ಲೇಖಕರ ಅಭಿಪ್ರಾಯವೇನು ?
3. ಲೇಖಕರು ಹಾಗೂ ಅವರ ಸಂಗಡಿಗರನ್ನು ರಾಯಭಾರಿಗಳು ಹೇಗೆ ಉಪಚರಿಸಿದರು ?
4. ರಷ್ಯಾದಲ್ಲಿ ಯಕ್ಷಗಾನಕ್ಕೆ ಯಾವ ರೀತಿಯ ಸ್ಥಾನಮಾನವಿದೆ ?
5. ವಿ.ಆರ್. ಕೃಷ್ಣ ಅಯ್ಯರ್ ತಮ್ಮ ಭಾಷಣದಲ್ಲಿ ಏನು ಹೇಳಿದರು ?

## IV. ಭಾಷಾಭ್ಯಾಸ

**1. ಕೆಳಗಿನ ಪದಗಳನ್ನು ಉಪಯೋಗಿಸಿ ವಾಕ್ಯಗಳನ್ನು ರಚಿಸಿರಿ.**

ಪ್ರಯಾಸ, ಮರೆಮಾಡು, ಉಪಚಾರ, ಅಪೇಕ್ಷೆ, ಕೃತಾರ್ಥ, ಅಸಾಮಾನ್ಯ, ಚಿತಾವಣೆ, ಛೀಮಾರಿ

**2. ಕೆಳಗಿನ ಪದಗಳನ್ನು ಬಿಡಿಸಿ ಬರೆದು ಸಂಧಿ ತಿಳಿಸಿರಿ.**

ಮಧ್ಯಂತರ, ಕೃತಾರ್ಥ, ಹತ್ತಿಪ್ಪತ್ತು, ಚಳಿಗಾಲ, ಉಪಾಹಾರ, ರಾಷ್ಟ್ರಾಧ್ಯಕ್ಷ

## V. ಚಟುವಟಿಕೆ

1. ಕು.ಶಿ. ಯವರ ಪ್ರವಾಸ ಕಥನಗಳನ್ನು ಓದಿರಿ.
2. ನಿಮ್ಮ ಶಾಲೆಯಿಂದ ಪ್ರವಾಸ ಹೋದಾಗ ಆದ ಅನುಭವಗಳ ಕುರಿತು ಪ್ರಬಂಧ ಬರೆಯಿರಿ.

---



# 3. ಅಹಂಕಾರ

**- ರಾ.ಯ. ಧಾರವಾಡಕರ್**

ಅಹಂಕಾರ ವಿನಾಶದ ದಾರಿ. Pride goes before fall - ಎಂದು ಜೇನ್ ಅಸ್ಟೆನ್ ಹೇಳಿದರು. ಮನುಷ್ಯನ ತಲೆಯಲ್ಲಿ ಮದ ತುಂಬಿತೋ, ಪಾಪದ ಕೊಡ ತುಂಬಿದ ಹಾಗೆ, ನೂರು ತೀರಿತ್ತೆಂದಂ. 'ಬಸವಣ್ಣನವರನ್ನು ವರ್ಣಿಸುವಾಗ ಹರಿಹರನೇನೋ ಅಹಂಕಾರದೊಳ್ ಗರ್ವವಿಲ್ಲ' ಎಂದು ಹೇಳಿದ. ಆದರೆ, ಇಂದು ಅಹಂಕಾರ, ಗರ್ವ, ಮದ, ಸೊಕ್ಕು ಇವೆಲ್ಲ ಹೆಚ್ಚು ಕಡಿಮೆ ಒಂದೇ ಅರ್ಥವನ್ನೇ ಕೊಡುತ್ತವೆ. ಅತಿವಿನಯ ಧೂರ್ತಲಕ್ಷಣವಾದ ಹಾಗೆ, ಜಂಭ ಅವಸಾನದ ಲಕ್ಷಣ. ಮನುಷ್ಯನಲ್ಲಿ ಸ್ವಾಭಿಮಾನವಿರಬೇಕು. ಇಲ್ಲವಾದರೆ ಜನ ಅವನನ್ನು ಹುಳು ತುಳಿದ ಹಾಗೆ ತುಳಿದು ಹೋಗುತ್ತಾರೆ. ಆದರೆ, ಆ ಸ್ವಾಭಿಮಾನ ಅಹಂಕಾರಕ್ಕೆ, ಮದಕ್ಕೆ ವಾಲದ ಹಾಗೆ ನೋಡಿಕೊಳ್ಳಬೇಕು.

ಮದಕ್ಕೆ ಎಂಟು ಸೆಲೆಗಳು. ಕುಲ, ಶೀಲ, ರೂಪ, ಯೌವನ, ಧನ, ವಿದ್ಯೆ, ರಾಜ್ಯ, ವೃದ್ಧಿ ಎಂದು ಎಂಟು ಮದಗಳನ್ನು ಹೇಳುತ್ತಾರೆ. ತಾಮಸ ಮದವಿದ್ದ ಹಾಗೆ ಸಾತ್ವಿಕವೂ ಮದಕ್ಕೆ ತಿರುಗಿಕೊಳ್ಳಬಹುದು. ಅಂತಲೇ ಹಲವರು ತಪೋಮದವನ್ನೂ ಅಷ್ಟಮದಗಳಲ್ಲಿ ಒಂದಾಗಿ ಹೇಳಿದರು. ತಪೋಮದವಿದ್ದ ಎಷ್ಟೋ ಋಷಿಗಳು ರಾಕ್ಷಸರು ಕಂಡ ಕಂಡವರಿಗೆಲ್ಲ ಶಾಪ ಕೊಡುತ್ತಲೇ ಹೊರಟರು. ಅವರನ್ನು ಸಾತ್ವಿಕ ಶಕ್ತಿ ಕಾಲ ಕಾಲಕ್ಕೆ ನಿಗ್ರಹಿಸಬೇಕಾಯಿತು. ಈ ಮದಮತ್ತರಾದವರ ಕಾಲು ನೆಲದ ಮೇಲೆಯೇ ನಿಲ್ಲುವುದಿಲ್ಲ. ಅಷ್ಟಮದಗಳಲ್ಲಿ ಅಷ್ಟಿಷ್ಟಿದ್ದರೂ ಎಷ್ಟೋ ಆಗುವಾಗ, ಅಷ್ಟೂ ಇದ್ದರಂತೂ ಎಷ್ಟಾಗಬೇಡ ? ಇವು ಏಕೈಕಮಪಿ ಅನರ್ಥಾಯ. ಅಗ್ರಹಾರಕ್ಕೆ ಹೋದರೂ ಇವರಿಗೆ ದುರಾಗ್ರಹ ಬಿಡುವುದಿಲ್ಲ.

ಆದ್ದರಿಂದ ವ್ಯಕ್ತಿಯಲ್ಲಿ ಉಳಿದ ಎಷ್ಟೇ ಸದ್ಗುಣಗಳಿದ್ದರೂ, ಅಹಂಕಾರದ ದೌರ್ಬಲ್ಯ ಒಂದು ಸಲ ಉಂಟಾದರೆ, ಮಸಿ ಚಿತ್ರವನ್ನು ನುಂಗಿದಂತೆ. ಅದರಿಂದ ಅವನಿಗೆ ಏಳಿಗೆಯೇ ಇಲ್ಲ.

ರಾವಣ ಸುಂದರ, ಧಾರ್ಮಿಕ, ಸಾತ್ವಿಕ ಶೂರ, ದೈವ ಶ್ರದ್ಧೆಯುಳ್ಳವ. ಆದರೆ, ಯಾವುದೋ ಒಂದು ವಿಷಗಳಿಗೆಯಲ್ಲಿ ಸ್ತ್ರೀಮೋಹ, ಅಹಂಕಾರಗಳು ಅವನನ್ನು

ಪ್ರವೇಶಿಸುತ್ತವೆ. ರಾವಣನ ವೈಭೋಗಕ್ಕೆ ಏನು ಕಡಿಮೆಯಿದೆ ? ಸೀತೆಗೆ ಮನಸೋತ ರಾವಣ ಅವಳಿಗೆ ತನ್ನವಳಾಗಲು ಹೇಳುವಾಗ ಎಂಥ ಪಲ್ಯಂಕದಲ್ಲಿ, ಎಂಥ ಹಾಸುಗೆಯಲ್ಲಿ ಹೇಗೆ ಮಲಗಿಕೊಳ್ಳಬಹುದೆಂಬುದರ ಬಗ್ಗೆ ಹೀಗೆ ಹೇಳುತ್ತಾನೆ:

ಎನ್ನೊಳ್ ಪೋರ್ದುಡಿದ ಇಂದ್ರಸಿಂಧುರದ ಕೋಡಿಂದಾದ ಪಲ್ಯಂಕದೊಳ್
ಮುನ್ನಂ ಪದ್ಮಜನಂಚೆಯಂ ತರಿದು ತುಪ್ಪುಳ್ಗೊಂಡು ದಿಕ್ಪಾಲಕರ್
ಬೆನ್ನಿತ್ತಿಕ್ಕಿದ ಚೀಲದಿಂ ಸಮೆದ ಕೇಳೀತಲ್ಪದೊಳ್ ನಿದ್ರೆಗೆಯ್ ನಿನ್ನಂ
ನಿದ್ರೆಯಿಂ ಎಳ್ಚುವನ್ನಂ ಅಮರೀಮಾಂಗಲ್ಯಗೀತಸ್ವನಂ

ನನ್ನ ಕೂಡ ಹೋರಾಡಿ ಸೋತ ಇಂದ್ರನ ಐರಾವತದ ಕೋರೆಯಿಂದ ಮಾಡಲಾದ ಪಲ್ಲಂಗಿನ ಮೇಲೆ (ಹಸ್ತಿದಂತವೇ ತುಂಬಾ ಬೆಲೆಯುಳ್ಳದ್ದು, ಅದರಲ್ಲಿ ಇಂದ್ರನ ಐರಾವತದ ಕೋರೆ ಎಂದ ಮೇಲೆ ಕೇಳಬೇಕೆ ?) ಬ್ರಹ್ಮನ ಹಂಸದ ತುಪ್ಪುಳಗಳನ್ನೆಲ್ಲ ತರಿದು ತಮ್ಮ ಬೆನ್ನ ಮೇಲೆ ಹೊತ್ತುಕೊಂಡು ತಂದು, ದಿಕ್ಪಾಲಕರು ಸ್ವತಃ ಸಿದ್ಧಮಾಡಿದ ಶೃಂಗಾರದ ಗಾದೆಯಲ್ಲಿ ದೇವತೆಯರು ನಿನ್ನನ್ನು ಉದಯರಾಗ ಹಾಡಿ ಎಬ್ಬಿಸುವವರೆಗೆ ಸುಖವಾಗಿ ನಿದ್ರೆ ಮಾಡು. (ಐರಾವತದ ಕೋರೆಯ ಮಂಚ, ಬ್ರಹ್ಮನ ಹಂಸದ ತುಪ್ಪುಳದ ಗಾದೆ, ಅದನ್ನು ಬೆನ್ನಲ್ಲಿ ಹೊತ್ತು ತಂದವರು ದಿಕ್ಪಾಲಕರು. ಅವಳನ್ನು ಎಬ್ಬಿಸುವವರು ಸ್ವರ್ಗಲೋಕದ ದೇವತೆಗಳು. ಎಂಥ ವೈಭವವದು!!) ಇಂಥ ಔದ್ಧತ್ಯದ ಮಾತನ್ನು ಹೇಳಿದ ರಾವಣನ ಅಹಂಕಾರದ ಬಗ್ಗೆ ಕವಿ ಹೀಗೆ ಹೇಳುತ್ತಾನೆ:

ಕುಲಮದವೊಂದು, ರೂಪಮದವೊಂದು, ವಯೋಮದವೊಂದು, ತನ್ನ ದೋರ್ಬಲ ಮದವೊಂದು, ಜಾತಿಮತವೊಂದು, ಕಲಾಮದವೊಂದು, ದೇವತಾಬಲಮದಮೊಂದು ರಾಜ್ಯಮದಮೊಂದು ಇನಿತಲ್ಲದೆ ಬೇರೆ ರಾಗಮ್ ಅಗ್ಗಲಿಸಿದ ದೋಷದೃಷ್ಟಿ ವಿಷಯಾತುರರೇನ್ ಗಡ ಮುಂದುಗಾಣ್ಬರೇ?

ಇದರಿಂದ ತಲೆಯಲ್ಲಿ ಗಾಳಿ ತುಂಬಿಕೊಂಡ ರಾವಣ 'ಸ್ತ್ರೀ ರತ್ನಕ್ಕಾನಿರೆ ಪೆರರಾರ್ ಒಡೆಯರ್' ಎಂದು ಹೇಳುವ ಔದ್ಧತ್ಯದವರೆಗೆ ತನ್ನ ಅಹಂಕಾರವನ್ನು ಜೀಕಿದ. ಅಂತಲೇ, ಅತಿಗರ್ವಾತ್ ರಾವಣೋ ಹತಃ ಎಂದು ಹೇಳುವುದು.

ಅಹಂಕಾರದ ವಿಷದ ನಾಲಿಗೆ ನಹುಷ ಚಕ್ರವರ್ತಿಯಂಥವರನ್ನೂ ಬಿಡಲಿಲ್ಲ. ಬ್ರಹ್ಮಹತ್ಯಾ ಪಾಪಕ್ಕೆ ಗುರಿಯಾದ ಇಂದ್ರ ಅದರ ಪರಿಮಾರ್ಜನೆಗಾಗಿ ಸ್ವರ್ಗವನ್ನು



ಬಿಟ್ಟು ಹೋದಾಗ, ಇಂದ್ರನ ಸ್ಥಾನದಲ್ಲಿ ನಹುಷ ಚಕ್ರವರ್ತಿಯನ್ನು ಸ್ವತಃ ಬ್ರಹ್ಮನೇ ಆಯ್ಕೆ ಮಾಡಿದ. ಯಾಕೆಂದರೆ ಸ್ವರ್ಗಕ್ಕೆ ಅಧಿಪತಿಗಳಿಲ್ಲದಿರುವಾಗ, ದೇವತೆಗಳೆಲ್ಲರೂ ಬ್ರಹ್ಮನಲ್ಲಿ ಹೋಗಿ ಸ್ವರ್ಗಕ್ಕೆ ಅಧಿಪತಿಯಿಲ್ಲವೆಂದು ಹೇಳಿದಾಗ, ಈ ಸ್ಥಾನಕ್ಕೆ ಯೋಗ್ಯ ವ್ಯಕ್ತಿ ಭೂಲೋಕದ ನಹುಷ ಚಕ್ರವರ್ತಿಯೇ ಎಂದು ಬಗೆದು ಬ್ರಹ್ಮ ನಹುಷನನ್ನು ಆರಿಸಿದ. ಸ್ವತಃ ದೇವತೆಗಳೇ ಪ್ರಾರ್ಥಿಸಿಕೊಂಡರೂ ಮೊದಮೊದಲು ಇಂದ್ರ ಪದವಿಯನ್ನು ಒಲ್ಲೆನೆಂದ ನಹುಷ, ಕೊನೆಗೆ ಅನಿವಾರ್ಯವಾಗಿ ಒಪ್ಪಿಕೊಂಡ. ಆದರೆ, ಒಂದು ಸಲ ಇಂದ್ರನ ಸಿಂಹಾಸನದಲ್ಲಿ ಕುಳಿತ ನಹುಷ ಚಕ್ರವರ್ತಿಗೆ ಇಂದ್ರನ ವೈಭೋಗವೆಲ್ಲವೂ ಬೇಕೆನಿಸಿತು. ಇಂದ್ರನ ಅರಮನೆ, ಸಿಂಹಾಸನ ಎಲ್ಲವೂ ಆಯಿತು. ಆದರೆ ಶಚೀದೇವಿ ಕೇವಲ ಇಂದ್ರನ ರಾಣಿಯಾಗಿ ಏಕಿರಬೇಕು ? ಅವಳು ತನ್ನೊಡನೆ ಏಕೆ ಇರಬಾರದು ? ಎಂಬ ಅಹಂಕಾರದ ಹುಳು ಅವನ ತಲೆಯಲ್ಲಿ ಕೊರೆಯಹತ್ತಿತು. ಅಹಂಕಾರ ಮದಿರಾಸವ ಮತ್ತರಿಗೆ ಮೇಲಿನ ಮುಗಿಲು ಮಾತ್ರ ಕಾಣಿಸುತ್ತಿದೆಯೇ ವಿನಾ, ಕಾಲಕೆಳಗಿನ ನೆಲ ಕಾಣುವುದೇ ಇಲ್ಲ. ನಹುಷನ ಗತಿಯೂ ಹೀಗೆಯೇ ಆಯಿತು. ತನ್ನನ್ನು ಒಡಗೂಡಬೇಕೆಂದು ಅವನು ಶಚೀದೇವಿಗೆ ಹೇಳಿಕಳಿಸಿದ. ಶಚೀದೇವಿ ತಬ್ಬಿಬ್ಬಾದಳು. ಅವಳಿಗೆ ಏನು ಮಾಡಬೇಕೋ ತಿಳಿಯದಾಯಿತು. ಅವಳು ಸಪ್ತರ್ಷಿಗಳಲ್ಲಿ ಹೋಗಿ ತನ್ನ ಮನದಳಲನ್ನು ತೋಡಿಕೊಂಡಳು. ಆಗ ಋಷಿಗಳು ಅವಳಿಗೆ ಒಂದು ಉಪಾಯವನ್ನು ಹೇಳಿದರು. ''ನೀನು ಸಪ್ತರ್ಷಿಗಳನ್ನು ವಾಹನವಾಗಿ ಮಾಡಿಕೊಂಡು ನನ್ನಲ್ಲಿಗೆ ಬಂದರೆ, ನಾನು ಅವಶ್ಯವಾಗಿ ನಿನ್ನೊಡನೆ ಇರುವೆನು'' ಎಂದು ಅವನಿಗೆ ಹೇಳಿಕಳುಹಿಸು ಎಂದು ಅವರು ತಿಳಿಸಿದರು. ಶಚೀದೇವಿ ಹಾಗೆಯೇ ಮಾಡಿದಳು. ಓ! ಇದೇನು ಮಹಾ!! ಎಂದು ನಹುಷ ಸಪ್ತರ್ಷಿಗಳಿಗೆ ತನ್ನ ವಾಹನವಾಗಿ ಬರಲು ಆಜ್ಞಾಪಿಸಿದ. ಯಾವ ಋಷಿಗಳ ಸಾತ್ವಿಕ ತಪಸ್ಸಾಮರ್ಥ್ಯದೆದುರಿಗೆ ಸ್ವತಃ ಆ ಪರಮಾತ್ಮನಿಗೇ ನಿಲ್ಲಲು ಸಾಧ್ಯವಿಲ್ಲವೋ, ಅಂಥ ಸಪ್ತರ್ಷಿಗಳು ಹೊತ್ತ ಪಲ್ಲಕ್ಕಿಯಲ್ಲಿ ಸೆಟೆದು ಕುಳಿತು ಶಚೀದೇವಿಯಿದ್ದಲ್ಲಿಗೆ ಹೋಗುವಷ್ಟು ನಹುಷ ಮದಾಂಧನಾಗಿದ್ದ. ನಹುಷನ ಆಜ್ಞೆಯಂತೆ ಏಳೂ ಜನ ಋಷಿಗಳು ಪಲ್ಲಕ್ಕಿಯನ್ನು ಹೊತ್ತುಕೊಂಡು ಹೊರಟರು. ಅದರಲ್ಲಿ ಆಸೀನನಾಗಿದ್ದ ನಹುಷನಿಗೆ ಯಾವಾಗ ತಾನು ಶಚೀದೇವಿ ಇರುವ ಸ್ಥಾನವನ್ನು ತಲುಪೇನೋ ಎಂಬ ಆತುರ. ಆದ್ದರಿಂದ ಅವರಿಗೆ ''ಬೇಗ ಬೇಗ ನಡೆಯಿರಿ'' ಎಂದು ಕೂಗಹತ್ತಿದ. ಪಲ್ಲಕ್ಕಿ ಹೊತ್ತ ಈ ಏಳು ಜನ ಋಷಿಗಳಲ್ಲಿ ಅಗಸ್ತ್ಯರೂ ಒಬ್ಬರಾಗಿದ್ದರು. ಅಗಸ್ತ್ಯರು ಕುಳ್ಳರು. ಉಳಿದವರಷ್ಟು ವೇಗವಾಗಿ

ನಡೆಯಲು ಅವರಿಗೆ ಆಗದು. ಆಗ ಕ್ರುದ್ಧನಾದ ನಹುಷ ಅಗಸ್ತ್ಯರ ತಲೆಯನ್ನು ತನ್ನ ಕಾಲಿನಿಂದ ಒದ್ದು, ''ಸರ್ಪ, ಸರ್ಪ'' 'ಬೇಗ ಬೇಗ ನಡೆ' ಎಂದು ಕಿರುಚಿದ. ಇದರಿಂದ ಕ್ರುದ್ಧರಾದ ಅಗಸ್ತ್ಯರು ನಹುಷನಿಗೆ ಹಾಗೆಯೇ ಆಗಲಿ, ಸರ್ಪೋಭವ, ನೀನು ಸರ್ಪವೇ ಆಗು ಎಂದು ಶಾಪವಿತ್ತರು. ತತ್‍ಕ್ಷಣವೇ ಪಲ್ಲಕ್ಕಿಯಲ್ಲಿ ಕುಳಿತಿದ್ದ ನಹುಷ ಚಕ್ರವರ್ತಿ ಘಟಸರ್ಪವಾಗಿ ನೆಲಕ್ಕೆ ಉರುಳಿದ. ಪಲ್ಲಕ್ಕಿಯಲ್ಲಿ ಕುಳಿತಿದ್ದ ಅಹಂಕಾರ, ನೆಲಕ್ಕುರುಳಿ ವಿಷಪೂತ್ಕರಿಸುವ ಘಟಸರ್ಪವಾಯಿತು. ಮಣ್ಣಲ್ಲಿ ಹೊರಳಾಡಹತ್ತಿತು. ಅನಂತರ ಈ ಘಟಸರ್ಪಕ್ಕೆ ಭೀಮಸೇನನ ಭೀಮ ಶಕ್ತಿಯಿಂದಲೂ ಉಶ್ಶಾಪವಾಗಲಿಲ್ಲ. ಕೊನೆಗೆ ಅಹಂಕಾರದ ಈ ಅಜಗರಕ್ಕೆ ಉಶ್ಶಾಪ ದೊರೆತದ್ದು ಯುಧಿಷ್ಠಿರನ ಸಾತ್ವಿಕ ಶಕ್ತಿಯಿಂದಲೇ. ಅಹಂಕಾರ ವಿನಾಶದ ಹಾದಿ.

ಈ ಅಹಂಕಾರ ಎಂತೆಂಥ ಸಾತ್ವಿಕರನ್ನೂ ಬಿಟ್ಟಿಲ್ಲ. ಅಹಂಕಾರ ಒಂದು ಅಜಗರ ಅದು ಒಬ್ಬರನ್ನು ಸುತ್ತಿಕೊಂಡಿತೆಂದರೆ ಅವರ ಎಲುವುಗಳೆಲ್ಲ ಆ ಹಿಡಿತದಿಂದ ಪುಡಿಪುಡಿಯಾಗಲೇ ಬೇಕು. ಇದಕ್ಕೆ ಎಂತೆಂಥವರೂ ಅಪವಾದವಾಗಿಲ್ಲ.

ಸುಪ್ರಸಿದ್ಧ ಭರತ ಚಕ್ರವರ್ತಿ ಮಹಾಪರಾಕ್ರಮಿ, ಬಾಹುಬಲಿಯ ಅಣ್ಣ , ಅವನು ಸಕಲ ಭೂಮಂಡಲವನ್ನೂ ಗೆಲ್ಲುತ್ತಾನೆ. ಅವನು ಹಲವು ಅರಸರನ್ನು ಸೋಲಿಸಿದರೆ, ಹಲವರು ತಾವಾಗಿಯೇ ಬಂದು ಅವನಿಗೆ ಕಪ್ಪಕಾಣಿಕೆಗಳನ್ನು ಸಲ್ಲಿಸುತ್ತಾರೆ. ಮಾಗಧ, ವರತನ, ಪ್ರಭಾಸಾಮರ, ವಿಜಯಾರ್ಧಕುಮಾರ ಮೊದಲಾದವರಲ್ಲದೆ ಗಂಗಾ ಸಿಂಧುಗಳ ಮಧ್ಯದಲ್ಲಿನ ಎಲ್ಲ ಕುರುರಾಜರೂ ಅವನಿಗೆ ಶರಣಾಗತರಾಗುತ್ತಾರೆ. ಹೀಗೆ ವಿಜಯದ ಮೇಲೆ ವಿಜಯವನ್ನು ಸಂಪಾದಿಸಿದ ಭರತ ಚಕ್ರವರ್ತಿ ಉತ್ತರ ಭರತ, ಮಧ್ಯಮ ಖಂಡದಲ್ಲಿರುವ ವೃಷಭಾಚಲಕ್ಕೆ ಬಂದು ತಾನೇ ಏಕೈಕ ಚಕ್ರವರ್ತಿ ಎಂಬ ಹಮ್ಮಿನಲ್ಲಿ ಅದರ ಗೋಡೆಯ ಮೇಲೆ ತನ್ನ ವಿಶ್ವವಿಶ್ವಂಭರಾವಿಜಯ ಪ್ರಶಸ್ತಿಯನ್ನು ಬರೆಯಿಸಬೇಕೆಂದು ಬಯಸುತ್ತಾನೆ. ಆದರೆ ಅದರೆದುರು ನಿಂತಾಗ ಅಲ್ಲಿ ಅವನು ಕಾಣುವುದೇನು ? ವೃಷಭಾಚಲದ ಮೇಖಲಾಭಿತ್ತಿಯಲ್ಲಿ ತನ್ನ ವಿಜಯಶ್ರೀಯನ್ನು ಬರೆಯಿಸಲು ಅವನಿಗೆ ಸ್ಥಳವೇ ಇರುವುದಿಲ್ಲ. ಯಾಕೆಂದರೆ.

ಅದರೊಳ್, ಅನೇಕ ಕಲ್ಪಶತಕೋಟಿಗಳೊಳ್ ಸಲೆಸಂದ ಚಕ್ರಿ
ವೃಂದದ ಚಲದ, ಆಯದ, ಆಯತಿಯ, ಬೀರದ ಚಾಗದ ಮಾತುಗಳ್



ಪೊದಳ್ದೊದವಿರೆ, ತತ್‍ಪ್ರಶಸ್ತಿಗಳೊಳ್ ಅಂತವಂ ಒಯ್ಯನೆ ನೋಡಿ, ನೋಡಿ,
ಸೋರ್ದುದು ಕೊಳಗೊಂಡ ಗರ್ವರಸಮ್ ಆ ಭರತೇಶ್ವರ ಚಕ್ರವರ್ತಿಯಾ

ಆ ವೃಷಭಾಚಲದ ಗೋಡೆಯ ಮೇಲೆ ಬರೀ ಒಂದು ಕಲ್ಪದಲ್ಲಲ್ಲ ಭರತ ಚಕ್ರವರ್ತಿಗಿಂತ ಅನೇಕ ಕಲ್ಪಗಳ ಪೂರ್ವದಲ್ಲಿ ಆಗಿಹೋಗಿದ್ದ ಮಹಾಮಹಾ ಚಕ್ರವರ್ತಿಗಳ ಛಲದ, ಶೌರ್ಯದ, ವೈಭವದ, ವೀರ್ಯದ, ತ್ಯಾಗದ ಮಾತುಗಳನ್ನು ಆ ಮೊದಲೇ ಕೊರೆಯಲಾಗಿತ್ತು. ಅವುಗಳನ್ನೆಲ್ಲ ನಿಧಾನವಾಗಿ ನೋಡನೋಡುತ್ತಿರುವ ಹಾಗೆ ಭರತ ಚಕ್ರವರ್ತಿಯಲ್ಲಿ ತಾನೇ ಏಕಮೇವ ಅದ್ವಿತೀಯ ಚಕ್ರವರ್ತಿ ಎಂದು ಮಡುಗಟ್ಟಿ ನಿಂತಿದ್ದ ಗರ್ವರಸವೆಲ್ಲ ಸೋರಿಹೋಗಿ ನಾಚಿಕೆಯಾಯಿತು. ಆದರೆ, ಬಹಳ ದೂರ ಹೋದವನು ಮರಳಿ ಬರುವುದು ತುಂಬಾ ದುಸ್ತರ. ಆ ಗೋಡೆಯ ಮೇಲೆ ತನ್ನ ಹೆಸರನ್ನು ಬರೆಯಿಸಬೇಕೆಂದರೆ ಭರತ ಚಕ್ರವರ್ತಿಗೆ ಅಲ್ಲಿ ಸ್ಥಳವೇ ಇರಲಿಲ್ಲ. ಆದರೂ ಅವನು ಬಿಡಲಿಲ್ಲ. ಅಲ್ಲಿ ಬರೆಯಲಾದ ಪ್ರಶಸ್ತಿಗಳನ್ನು ತನ್ನ ದಂಡರತ್ನದಿಂದ ಸೀಂಟಿ ತೆಗೆದು, ''ದೇವಾಂಗನೆಯರ್ ಕೊಡುವರಾವನ ಜಸಮಂ, ಕುಳಾಚಳಾವಳಿಯೊಳ್ ಶೌರ್ಯಾವಷ್ಟಂಭದಿಂ ಆಳ್ದವಂ ಆವಂ ಷಟ್ಖಂಡಮಂಡಿತ ಕ್ಷಿತತಳಮಂ, ಆತಂ ಭರತೇಶಂ; ಇಂತೀ ತೆರದಿಂ ನೆಗಳ್ದ ತನ್ನ ಕೀರ್ತಿಯಂ ವಿಖ್ಯಾತ ವೃಷಭಾದ್ರಿಯೊಳ್ ಸುರಗೀತಯಶಂ ಇರಿಸಿದಂ ನೆಲಂ ನಿಲ್ವಿನೆಗಂ'' ಎಂದು ಮೊದಲಾಗಿ ಬರೆಯಿಸಿದ. ಈ ಕೀರ್ತಿ ಪ್ರಶಸ್ತಿ ಎಲ್ಲಿದೆಯೋ ಉಳಿದವರ ಹೆಸರಾದರೂ ಎಲ್ಲಿವೆಯೋ ಯಾರು ಬಲ್ಲರು ? ಭರತನ ಬಾಹುಬಲದ ಜಂಭ ಕೊನೆಗೆ ಮಾಯವಾದುದು, ಬಾಹುಬಲಿಯ ಧರ್ಮಬಲದಿಂದ ಮಾತ್ರ.

ಹೀಗೆಯೇ ಉಮರ್ ಖಯಾಮ್ ಹೇಳಿದಂತೆ ಜಮ್‍ಷೇಡ್ ವೈಭೋಗದಲ್ಲಿ ಸುರಾಪಾನಮಾಡಿ ಸತ್ತ ಸ್ಥಳದಲ್ಲಿನ ಅವನ ಸಮಾಧಿಯ ಮೇಲೆ ಕತ್ತೆಗಳು ತುಳಿದಾಡುತ್ತಿವೆ.

ರಾವಣ, ನಹುಷ, ಭರತ, ಜಮ್‍ಷೇಡರಂತೆ ವೀರಾಧಿವೀರರೆಂದು ಹೇಳಿಕೊಂಡ 'ಎಲ್ಲ ಪರಾಕ್ರಮಿಗಳ' ಹಾಡೂ ಹೀಗೆಯೇ ಆಗಿದೆ. ಬಂಡತನವೇ ನವನ, ನಂಟುತನವೇ ನವನ. ಎಲ್ಲವೂ ಹುಲ್ಲಗಿಚ್ಚು, ಪೊಳ್ಳುಬಿಂಕದ ಮೂಗು.

ತನ್ನ Ozymandias (ಓಝಿಮ್ಯಾಂಡಿಯಾಸ್) ಎಂಬ ಸುಂದರ ಕವಿತೆಯಲ್ಲಿ

ಷೆಲಿ ಮಹಾಕವಿ ಇಂತಹದೇ ಒಂದು ಸನ್ನಿವೇಶವನ್ನು ವಿವರಿಸುತ್ತಾನೆ. I met a traveller from an antique land. ಪುರಾತನ ನಾಡಿನ ಒಬ್ಬ ಪಾಂಥಸ್ಥ ನನಗೆ ಸಿಕ್ಕಿದ್ದ. ಅವನು ''ಮರುಭೂಮಿಯಲ್ಲಿ ಕಲ್ಲಿನಲ್ಲಿ ಕಟೆದ ಮುಂಡವಿರದ ಎರಡು ಕಾಲುಗಳು ಹಾಗೆಯೇ ನಿಂತಿವೆಯೆಂದೂ, ಪಕ್ಕದಲ್ಲಿಯೇ, ಆ ಸುಡುಮಳಲಲ್ಲಿ ಒಡೆದು ಹೋದ ಒಂದು ಕಲ್ಲಿನ ಮುಖ ಅರ್ಧಹೂಳಿ ಬಿದ್ದಿದೆಯೆಂದೂ'' ಹೇಳಿದ. ಅಲ್ಲದೆ, ಕಾಲುಗಳ ಕೆಳಗಿರುವ ಪೀಠದ ಮೇಲೆ ಹೀಗೆ ಬರೆಯಲಾಗಿದೆಯೆಂದೂ ಹೇಳಿದ.

My name is Ozymandias King of Kings

Look on my work. Ye mighty and despair. ''ನನ್ನ ಹೆಸರು ಓಝಿಮ್ಯಾಂಡಿಯಾಸ್; ಅರಸರ ಅರಸು; ನಿಮ್ಮಲ್ಲಿ ಸಾಮರ್ಥ್ಯವಿದ್ದವರು ನನ್ನ ಮಹಾಕೃತಿಗಳನ್ನು ನೋಡಿ ಎದೆಯೊಡೆದುಕೊಳ್ಳಿರಿ'' ಆದರೆ ಆ ಪಾಂಥಸ್ಥನೇ ಹೇಳಿದ ಹಾಗೆ "Nothing besides remains, Round the decay of that colosall wreck boundless and lone level sands stretch for away". ನನ್ನ ಮಹಾಕೃತಿಗಳನ್ನು ನೋಡಿ ಹೆದರಿಕೊಳ್ಳಿರಿ ಎಂದು ಘೋಷಿಸಿದ ಓಝಿಮ್ಯಾಂಡಿಯಾಸ್‌ನ ಮುರಿದ ಕಾಲುಗಳ ಸುತ್ತೆಲ್ಲ ಯೋಜನ ಯೋಜನ ವಿಸ್ತೀರ್ಣ ಸುಡು ಸುಡು ಮರಳು ಮಾತ್ರ ವ್ಯಾಪಿಸಿ ಚಾಚಿದೆ.

ಹೀಗೆಯೇ ಹತ್ತಾರು ಉದಾಹರಣೆಗಳು. ಹಾಗೆ ನೋಡಿದರೆ, ಮನುಷ್ಯ ನಿಜವಾಗಿ ಉಪ್ಪಿನ ಬೊಂಬೆ. ಮೇಣದ ತಲೆಯಿದ್ದವರು ಬಿಸಿಲಲ್ಲಿ ಹೋಗಬಾರದು; ಉಪ್ಪಿನ ಬೊಂಬೆ ಸಮುದ್ರದತ್ತ ಸಾಗಬಾರದು. ಉಪ್ಪಿನಬೊಂಬೆ ನೀರಿನಲ್ಲಿ ಕಾಲಿಟ್ಟಿತೋ ಕಾಲೇ ಕಳಚಿ ಬೀಳುತ್ತದೆ. ಒಂದು ಸಲ ಹೀಗೆಯೇ ಆಯಿತು. ಒಂದು ಉಪ್ಪಿನ ಬೊಂಬೆ ಅಂಗಿಕೋಟು ಟೊಪ್ಪಿಗೆ ಧರಿಸಿ ಸಮುದ್ರದ ಕಡೆಗೆ ಅಡ್ಡಾಡಲು ಹೊರಟಿತು. ಅನೇಕ ಜನ ಬುದ್ಧಿವಂತರು ಸಮುದ್ರದ ಕಡೆಗೆ ಹೋದರೂ ಪರವಾ ಇಲ್ಲ, ಆದರೆ ಸಮುದ್ರದ ನೀರಲ್ಲಿ ಕಾಲಿಡಬೇಡ ಎಂದು ಅದಕ್ಕೆ ಬುದ್ಧಿವಾದ ಹೇಳಿದರು. ಆದರೆ, ಉಪ್ಪಿನ ಬೊಂಬೆಗೆ ಅವರ ಮಾತನ್ನು ಕೇಳುವ ವ್ಯವಧಾನವೆಲ್ಲಿ ? ಹಾಗೆಯೇ ಎದೆ ಸೆಟೆಸಿ. ಪುಟುಪುಟನೆ ಹೊರಟೇ ಬಿಟ್ಟಿತು. ನೀರಿನ ತೀರ ಸಮೀಪಕ್ಕೆ ಹೋದಾಗಲೂ ಜನ ಹೇಳಿದರು; ಕಿರುಚಿಕೊಂಡರು. ಈ ಬೊಂಬೆ ಕೇಳಲಿಲ್ಲ. ''ನನಗೇನಾಗುತ್ತದೆ ? ನನ್ನನ್ನು



ಸರಿಗಟ್ಟುವವರಾರು ?'' ಎಂದು ಸಮುದ್ರದ ನೀರಿನಲ್ಲಿ ತನ್ನ ಬಲಗಾಲನ್ನಿರಿಸಿತು. ಇರಿಸಿದಲ್ಲಿಯೇ ಅದರ ಬಲಗಾಲು ಕರಗಿಹೋಯಿತು. ''ಈಗಾದರೂ ಹಿಂದಕ್ಕೆ ಸರಿ, ಸತ್ತು ಹೋಗುತ್ತೀಯೇ'' ಎಂದು ಜನ ಪುನಃ ಕೂಗಿಕೊಂಡರು. ಅಂದರೂ, ಬೊಂಬೆ ಕೇಳಲಿಲ್ಲ. ತನ್ನ ಎಡಗಾಲನ್ನೂ ಇರಿಸಿತು. ಎಡಗಾಲೂ ಕರಗಿಹೋಯಿತು. ಜನ ಪುನಃ ಕಿರುಚಿಕೊಂಡರು. ''ನನಗೇನು ? ನನಗೇನು ?'' ಎನ್ನುತ್ತ ಮೈಯನ್ನೇ ಮುಂದೆ ತೂರಿಕೊಂಡು ಬೊಂಬೆ ಪುನಃ ಸಾಗಿತು. ನೀರಲ್ಲಿ ನುಗ್ಗುತ್ತಿರುವಂತೆಯೇ ಹೊಟ್ಟೆ, ಎದೆ, ಗದ್ದ ಎಲ್ಲವೂ ಕರಗಿ ಹೋದವು. ಜನ ಮತ್ತು ಕಿರುಚಿಕೊಂಡರು. ''ನ... ನ.. ಗೇ.. ನು ?'' ಅನ್ನುವುದರಲ್ಲಿಯೇ ಬೊಂಬೆಯ ನಾಲಗೆಯೂ ಕರಗಿಹೋಯಿತು. ಆ ಮೇಲೆ ಮಾತ್ರ ಅದರ ಧ್ವನಿ ಕೇಳಿಬರಲಿಲ್ಲ. ಜೀವವಿರದ ಅದರ ಬುರುಡೆ ಮಾತ್ರ ಕೆಲಕಾಲ ಕಾಣಿಸಿತು. ಉಪ್ಪಿನ ಬೊಂಬೆ ಪಾಪ!! ನಾಲಿಗೆ ಇರುವವರೆಗೂ ನನಗೇನು ? ನನಗಾರು ? ಎಂದು ಸಾರುತ್ತಲೇ ನೀರಲ್ಲಿ ಲೀನವಾಯಿತು. ಮನುಷ್ಯನೂ ಈ ಉಪ್ಪಿನ ಬೊಂಬೆಗೆ ವ್ಯತಿರಿಕ್ತವಾಗಿಲ್ಲ. ದೇವರು ಕೊಟ್ಟ ಎರಡಂಗುಲ ನಾಲಗೆ ಇರುವವರೆಗೂ ಕೊಚ್ಚುತ್ತಲೇ ಇರುತ್ತಾನೆ. ಅದು ಕಳಚಿಬೀಳುತ್ತಲೇ ಅವನ ಅಹಂಕಾರ ನಿಲ್ಲುತ್ತದೆ. ಟೊಂಕಮುರಿದರೂ ಬಿಂಕಮುರಿಯುವುದಿಲ್ಲ. ಹಾಗಿದ್ದರೆ, ಜೀವನದಲ್ಲಿ ಅಹಂಕಾರವನ್ನು ಎದುರಿಸುವುದು ಹೇಗೆ? ಒಂದು - ಅವನ ಹಣೇಬರಹವನ್ನು ದೇವರಿಗೇ ಒಪ್ಪಿಸಿಬಿಡುವುದು. ಹೀಗೆ ಉರಿದುರಿದು ಬೀಳುವವರನ್ನು ದೇವರೇ ನೋಡಿಕೊಳ್ಳುತ್ತಾನೆ ಎಂದು ಸುಮ್ಮನಿದ್ದು ಬಿಡುವುದು. ಇಲ್ಲವಾದರೆ, ಶೇರಿಗೆ ಸವ್ವಾ ಸೇರಾಗುವುದು, ಅವನ ಅಹಂಕಾರವನ್ನು ಮೀರಿದ ಅಹಂಕಾರವನ್ನು ನಾವು ಪ್ರದರ್ಶಿಸುವುದು. ಉದ್ದುರುಟುತನಕ್ಕೆ ಗುದ್ದೇ ಮದ್ದು. ಈ ಸಾಮರ್ಥ್ಯ ಎಲ್ಲರಿಗೂ ಸಾಧ್ಯವಿರುವುದಿಲ್ಲ. ''ಒಡ್ಡರ ರಾಮನೆಂದು ಹೇಳಿ ಅವನನ್ನು ಕರೆ ಎಂದು ಸಿದ್ಧರಾಮನನ್ನು ಕುರಿತು ಅಲ್ಲಮಪ್ರಭುವು ಗುಡ್ಡರಿಗೆ ಹೇಳಿದಾಗ, ಸಿದ್ಧರಾಮ ಘುಡಘುಡಿಸಿ ಆರು ನಮ್ಮನು ಜರೆದವನು, ಜಂಭಾರಿಯೊ, ದನುಜಾರಿಯೊ, ಕಾಮಾರಿಯೋ, ತೋರವನ, ಹೆಡತಲೆಗುಗಿವೆ, ನಾಲಗೆಯ ಬೇರು ಸಹಿತವೆ ಕೀಳುವೆನು ಹಣೆಯ ಕಣ್ಣಿನ ಕಿಡಿಯ ಕೆದರುವೆ'' ಎನ್ನುತ್ತಾನೆ. ಆಗ ಯಾವ ರೀತಿಯಿಂದಲೂ ಕ್ರೋಧವನ್ನು ಪ್ರದರ್ಶಿಸದೆ, ಪ್ರಸನ್ನವದನರಾಗಿ ನಿಂತ ಅಲ್ಲಮಪ್ರಭುಗಳ ಅಡಿಗಳೆಡೆಯನು ಸಿದ್ಧರಾಮನ ನೊಸಲಕಣ್ಣಿನ ಕಿಡಿಗಳ ಹೊದ್ದದೆ, ಉಳಿದ ಜೀವರನ್ನೇ ಸುಡುತ್ತವೆ. ಹೀಗೆ ಹಣೆಗಣ್ಣ ಕಿಡಿಯನ್ನು ತೋರುವವರಿಗೆ,

ಅಂಗಾಲಿನಿಂದ ಅದನ್ನು ಆರಿಸುವ ಸಾಮರ್ಥ್ಯವುಳ್ಳವರೂ ಇದ್ದಾರೆ. ಆದರೆ ಈ ಸೇರಿಗೆ ಸವ್ವಾಸೇರು ತೋರಿಸಬೇಕಾದರೆ, ಅಂತಹ ಹೆಚ್ಚಿನ ಯೋಗ್ಯತೆಯೇ ಬೇಕಾಗುತ್ತದೆ. ಇದು ಎಲ್ಲರಿಗೂ ಸಾಧ್ಯವಿಲ್ಲ.

ಆದ್ದರಿಂದ, ಸಾಮಾನ್ಯರು ಅಹಂಕಾರವನ್ನು ಎದುರಿಸಬೇಕಾದರೆ ಅಹಂಕಾರಿಗಳ ಬಗ್ಗೆ ಉದಾಸೀನರಾಗಿರುವುದೇ ಒಳಿತು. ಅಹಂಕಾರಕ್ಕೆ ಔದಾಸೀನ್ಯವೇ ಮದ್ದು. ಆಗ ಅಹಂಕಾರಿ ಹುಚ್ಚನ ಹಾಗೆ ಗಳಹಿಗಳಹಿ ತಾನೇ ಸುಮ್ಮನಾಗುತ್ತಾನೆ. ಕೇಳುವವರೇ ಕಿವುಡು ಕೇಳಿದರೆ, ಹೇಳುವವರೇನು ಗೋಡೆಗೆ ಹೇಳುತ್ತಾರೆಯೆ? ಆದ್ದರಿಂದ, ಅಹಂಕಾರದ ಪ್ರತೀಕಾರಕ್ಕೆ ಔದಾಸೀನ್ಯವೇ ಸರಳವಾದ, ಯುಕ್ತವಾದ ದಾರಿ.

## ಕೃತಿ-ಕರ್ತೃ ವಿಚಾರ

ನವೋದಯ ಕಾಲದ ಆರಂಭದ ಸಾಹಿತಿಗಳಲ್ಲಿ ರಾ.ಯ. ಧಾರವಾಡಕರ್ ಅವರ ಹೆಸರು ಪ್ರಸಿದ್ಧವಾದುದು. ಸುಮಾರು 40 ವರ್ಷಗಳ ಕಾಲ ಅವರು ಲೇಖನ ವ್ಯವಸಾಯ ನಡೆಸಿದರು. ಪ್ರಾಧ್ಯಾಪಕರಾಗಿ, ಭಾಷಾಶಾಸ್ತ್ರಜ್ಞರಾಗಿ, ಪ್ರಬಂಧಕಾರರಾಗಿ, ಪ್ರಾಚಾರ್ಯರಾಗಿ, ಅದ್ವಿತೀಯ ವಾಗ್ಮಿಯಾಗಿ ಬಾಳಿದ ಅವರ ವ್ಯಕ್ತಿತ್ವ ಬಹುಮುಖವಾಗಿದೆ. ಅವರು ಬದುಕಿನಲ್ಲಿಯೂ ಬರವಣಿಗೆಯಲ್ಲಿಯೂ ವಿಶಿಷ್ಟ ಹಾಗೂ ಸೋಪಜ್ಞ ಎನಿಸಬಹುದಾದ ಸಮತೋಲವನ್ನು ಉಳಿಸಿಕೊಂಡು ಬಂದ ಪ್ರಮುಖ ಸಾಹಿತಿ. ವೃತ್ತಿ ಗೌರವದ ಜೊತೆಗೆ ಜೀವನ ಘನತೆಯನ್ನು ಅವರು ಉಳಿಸಿಕೊಂಡು ಬಂದಿದ್ದಾರೆ. ತುಂಬಿದ ಬದುಕು ನಡೆಸಿದ್ದಾರೆ. ತೂಕದ ಬರವಣಿಗೆ ಮಾಡಿದ್ದಾರೆ. ಅವರು ಮಾಡಿರುವ ನೂರಾರು ಉಪನ್ಯಾಸಗಳ ಮೊತ್ತಕ್ಕೆ ಹೋಲಿಸಿದಾಗ ಅವರು ಬರೆದದ್ದು ಕಡಮೆಯೇ ಎನಿಸಿದರೂ ಬರೆದುದಷ್ಟೂ ಜನಪ್ರಿಯವಾಗಿದೆ. ಪತ್ರಿಕಾ ವ್ಯವಸಾಯ, ಕರ್ನಾಟಕದಲ್ಲಿ ವೃತ್ತಪತ್ರಿಕೆಗಳು, ಸಾಹಿತ್ಯ ಸಮೀಕ್ಷೆ, ಆರು ಪ್ರಬಂಧಗಳು, ನಮ್ಮ ದೇಶದ ಯೋಜನೆಗಳು, ಕನ್ನಡ ಭಾಷಾಶಾಸ್ತ್ರ, ವಿದ್ಯಾರ್ಥಿಗಳು, ಧೂಮ್ರ ವಲಯಗಳು, ಹೊಸಗನ್ನಡ ಸಾಹಿತ್ಯದ ಉದಯ ಕಾಲ, ಕನ್ನಡದಲ್ಲಿ ಕಾನೂನು ಶಾಸ್ತ್ರ, ವೆಂಕಟ್ ರಂಗೋ ಕಟ್ಟಿ, ತೂರಿದ ಚಿಂತನಗಳು, ನವಿಲುಗರಿ, ಶಾಂತ ಕವಿಗಳ ಮೂರು ಕೀರ್ತನೆಗಳು, ಶ್ರೀನಮನ, ಡಾ। ನಂದೀಮತ



ನೆನಪು ಮೊದಲಾದುವುಗಳು ರಾ.ಯ. ಧಾರವಾಡಕರ್ ಅವರ ಕೃತಿಗಳು.

ಈ ಲೇಖನವನ್ನು ಅವರ 'ತೂರಿದ ಚಿಂತನಗಳು' ಎಂಬ ಪ್ರಬಂಧ ಸಂಕಲನದಿಂದ ಆರಿಸಿಕೊಳ್ಳಲಾಗಿದೆ. ಜಗತ್ತಿನ ಜಂಜಡದಿಂದ ಬಿಡಿಸಿಕೊಳ್ಳಲು ಅಪೇಕ್ಷಿಸುವವರಿಗೆ ಬೇಕಾದ ಮನೋಭೂಮಿಕೆ ಇಲ್ಲಿದೆ. ತಮ್ಮ ಹೇಳಿಕೆಗಳನ್ನು ಸ್ಥಾಪಿಸಲು, ಸಮರ್ಥಿಸಲು ಲೇಖಕರು ವಿವಿಧ ದೃಷ್ಟಾಂತಗಳನ್ನು, ಗಾದೆ ಮಾತುಗಳನ್ನು ಮತ್ತು ಸಾಮತಿಗಳನ್ನು ನೀಡಿದ್ದಾರೆ. ಅಹಂಕಾರವು ವಿನಾಶದ ಹಾದಿ, ಅವಸಾನದ ಲಕ್ಷಣ. ಅಹಂಕಾರ ಎಂತೆಂಥ ಸಾತ್ವಿಕ, ಶೂರರನ್ನೂ ಬಿಟ್ಟಿಲ್ಲ. ಅದೊಂದು ಅಜಗರ. ಅದು ಒಬ್ಬರನ್ನು ಸುತ್ತಿಕೊಂಡಿತೆಂದರೆ ಅವರ ಎಲುಬುಗಳೆಲ್ಲಾ ಆ ಹಿಡಿತದಲ್ಲಿ ಪುಡಿಪುಡಿ ಆಗಲೇಬೇಕು. ಇದಕ್ಕೆ ಎಂತೆಂಥವರೂ ಅಪವಾದವಾಗಿಲ್ಲ ಎಂದು ಹೇಳಿ ಕೆಲವು ಉದಾಹರಣೆಗಳನ್ನು ಕೊಟ್ಟಿದ್ದಾರೆ. ಅದೇ ರೀತಿ ಅಹಂಕಾರಕ್ಕೆ ಔದಾಸೀನ್ಯವೇ ಮದ್ದು. ಅಹಂಕಾರದ ಪ್ರತೀಕಾರಕ್ಕೆ ಔದಾಸೀನ್ಯವೇ ಸರಳವಾದ, ಯುಕ್ತವಾದ ದಾರಿ ಎಂಬ ಸೂಚನೆಯನ್ನು ನೀಡಿದ್ದಾರೆ.

## I. ಕಠಿಣ ಪದಗಳ ಅರ್ಥ

ಧೂರ್ತ =ವಂಚಕ, ದುಷ್ಟ ; ತಾಮಸ =ತಮೋಗುಣ, ಅಜ್ಞಾನ; ದೋರ್ಬಲ =ಭುಜಬಲ; ಸಾತ್ವಿಕ =ಸಾಧುಗುಣ; ಪಲ್ಲಂಕ =ಪಲ್ಲಕ್ಕಿ; ಔದ್ಧತ್ಯ =ಉದ್ದಟತನ; ಜೀಕು =ಗೆಲುವು; ಅಗ್ಗಲಿಸು =ಹೆಚ್ಚಾಗು; ಪರಿಮಾರ್ಜನೆ =ತೊಳೆಯುವಿಕೆ; ಕ್ರುದ್ಧ =ಕೋಪ, ಸಿಟ್ಟು ; ಉಶ್ಶಾಪ =ಶಾಪ ವಿಮೋಚನೆ; ಅಜಗರ =ಹೆಬ್ಬಾವು; ದುಸ್ತರ =ಸಹಿಸಲಾಗದ, ದಾಟಲಾಗದ; ಪಾಂಥ =ಪ್ರಯಾಣಿಕ, ದಾರಿಹೋಕ; ಸಪ್ತರ್ಷಿ =ಏಳು ಋಷಿಗಳು (ವಿಶ್ವಾಮಿತ್ರ, ಜಮದಗ್ನಿ, ಭರದ್ವಾಜ, ಗೌತಮ, ಅತ್ರಿ, ವಸಿಷ್ಠ, ಕಶ್ಯಪ) ಅಥವಾ (ಮರೀಚಿ, ಅತ್ರಿ, ಆಂಗಿರಾ, ಅಗಸ್ತ್ಯ, ಪುಲಹ, ಕ್ರತು, ವಸಿಷ್ಠ).

## II. ಈ ಪ್ರಶ್ನೆಗಳಿಗೆ ಸಂಕ್ಷಿಪ್ತವಾಗಿ ಉತ್ತರಿಸಿ.

1. ಅತಿ ವಿನಯ ಹಾಗೂ ಜಂಭದ ಕುರಿತು ಲೇಖಕರ ಅಭಿಪ್ರಾಯವೇನು?

2. ಎಂಟು ಮದಗಳಾಗುವುವು ?

3. ರಾವಣನ ಅಹಂಕಾರಕ್ಕೆ ಕಾರಣವಾದವುಗಳು ಯಾವುವು ?

4. ನಹುಷ ಚಕ್ರವರ್ತಿಗೆ ಇಂದ್ರನ ಸ್ಥಾನ ದೊರಕಿದ್ದು ಹೇಗೆ ?

5. ಬಾಹುಬಲಿ ಯಾರು ?

6. ಪುರಾತನ ನಾಡಿನ ಪಾಂಥಸ್ಥ ಹೇಳಿದ ಕತೆಯೇನು ?

7. ಈ ಪಾಠದಲ್ಲಿ ಬಂದಿರುವ ಗಾದೆ ಮಾತುಗಳನ್ನು ಸಂಗ್ರಹಿಸಿ ಬರೆಯಿರಿ.

**III. ಈ ಪ್ರಶ್ನೆಗಳಿಗೆ ವಿವರವಾಗಿ ಉತ್ತರಿಸಿ.**

1. ರಾವಣನು ಸೀತೆಯ ಮನವನ್ನು ಒಲೈಸಲು ಹೇಳುವ ಮಾತುಗಳೇನು ?

2. ನಹುಷ ಚಕ್ರವರ್ತಿಯು ಅಜಗರವಾದ ಕತೆಯನ್ನು ವಿವರಿಸಿ.

3. ಬಾಹುಬಲಿಯ ಗರ್ವರಸ ಹೇಗೆ ಸೋರಿ ಹೋಯಿತು ?

4. ಉಪ್ಪಿನ ಬೊಂಬೆಯ ಕತೆಯನ್ನು ವಿವರವಾಗಿ ಬರೆಯಿರಿ.

**IV. ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

(ಅ) ಅಹಂಕಾರ ಯಾವುದರ ಹಾದಿ ?

(ಆ) ಮಸಿ ಯಾವುದನ್ನು ನುಂಗಿದಂತೆ ?

(ಇ) ಅತಿ ವಿನಯ ಧೂರ್ತ ಲಕ್ಷಣ, ಜಂಭ ಯಾವುದರ ಲಕ್ಷಣ ?

(ಈ) ಯಾರು ಮುಂದನ್ನು ಕಾಣುವುದಿಲ್ಲ ?



(ಉ) ಯಾರು ಮರಳಿ ಬರುವುದು ತುಂಬಾ ದುಸ್ತರ ?

(ಊ) ಉದ್ದುರುಟುತನಕ್ಕೆ ಯಾವುದು ಮದ್ದು ?

(ಋ) ಔದಾಸೀನ್ಯ ಯಾವುದಕ್ಕೆ ಮದ್ದು ?

(ಎ) ಯಾರು ಬಿಸಿಲಲ್ಲಿ ಹೋಗಬಾರದು ?

**V. ಭಾಷಾಭ್ಯಾಸ**

**1. ಕೆಳಗಿನ ಪದಗಳನ್ನು ಉಪಯೋಗಿಸಿ ವಾಕ್ಯಗಳನ್ನು ರಚಿಸಿರಿ.**

ಅಹಂಕಾರ, ಅವಸಾನ, ಅಗ್ಗಲಿಸು, ಪರಿಮಾರ್ಜನೆ, ಉಶ್ಶಾಪ, ಔದ್ಧತ್ಯ.

**2. ಕೆಳಗಿನ ಪದಗಳ ವಿರುದ್ಧ ಪದಗಳನ್ನು ಬರೆಯಿರಿ.**

ಲಕ್ಷಣ, ಪಾಪ, ಸದ್ಗುಣ, ವಿಷ, ಅರ್ಥ, ಸಾಮರ್ಥ್ಯ, ಶಾಪ, ಬೀಳು, ಯೋಗ್ಯ

**3. ಹೊಂದಿಸಿ ಬರೆಯಿರಿ.**

| | |
|---|---|
| ರಾವಣ | ಬಾಹುಬಲಿಯ ಅಣ್ಣ |
| ನಹುಷ | ದೈವ ಶ್ರದ್ಧೆಯುಳ್ಳವ |
| ಭರತ | ಜಂಭದ ಬೊಂಬೆ |
| ಓಝಿಮ್ಯಾಂಡಿಯಾಸ್ | ಸ್ವರ್ಗದ ಅಧಿಪತಿ |
| ಉಪ್ಪಿನ ಬೊಂಬೆ | ಅರಸರ ಅರಸ |

## VI. ಚಟುವಟಿಕೆ

1. ಅಹಂಕಾರದಿಂದ ಸರ್ವನಾಶ ಎಂಬ ನೀತಿಯನ್ನು ಮತ್ತು ಇತರ ಕತೆಗಳನ್ನು ಓದಿರಿ.
2. ಪಾಠದಲ್ಲಿ ಬಂದಿರುವ ಕತೆಗಳನ್ನು ಆಧರಿಸಿ ನಾಟಕಗಳನ್ನು ರಚಿಸಿ ಅಭಿನಯಿಸಿರಿ.

---



# 4. ಬುದ್ಧ ಬಸವ ಗಾಂಧಿ

**- ಎನ್. ಬಸವಾರಾಧ್ಯ**

ಭರತಖಂಡವು ಧರ್ಮಪ್ರಧಾನವಾದ ದೇಶ. ಅನಾದಿಕಾಲದಿಂದ ಈ ದೇಶದಲ್ಲಿ ಅನೇಕ ಧಾರ್ಮಿಕ ಮತ್ತು ಸಾಮಾಜಿಕ ಸುಧಾರಕರು ಜನ್ಮವೆತ್ತಿ ಈ ದೇಶದ ಜನತೆ ಸನ್ಮಾರ್ಗದಲ್ಲಿ ವರ್ತಿಸಲು ಕಾರಣಕರ್ತರಾಗಿದ್ದಾರೆ. ಇವರು 'ಸರ್ವೇಜನಾಃ ಸುಖಿನೋ ಭವನ್ತು' ಎಂಬ ಆರ್ಯೋಕ್ತಿಯಂತೆ ಮಾನವ ಜನಾಂಗದ ಕಲ್ಯಾಣಕ್ಕಾಗಿ ತಮ್ಮ ತನುಮನಧನಗಳನ್ನು ಧಾರೆಯೆರೆದಿದ್ದಾರೆ. ಇವರಲ್ಲಿ ಗೌತಮಬುದ್ಧ ವಿಶ್ವಬಂಧು ಬಸವಣ್ಣ ಮತ್ತು ಮಹಾತ್ಮಾ ಗಾಂಧಿ ಪ್ರಮುಖರು, ಪ್ರಸಿದ್ಧರು. ಈ ಮೂವರು ಭರತಖಂಡದ ತ್ರಿಮೂರ್ತಿಗಳೆಂದು ಪ್ರಖ್ಯಾತರಾಗಿದ್ದಾರೆ. ಲೋಕಹಿತಾರ್ಥವಾಗಿ ಇವರು ಕೈಗೊಂಡ ಕಾರ್ಯಗಳು ಸಾರ್ವತ್ರಿಕವೂ ಸಾರ್ವಕಾಲಿಕವೂ ಆದುವು. ಈ ವಿಶ್ವಾಚಾರ್ಯರು ತೋರಿದ ಮಾರ್ಗದಲ್ಲಿ ನಡೆದು ಈ ದೇಶದ ಜನತೆ ಸನ್ಮತಿಯನ್ನೂ ಸದ್ಗತಿಯನ್ನೂ ಪಡೆದುಕೊಂಡಿತು. ಈ ಮೂವರು ವಿಭೂತಿಪುರುಷರ ಆಲೋಚನಾಶಕ್ತಿ ಏಕರೀತಿಯದಾದರೂ ಮಾನವ ಜನಾಂಗದ ಉದ್ಧಾರಕ್ಕೂ ಉತ್ಥಾನಕ್ಕೂ ಅವರು ಕೈಕೊಂಡ ಮಾರ್ಗಗಳು ಭಿನ್ನವಾಗಿವೆ.

ಗೌತಮ ಬುದ್ಧ ಪರಿನಿರ್ವಾಣಹೊಂದಿ ಇಂದಿಗೆ ಸುಮಾರು ಇಪ್ಪತ್ತೈದು ಶತಮಾನಗಳು ಕಳೆದಿದ್ದರೂ ಮಾನವ ಜನಾಂಗದ ಮೇಲೆ ಆತನು ಬೀರಿರುವ ಪ್ರಭಾವ ಇನ್ನೂ ಮಸುಳಿಸಿಲ್ಲ. ಆತನು ಬೋಧಿಸಿದ ದಿವ್ಯತತ್ವಗಳು ಪ್ರಗತಿಪರವಾಗಿ ಸರ್ವರಿಗೂ ಸರ್ವಕಾಲದಲ್ಲೂ ಆದರ್ಶಪ್ರಾಯವಾಗಿವೆ, ಚಿರವಿನೂತನವಾಗಿವೆ, ಅನ್ಯಮತೀಯರಿಗೆ ಮೇಲ್ಪಂಕ್ತಿಯಾಗಿವೆ, ಆಕರ್ಷಣೀಯವಾಗಿವೆ.

ಗೌತಮಬುದ್ಧ ಲೋಕಕಲ್ಯಾಣಕ್ಕಾಗಿ ಜನ್ಮವೆತ್ತಿದ ವಿಭೂತಿಪುರುಷ. ಆತನು ಜೀವನದ ಜಂಜಾಟದಲ್ಲಿ ತೊಳಲುತ್ತಿದ್ದ ಮಾನವಕೋಟಿಯ ಕಷ್ಟಕಾರ್ಪಣ್ಯಗಳನ್ನು ಕಂಡು ಮರುಗಿ ಅವರ ಆತ್ಮೋದ್ಧಾರಕ್ಕಾಗಿ ತನುಮನಧನಗಳನ್ನು ಧಾರೆಯೆರೆದಿದ್ದಾನೆ. ಅಷ್ಟೇ ಅಲ್ಲ, ಅದಕ್ಕಾಗಿ ರಾಜ್ಯವನ್ನೂ ಕೈಹಿಡಿದ ಹೆಂಡತಿಯನ್ನೂ ಪ್ರೀತಿಯ ಮಗನನ್ನೂ ಬಂಧುಬಾಂಧವರನ್ನೂ ಪರಿತ್ಯಜಿಸಿದನು. 'ಅಹಿಂಸಾ ಪರಮೋಧರ್ಮಃ' ಎಂಬ ವಿಶಿಷ್ಟ ತತ್ವವನ್ನು ಸಾರಿ ತೋರಿದನು. ಬೌದ್ಧಧರ್ಮವು ವಿಶ್ವದ ಶ್ರೇಷ್ಠ

ಧರ್ಮಗಳಲ್ಲಿ ಒಂದು ಎಂಬುದನ್ನು ಪಾಶ್ಚಿಮಾತ್ಯ ತತ್ವಜ್ಞಾನಿಗಳೂ ಒಪ್ಪಿಕೊಂಡಿದ್ದಾರೆ.

ಬುದ್ಧನ ದೃಷ್ಟಿಯಲ್ಲಿ ಮಾನವತ್ವದ ಕಲ್ಪನೆ ಜನಾಂಗ ಮತ್ತು ರಾಷ್ಟ್ರಗಳ ಎಲ್ಲೆಯನ್ನು ಮೀರಿದ್ದು. ಕಳಂಕರಹಿತನಾಗಿ ಆತ್ಮದೀಪದ ನೆರವಿನಿಂದ ತನ್ನ ಭವಿಷ್ಯವನ್ನು ತಾನೇ ರೂಪಿಸಿಕೊಳ್ಳಬಲ್ಲ ಸ್ವತಂತ್ರಪುರುಷನ ಆವಿರ್ಭಾವದ ಗುರಿಯೇ ಬುದ್ಧನ ದೃಷ್ಟಿಯಾಗಿತ್ತು. ಬುದ್ಧ ವೈದಿಕ ಧರ್ಮದಲ್ಲಿ ಅಂದು ಪ್ರಚಾರದಲ್ಲಿದ್ದ ಯಜ್ಞ ಯಾಗಾದಿಗಳನ್ನೂ ಪಶುವಧೆ ನರವಧೆಗಳನ್ನೂ ಚಾತುರ್ವರ್ಣ್ಯ ಸಂಕೋಲೆಗಳನ್ನೂ ಖಂಡಿಸಿದನು. ಅಹಿಂಸೆಯ ಹೊಸಹಾದಿಯನ್ನು ತೆರೆದು ಸಮತಾವಾದದ ಒಂದು ನಿರ್ದಿಷ್ಟ ನೀತಿಯನ್ನು ಪ್ರತಿಪಾದಿಸಿದನು. ಸ್ತ್ರೀಯರ ಧಾರ್ಮಿಕ ಪಾರತಂತ್ರ್ಯವನ್ನು ಕಿತ್ತೊಗೆದು ಒಂದು ಕ್ರಾಂತಿಯನ್ನು ಮಾಡಿದನು. ಈ ಎಲ್ಲ ವಿಶಿಷ್ಟ ತತ್ವಗಳಿಂದ ಕೂಡಿದ ಬೌದ್ಧ ಧರ್ಮ ಸರ್ವಾದರಣೀಯವಾಯಿತು. ಅನೇಕ ರಾಜರು ಈ ಧರ್ಮವನ್ನು ಅನುಸರಿಸಿ ಅದಕ್ಕೆ ವಿಶೇಷ ಪ್ರೋತ್ಸಾಹವನ್ನು ಕೊಟ್ಟರು. ಇವರಲ್ಲಿ ಅಜಾತಶತ್ರು, ಬಿಂಬಸಾರ, ಅಶೋಕ ಮುಖ್ಯರಾದವರು. ಅಶೋಕ ಚಕ್ರವರ್ತಿ ಬೌದ್ಧಧರ್ಮದ ಉದಾತ್ತ ತತ್ವಗಳಿಗೆ ಮಾರುಹೋಗಿ ಸ್ವದೇಶದಲ್ಲಿ ಮಾತ್ರವಲ್ಲದೆ ವಿದೇಶದಲ್ಲಿಯೂ ಇದನ್ನು ಪ್ರಚುರಪಡಿಸಿದನು. ಆತನ ಪ್ರಯತ್ನದ ಫಲವಾಗಿ ಈ ಧರ್ಮ ಸಿಂಹಳದ್ವೀಪ, ಬರ್ಮಾ, ನೇಪಾಳ, ಲಾವೋಸ್, ಕಾಂಬೋಡಿಯಾ, ಚೀನಾ, ಜಪಾನ್, ಸಿಕ್ಕಿಂ, ಭೂತಾನ, ಇಂಡೋನೇಷ್ಯಗಳಲ್ಲೆಲ್ಲಾ ಹರಡಿ ಈಗಲೂ ಜೀವಂತವಾಗಿದೆ. ಸ್ವಾಮಿ ವಿವೇಕಾನಂದ, ಮಹಾತ್ಮಾಗಾಂಧಿ, ಪಂಡಿತ ಜವಹರಲಾಲ್ ನೆಹರೂ ಮೊದಲಾದ ಪ್ರತಿಭಾನ್ವಿತರು ಬೌದ್ಧಧರ್ಮದ ಉಚ್ಚನೀತಿಯಿಂದ ಉತ್ತೇಜಿತರಾಗಿ ಅದನ್ನು ಅನುಷ್ಠಾನಕ್ಕೆ ತರುವುದಕ್ಕೆ ಪ್ರಯತ್ನಿಸಿದ್ದಾರೆ.

ಗೌತಮಬುದ್ಧ ಅಜ್ಞಾನ ಮೌಢ್ಯ ಅಂಧಕಾರಗಳಲ್ಲಿ ಮುಳುಗಿದ್ದ ಮಾನವ ಕೋಟಿಗೆ ತಾನು ತಿಳಿದ ಜ್ಞಾನವನ್ನು ಬೋಧಿಸಿದನು. ಅವರ ಉದ್ಧಾರಕ್ಕಾಗಿ ತನ್ನ ಜೀವಿತದ ಉಳಿದ ಕಾಲವನ್ನೆಲ್ಲ ವಿನಿಯೋಗಿಸಿದನು. ಆತನ ಉಪದೇಶದ ಸಾರಾಂಶವಿಷ್ಟೆ : ಜೀವನ ದುಃಖಮಯವಾದುದು; ಹುಟ್ಟು ಸಾವುಗಳೂ ರೋಗರುಜಿನಗಳೂ ಅಹಿತಸಮಾಗಮ ಹಿತವಿಯೋಗಗಳೂ ಮನುಷ್ಯರನ್ನು ಸದಾ ಕಾಡುತ್ತವೆ. ದುಃಖಕ್ಕೆ ಮೂಲಕಾರಣ ಆಸೆ. ಈ ಆಸೆಯನ್ನು ತ್ಯಜಿಸುವುದಕ್ಕಾಗಿ ಅಜ್ಞಾನ ಮೌಢ್ಯಗಳನ್ನು ದೂರೀಕರಿಸಿ ಸನ್ಮಾರ್ಗದಲ್ಲಿ ನಡೆಯಬೇಕು.



ಸದವಲೋಕನ, ಸದವಧಾನ, ಸಚ್ಚಿಂತನ, ಸತ್ಪ್ರಯತ್ನ, ಸತ್ಕಾಂಕ್ಷೆ, ಸದ್ವರ್ತನೆ, ಸದುಕ್ತಿ ಮತ್ತು ಸಜ್ಜೀವನೋಪಾಯಗಳನ್ನು ಅನುಸರಿಸಿ ಅಹಿಂಸಾಮಾರ್ಗದಲ್ಲಿ ನಡೆದು ಆಸೆಯನ್ನು ದೂರ ಮಾಡಬೇಕು. ಸುಳ್ಳು ಹೇಳದೆ ಬೇರೆಯವರ ಮನಸ್ಸನ್ನು ನೋಯಿಸದೆ ಸತ್ಯದಿಂದಲೂ ಕರುಣೆಯಿಂದಲೂ ಬಾಳಬೇಕು. ಪ್ರಾಣಿಹಿಂಸೆಯನ್ನು ಎಂದಿಗೂ ಮಾಡಬಾರದು. ಮಾಂಸಾಹಾರವನ್ನೂ ಮಾದಕ ಪದಾರ್ಥಗಳನ್ನೂ ತ್ಯಜಿಸಬೇಕು. ಸೋಮಾರಿತನವನ್ನೂ ಹೀನವೃತ್ತಿಯನ್ನೂ ಬಿಟ್ಟು ಸದ್ಗುಣಗಳಿಂದ ಸನ್ಮಾರ್ಗದಲ್ಲಿ ನಡೆಯುವುದನ್ನು ಕಲಿಯಬೇಕು. ಯಾರಿಗೂ ಕೆಟ್ಟದ್ದನ್ನು ಬಯಸದೆ ಎಲ್ಲರಿಗೂ ಹಿತಕರವಾಗುವಂತೆ ಸಚ್ಚಾರಿತ್ರದಿಂದ ನಡೆದರೆ ಪೂರ್ಣಸಿದ್ಧಿ ದೊರೆತು ಜೀವನದ ಕಷ್ಟಪರಂಪರೆಗಳಿಂದ ಬಿಡುಗಡೆಯಾಗುವುದು.

ಬುದ್ಧ ತನ್ನ ಜೀವನಪರ್ಯಂತ ಧರ್ಮಬೋಧನೆಯನ್ನು ಮಾಡಿ ಮಾನವರ ಕಲ್ಯಾಣಮಾರ್ಗವನ್ನು ತೋರಿದ್ದಾನೆ. ಆತನು ಸಾರಿದ ವಿಶ್ವ ಪ್ರೇಮ, ಸದಾಚಾರ ಸಮಭಾವನೆಗಳು ಇಡೀ ಮಾನವ ಜಗತ್ತಿಗೇ ಮಾನ್ಯವಾಗಿವೆ. ಶೀಲಶುದ್ಧತೆಗಳಿಂದ ಕೂಡಿದ ಪ್ರೇಮ ದಯೆಗಳ ಆದರ್ಶ ನೀತಿಯೇ ವಿಶ್ವನೀತಿಯೆಂದು ಸಾರಿ ಜಗತ್ತಿನ ದೃಷ್ಟಿಯನ್ನೇ ತನ್ನತ್ತ ಕೇಂದ್ರೀಕರಿಸಿಕೊಂಡ ಬುದ್ಧದೇವನು ಧರ್ಮದಾನಿಯಾಗಿ ರಾರಾಜಿಸಿದ್ದಾನೆ.

ಮಾನವ ಕಲ್ಯಾಣಕ್ಕಾಗಿ ಬುದ್ಧನ ತರುವಾಯ ಸಹಸ್ರಾರು ವರ್ಷಗಳ ಮೇಲೆ ಜನ್ಮ ತಾಳಿದ ಭಗವಾನ್ ಬಸವೇಶ್ವರರು ನಂದೀಶ್ವರನ ಅಪರಾವತಾರ. ಅವರು ಮಾನವರ ಉದ್ಧಾರಕ್ಕಾಗಿ ಮರ್ತ್ಯದಲ್ಲಿ ಜನಿಸಿ ತಮ್ಮ ಜೀವಮಾನವನ್ನೆಲ್ಲ ಅದಕ್ಕಾಗಿ ಸವೆಸಿದ್ದಾರೆ. ಧಾರ್ಮಿಕವಾಗಿ ಸಾಮಾಜಿಕವಾಗಿ ರಾಜಕೀಯವಾಗಿ ಅವರು ಕೈಕೊಂಡ ಕ್ರಾಂತಿಕಾರಕ ಮಾರ್ಗಗಳು ಇತರರಿಗೆ ಆದರ್ಶಪ್ರಾಯವಾಗಿವೆ. ಬುದ್ಧ ಸತ್ಯ ಅಹಿಂಸೆಗಳ ಆಧಾರದ ಮೇಲೆ ಸಮತಾವಾದದ ಒಂದು ನಿರ್ದಿಷ್ಟ ನೀತಿಯನ್ನು ಪ್ರತಿಪಾದಿಸಿ ವರ್ಣಾಶ್ರಮ ಪದ್ಧತಿಯನ್ನು ಖಂಡಿಸಿ ಗುಣಶೀಲಗಳ ಮೇಲ್ಮೆಯನ್ನು ಎತ್ತಿಹಿಡಿದನು. ಆದರೆ ಜ್ಞಾನಪ್ರಧಾನವಾದ ಬೌದ್ಧಮತವು ಈ ದೇಶದಲ್ಲಿ ನೆಲೆಯಾಗಿ ನಿಲ್ಲಲಿಲ್ಲ. ವೈದಿಕಧರ್ಮ ಖಿಲವಾಗಿ ಬೌದ್ಧ ಜೈನಧರ್ಮಗಳ ಪ್ರಭಾವ ಜನತೆಯಲ್ಲಿ ಕುಗ್ಗುತ್ತಿದ್ದ ಸಮಯದಲ್ಲಿ ವಿಚಾರಪರರಾದ ಬಸವಣ್ಣನವರು ತಮ್ಮ ಪ್ರತಿಭೆಯಿಂದಲೂ ಪ್ರಗತಿಪರಮನೋಭಾವನೆಯಿಂದಲೂ ಪ್ರವರ್ಧಮಾನಕ್ಕೆ ಬಂದರು. ವರ್ಣಾಶ್ರಮಧರ್ಮಗಳ ಸಂಕೋಲೆಗಳಿಗೆ ಸಿಲುಕದಿದ್ದ ವೀರಶೈವ

ಮತವನ್ನು ಪುನರುಜ್ಜೀವನಗೊಳಿಸಿ ಸಮತಾಭಾವದ ಉನ್ನತ ಸಾಮಾಜಿಕ ನೀತಿಯನ್ನು ಪ್ರತಿಪಾದಿಸಿ ಅಂಧಕಾರದಲ್ಲಿ ತೊಳಲುತ್ತಿದ್ದ ಜನತೆಗೆ ಮಾರ್ಗವನ್ನು ತೋರಿಸಿದರು.

ಬಸವಣ್ಣನವರದು ಮುಖ್ಯವಾಗಿ ಸರ್ವೋದಯ ದೃಷ್ಟಿ. ಸಮಾಜದಲ್ಲಿನ ವರ್ಣಭೇದಗಳು ಅಳಿಯಬೇಕು. ಕೀಳು ಮೇಲೆಂಬ ಭಾವನೆ ನಿರ್ಮೂಲವಾಗಬೇಕು. ಕೇವಲ ಹುಟ್ಟಿನಿಂದಲೇ ಮನುಷ್ಯನ ಯೋಗ್ಯತೆಯನ್ನು ಅಳೆಯದೆ ಗುಣದಿಂದ ನಿರ್ಧರಿಸುವುದು ಉತ್ತಮವಾದ ಮಾರ್ಗ. ಧರ್ಮತತ್ತ್ವಗಳು ಸರ್ವರಿಗೂ ಸಮವಾಗಿ ಸೇರಿರುತ್ತವೆ. ಅವು ಕೆಲವಾರು ಪಂಡಿತರ ಅಥವಾ ಮನೆತನಗಳ ಸ್ವತ್ತಲ್ಲ. ಸ್ವಪ್ರತಿಷ್ಠೆಗೂ ಸ್ವಾರ್ಥಕ್ಕೂ ಆಚರಿಸುವ ಯಜ್ಞಯಾಗಾದಿಗಳನ್ನೂ ಹಿಂಸಾತ್ಮಕವಾದ ಪಶುವಧೆಯನ್ನೂ ನಿಲ್ಲಿಸಬೇಕು. ಜನತೆಯು ಅರ್ಥವಿಲ್ಲದ ಸಂಪ್ರದಾಯಗಳನ್ನೂ ಆಚಾರಗಳನ್ನೂ ತ್ಯಜಿಸಬೇಕು. ಬಸವಣ್ಣನವರು ಇಂಥ ಕ್ರಾಂತಿದಾಯಕ ಸಮಾಜೋದ್ಧಾರ ಮಾರ್ಗವನ್ನು ಎತ್ತಿ ಹಿಡಿದಿದ್ದರಿಂದ ಅಚಿರದಲ್ಲಿಯೇ ಅವರು ಜನಪ್ರಿಯತೆಯನ್ನು ಗಳಿಸಿದ್ದರಲ್ಲಿ ಆಶ್ಚರ್ಯವೇನಿಲ್ಲ.

ಬಸವಣ್ಣನವರು ಹಿಂದೂಸಮಾಜದ ಅವನತಿಗೆ ಕಾರಣವಾಗಿದ್ದ ಜಾತಿವಾದ ಮತ್ತು ಅಸ್ಪೃಶ್ಯತೆಯ ಕಳಂಕವನ್ನು ಹೋಗಲಾಡಿಸಿ ಸರ್ವಸಮಾನತೆಯ ಬುನಾದಿಯ ಮೇಲೆ ವೀರಶೈವ ಸಮಾಜವನ್ನು ಪ್ರಪ್ರಥಮವಾಗಿ ಸುಧಾರಿಸಿದರು. ''ವಿಪ್ರ ಮೊದಲು, ಅಂತ್ಯಜ ಕಡೆಯದಾಗಿ ಶಿವಭಕ್ತರಾದವರನೆಲ್ಲ ಒಂದೇ ಎಂಬೆ'' ಎಂಬ ಸಮತಾವಾದದ ತತ್ತ್ವವನ್ನು ಸಾರಿದರು. ಕಲ್ಯಾಣದಲ್ಲಿ ಇತಿಹಾಸ ಪ್ರಸಿದ್ಧವಾದ 'ಅನುಭವ ಮಂಟಪ' ವೆಂಬ ವಿದ್ಯಾಪೀಠವನ್ನು ಸ್ಥಾಪಿಸಿ ವೇದೋಪನಿಷತ್ತುಗಳ ರಹಸ್ಯಗಳನ್ನು ಧರ್ಮಬೋಧನೆಗಳನ್ನು ತಿಳಿಗನ್ನಡದಲ್ಲಿ ಜನಸಾಮಾನ್ಯರಿಗೂ ಅರ್ಥವಾಗುವಂತೆ ಉಪದೇಶಿಸಿದರು. 'ಕಾಯಕವೆ ಕೈಲಾಸ' ಎಂಬ ಬೀಜಮಂತ್ರವನ್ನು ಉಪದೇಶಿಸಿ ಎಲ್ಲ ಕಾಯಕಗಳಿಗೂ ಸಮಾನವಾದ ಸ್ಥಾನವನ್ನು ಕಲ್ಪಿಸಿಕೊಟ್ಟರು. ಸ್ವಾವಲಂಬನೆ, ಸ್ವತಂತ್ರಮನೋಭಾವನೆಗಳನ್ನು ಬೆಳೆಸುವುದಕ್ಕೆ ಪ್ರೇರಕರಾದರು. ಹಿಂದೂಸಮಾಜದಲ್ಲಿ ಸ್ತ್ರೀಯರಿಗಿದ್ದ ಅಡಚಣೆಗಳನ್ನು ತೊಡೆದು ಹಾಕಿ ಸಮಾಜದ ಅರ್ಧಾಂಗವಾದ ಮಹಿಳಾವರ್ಗಕ್ಕೂ ಸಮಾನಸ್ಥಾನವನ್ನು ಕೊಟ್ಟು ಗೌರವಿಸಿದರು. ನಿತ್ಯಜೀವನದಲ್ಲಿ ಸತ್ಯಶೀಲತೆಯ ಮಹತ್ವವನ್ನು ಒತ್ತಿ ಹೇಳಿ



ನುಡಿದಂತೆ ನಡೆದು ಹಿಂದೂ ಧರ್ಮದ ಶ್ರೇಷ್ಠತೆಯನ್ನು ಎತ್ತಿ ಹಿಡಿದರು. 'ಸಕಲ ಜೀವಾತ್ಮರಿಗೆ ಲೇಸ ಬಯಸುವರೆಲ್ಲ ಕುಲಜರು' ಎಂಬ ಮಹೋನ್ನತ ಲೋಕ ನೀತಿಯನ್ನು ಘೋಷಿಸಿ ವಿಶ್ವಬಂಧುತ್ವಕ್ಕೆ ಮಾರ್ಗ ತೋರಿದರು.

ಸುಮಾರು ಎಂಟುನೂರು ವರ್ಷಗಳ ಹಿಂದೆ ಬಸವಣ್ಣನವರು ಹಮ್ಮಿಕೊಂಡಿದ್ದ ಮಹೋದ್ದೇಶ ಅವರ ಜೀವಿತಕಾಲದಲ್ಲಿ ಪೂರ್ಣಫಲಕಾರಿಯಾಗಲಿಲ್ಲ. ಆದರೆ ಅವರು ಅಂದು ನೆಟ್ಟ ಸಸಿ ಹೆಮ್ಮರವಾಗಿ ಬೆಳೆದು ನಿರೀಕ್ಷೆಗಿಂತಲೂ ಅಧಿಕವಾದ ಫಲವನ್ನು ಕೊಡುತ್ತಿದೆ. ಅವರು ಸಾರಿದ ಸಂದೇಶ ಇಂದಿಗೂ ಜೀವಂತವಾಗಿ ಚಿರವಿನೂತನವಾಗಿ ಪ್ರಜ್ವಲಿಸುತ್ತಿದೆ. ಸ್ವಪರಿಪೂರ್ಣ ಆದರ್ಶಸಮಾಜವನ್ನು ರಚಿಸಿದ ಬಸವಣ್ಣನವರು ಇಂದಿನ ಸಮಾಜ ಸುಧಾರಕರಿಗೂ ರಾಷ್ಟ್ರನಿರ್ಮಾಪಕರಿಗೂ ಆರಾಧ್ಯಮೂರ್ತಿಗಳಾಗಿದ್ದಾರೆ. ಬಸವಣ್ಣನವರು ಧರ್ಮಪ್ರಚಾರಕರಾಗಿ ತತ್ತ್ವಬೋಧಕರಾಗಿ ಮೇಲಾದ ಭಕ್ತರಾಗಿ ಅಮರಸ್ಥಾನವನ್ನು ಪಡೆದಿದ್ದಾರೆ. ಸಾಮಾಜಿಕ ಧಾರ್ಮಿಕ ಮತ್ತು ಆರ್ಥಿಕ ಸಾಧನೆಗಳಿಂದ ಬಸವಣ್ಣನವರು ಯುಗಪುರುಷರಾಗಿ ಕನ್ನಡ ನಾಡಿಗೇ ಅಲ್ಲದೆ ಇಡೀ ಭರತಖಂಡಕ್ಕೆ ಜೀವಜ್ಯೋತಿಯಾಗಿ ಬೆಳಗಿದ್ದಾರೆ.

ಬಸವಣ್ಣನವರಾದ ಮೇಲೆ ಭರತಖಂಡದಲ್ಲಿ ಜನ್ಮತಾಳಿದ ಮಾನವ ಉದ್ಧಾರಕರಲ್ಲಿ ಮಹಾತ್ಮ ಗಾಂಧಿಯವರು ಮುಖ್ಯರು. ಅವರು ಇಪ್ಪತ್ತನೆಯ ಶತಮಾನದ ಯುಗಪುರುಷರು. ಇಡೀ ಜಗತ್ತಿಗೇ ಅವರು ಆದರ್ಶಪ್ರಾಯರಾಗಿ ಒಂದು ಹೊಸಯುಗವನ್ನೇ ಪ್ರಾರಂಭಿಸಿದರು. ಸತ್ಯ ಅಹಿಂಸೆಗಳೇ ಗಾಂಧೀಜಿಯ ಮಹಾಸ್ತ್ರಗಳು. ಈ ಶಾಂತಿಯ ಅಸ್ತ್ರಗಳಿಂದಲೇ ಸತ್ಯಾಗ್ರಹಿಗಳ ಸೈನ್ಯವನ್ನು ಸೇರಿಸಿ ಯೋಧರಂತೆ ಹೋರಾಡಿ ಜಗತ್ಕಲ್ಯಾಣದ ಮಾರ್ಗವನ್ನು ತೋರಿಸಿದರು. ವ್ಯಕ್ತಿ ದೇಶ ರಾಷ್ಟ್ರಗಳ ಕಲ್ಪನೆಯನ್ನೂ ಮೀರಿ ಮಾನವಕೋಟಿಯ ಸುಖಶಾಂತಿಗಳಿಗಾಗಿ ಶ್ರಮಿಸಿದರು.

ಗಾಂಧೀಜಿ ಮಾನವತ್ವವನ್ನು ಮರೆತು ಪಶುಗಳಂತೆ ವರ್ತಿಸುತ್ತಿದ್ದ ಇಂದಿನ ಬಲಿಷ್ಠರ ಹೃದಯವನ್ನು ಸತ್ಯ ಪ್ರೇಮ ದಯೆಗಳಿಂದ ಪರಿವರ್ತಿಸಿ ದೇವತ್ವವನ್ನು ತೋರಿಸಿಕೊಟ್ಟ ಹಿರಿಯ ವ್ಯಕ್ತಿ. 'ಸತ್ಯಮೇವ ಜಯತೇ, ಅಹಿಂಸಾ ಪರಮೋಧರ್ಮಃ' ಎಂಬ ಸೂತ್ರಗಳನ್ನು ಹಿಡಿದು ಜಗತ್ತಿಗೇ ಮಾರ್ಗದರ್ಶಕರಾದರು. ಗಾಂಧೀಜಿಯಂತೆ ತಮ್ಮ ಜೀವಿತಕಾಲದಲ್ಲೇ ವಿಶೇಷವಾದ

ಪ್ರಖ್ಯಾತಿಯನ್ನು ಪಡೆದ ವ್ಯಕ್ತಿಯನ್ನು ಚರಿತ್ರೆಯಲ್ಲಿ ಸಂದರ್ಶಿಸುವುದು ಕೂಡ ತೀರ ಅಪರೂಪ.

ಸುಮಾರು ಎರಡು ಶತಮಾನಗಳು ಪರದಾಸ್ಯದಲ್ಲಿ ತೊಳಲುತ್ತಿದ್ದ ನಮ್ಮ ಭರತಖಂಡವನ್ನು ಸ್ವತಂತ್ರಗೊಳಿಸುವುದಕ್ಕಾಗಿ ಸತ್ಯ ಮತ್ತು ಅಹಿಂಸೆಗಳೆಂಬ ದಿವ್ಯಾಸ್ತ್ರಗಳಿಂದ ಒಂದು ಪ್ರಬಲ ಸಾಮ್ರಾಜ್ಯದ ವಿರುದ್ಧವಾಗಿ ಹೋರಾಡಿ ಜಯಗಳಿಸಿದರು. ಈ ರೀತಿಯ ರಕ್ತಪಾತವಿಲ್ಲದ ಕ್ರಾಂತಿ ಹಿಂದೆ ಎಂದೂ ಎಲ್ಲಿಯೂ ನಡೆದಂತೆ ಚರಿತ್ರೆಯಿಂದ ಕಂಡುಬರುವುದಿಲ್ಲ.

ಗಾಂಧೀಜಿಯವರ ಕಾರ್ಯಕ್ಷೇತ್ರ ಬಹುಮುಖವಾದುದು. ಮಾನವ ಉದ್ಧಾರಕ್ಕಾಗಿ ಅವರು ಕೈಕೊಂಡ ಮಾರ್ಗಗಳು ಜಗತ್ತಿಗೇ ಮೇಲ್ಪಂಕ್ತಿಯಾಗಿವೆ. ನಮ್ಮ ಜನರಲ್ಲಿನ ಅಜ್ಞಾನ ಅಂಧಕಾರ ಮೌಢ್ಯಗಳನ್ನು ತೊಲಗಿಸಿ ಇತರ ಜನಾಂಗಗಳೊಂದಿಗೆ ತಲೆಯೆತ್ತಿ ಬಾಳುವಂತೆ ಮಾಡಲು ತಮ್ಮ ಜೀವನವನ್ನೇ ಮುಡುಪಾಗಿರಿಸಿದರು. ಅವರು ಭಗದ್ಭಕ್ತರಲ್ಲಿ ಅಗ್ರಗಣ್ಯರಾಗಿ ಶ್ರೇಷ್ಠ ಧಾರ್ಮಿಕ ಜೀವನವನ್ನು ನಡೆಸಿ ನಿಷ್ಠಾವಂತ ದೇಶಸೇವಕರೂ ಜಗತ್ತಿನ ಶಾಂತಿದೂತರೂ ಆಗಿ ವಿಶ್ವಶಾಂತಿಗಾಗಿ ಜಗತ್ಕಲ್ಯಾಣಕ್ಕಾಗಿ ಹೋರಾಡಿ ಅಮರರಾದರು.

ವಿಶ್ವದ ಚರಿತ್ರೆಯನ್ನು ಅವಲೋಕಿಸಿದಾಗ ಮಾನವ ಕಲ್ಯಾಣಕ್ಕಾಗಿ ದೀನ ದಲಿತರ ಉದ್ಧಾರಕ್ಕಾಗಿ ಹೋರಾಡಿದವರು ಹಲವಾರು ಜನ ಕಂಡು ಬರುತ್ತಾರೆ. ಅವರಲ್ಲಿ ಗೌತಮಬುದ್ಧ ಜಗಜ್ಯೋತಿ ಬಸವೇಶ್ವರ ಮತ್ತು ಮಹಾತ್ಮಗಾಂಧಿ ಇವರು ಅಗ್ರೇಸರರು. ಕಾಲದೃಷ್ಟಿಯಿಂದ ಇವರು ಬೇರೆಯಾದರೂ ಅಭಿಪ್ರಾಯದ ದೃಷ್ಟಿಯಿಂದ ಒಂದೇ ಆಗಿದ್ದಾರೆ. ಇವರು ನಿರಂತರ ಮಾನವ ಹಿತಸಾಧಕರಾಗಿದ್ದಾರೆ. ಸಾಮ್ರಾಟನಾಗಿದ್ದ ಬುದ್ಧ ಸಂಸಾರದ ಬವಣೆಯಲ್ಲಿ ತೊಳಲುತ್ತಿದ್ದ ಮಾನವರಿಗೆ ಆತ್ಮಕಲ್ಯಾಣದ ಮಾರ್ಗವನ್ನು ತೋರಿದನು. ಅವನು ಸಾರಿದ ಧರ್ಮನೀತಿಗಳು ದೇಶವಿದೇಶಗಳಲ್ಲೂ ಹರಡಿಕೊಂಡವು. ಬಸವಣ್ಣನವರು ಜೀವನದ ಹಲವಾರು ಕ್ಷೇತ್ರಗಳಲ್ಲಿ ಕ್ರಾಂತಿಯನ್ನು ಮಾಡಬೇಕಾಯಿತು. ಸ್ವಯಂ ಭಕ್ತಿ ಭಂಡಾರಿಗಳಾದ ಬಸವಣ್ಣನವರು ಸಾಮಾಜಿಕ ಧಾರ್ಮಿಕ ರಾಜಕೀಯ ಸಾಹಿತ್ಯ ಕ್ಷೇತ್ರಗಳಲ್ಲಿ ಕ್ರಾಂತಿಯನ್ನು ಮಾಡಿ ಜನಸಾಮಾನ್ಯದ ಮುಕ್ತಿಮಾರ್ಗವನ್ನು ತೋರಿದ್ದಾರೆ. ಮಾನವರ ಹಿತಸಾಧನೆಗೆ ಗಾಂಧೀಜಿಯವರು ಕೈಕೊಂಡ ಮಾರ್ಗ ಇವರಿಬ್ಬರಿಗಿಂತ



ಭಿನ್ನವಾದುದು. ಗಾಂಧೀಜಿಯವರು ಈ ದೇಶಕ್ಕೆ ಸ್ವರಾಜ್ಯವನ್ನು ತಂದುಕೊಡುವುದಕ್ಕೆ ಜೀವಮಾನಪೂರ್ತಿ ಹೆಣಗಬೇಕಾಯಿತು. ಸ್ವಾತಂತ್ರ್ಯದ ಮಹತ್ವವನ್ನು ನಮ್ಮ ಜನತೆಗೆ ಮನದಟ್ಟು ಮಾಡಿಕೊಡುವುದರಲ್ಲಿಯೇ ಅವರ ಜೀವನ ಕೊನೆಗೊಂಡಿತು. ಕೊನೆಗೆ ಗಾಂಧೀಜಿಯವರು ತಮ್ಮ ಗುರಿಯನ್ನು ಸಾಧಿಸಿದರು.

ಬುದ್ಧ ಬಸವ ಗಾಂಧೀಜಿ ಅವರು ಮಾನವ ಕಲ್ಯಾಣಕ್ಕಾಗಿ ಜನ್ಮವೆತ್ತಿದ ಮಹಾನುಭಾವರು. ಈ ದೇಶ, ಈ ದೇಶದ ಜನರ ಬಾಳು ಹಸನಾಗಲು ಜೀವಮಾನವೆಲ್ಲ ಅಹರ್ನಿಶಿ ದುಡಿದ ವಿಭೂತಿ ಪುರುಷರು. ಜಗತ್ತಿನ ಕಲ್ಯಾಣಕ್ಕಾಗಿ ಜನ್ಮ ತಾಳಿದ ತ್ರಿಮೂರ್ತಿಗಳು. ಇವರು ನಡೆದ ದಾರಿಯಲ್ಲೇ ನಡೆದು ಇವರು ಹಾಕಿಕೊಟ್ಟ ಮೇಲ್ಪಂಕ್ತಿಯನ್ನು ಅನುಸರಿಸಿದರೆ ಈ ನಾಡಿನ ಜನತೆಯ ಬದುಕು ಬಂಗಾರವಾಗುವುದರಲ್ಲಿ ಸಂಶಯವಿಲ್ಲ. ಆ ಕಾಲ ಸನ್ನಿಹಿತವಾಗಲಿ ಎಂದು ಹಾರೈಸೋಣ.

## ಕೃತಿ-ಕರ್ತೃ ವಿಚಾರ:

ಎನ್. ಬಸವಾರಾಧ್ಯರದ್ದು ಕನ್ನಡ ಸಾಹಿತ್ಯದಲ್ಲಿ ಬಹುದೊಡ್ಡ ಹೆಸರು. ವಿಮರ್ಶಕರಾಗಿ, ಗ್ರಂಥ ಸಂಪಾದಕರಾಗಿ, ಸಂಶೋಧನಾ ನಿಪುಣರಾಗಿ ಸಾರಸ್ವತ ಲೋಕದ ಸಮಸ್ತರಿಗೂ ಅವರು ಚಿರಪರಿಚಿತರು. ಅವರ ಪೂರ್ಣ ಹೆಸರು ನಂಜುಂಡಾರಾಧ್ಯ ಬಸವಾರಾಧ್ಯ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಅಧ್ಯಯನ ಸಂಸ್ಥೆಯ ಸಂಪಾದನಾ ವಿಭಾಗದ ಉಪ ನಿರ್ದೇಶಕರಾಗಿ ಅವರು ಹಲವು ಗ್ರಂಥಗಳನ್ನು ಪ್ರಕಾಶಿಸಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಅಪಾರ ಸೇವೆ ಸಲ್ಲಿಸಿದ್ದಾರೆ. ಇವರು ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದ ಕನ್ನಡ-ಕನ್ನಡ ನಿಘಂಟಿನ ಮೊದಲ ಸಂಪುಟದ ಸಂಪಾದಕರಾಗಿದ್ದರು. ಮಾತ್ರವಲ್ಲದೆ ಇಂಗ್ಲಿಷ್-ಕನ್ನಡ ನಿಘಂಟಿನ ಸಂಪಾದಕ ಮಂಡಲಿಯ ಸದಸ್ಯರೂ ಆಗಿದ್ದರು. ರಾಜ್ಯ ಸಾಹಿತ್ಯ ಅಕಾಡೆಮಿ ಹಾಗೂ ದೇವರಾಜ ಬಹಾದ್ದೂರ್ ಬಹುಮಾನಗಳು ಅವರಿಗೆ ದೊರೆತಿವೆ. ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ ಆಗಿದ್ದರು. ಅವರು ರಚಿಸಿದ ಕೃತಿಗಳ ಸಂಖ್ಯೆ ಸುಮಾರು 30. ತೊರವೆ ರಾಮಾಯಣ, ತ್ರಿಪುರ ದಹನ ಸಾಂಗತ್ಯ, ಚಂದ್ರಹಾಸನ ಕತೆ, ಕನ್ನಡ ಗದ್ಯ ವಿಕಾಸ, ಅಬ್ಬಲೂರು ಚರಿತ್ರೆ,

ಉದ್ಯೋಗ ಸಾರ ಮೊದಲಾದುವು ಇವರ ಮುಖ್ಯ ಕೃತಿಗಳು. ಈ ಲೇಖನವನ್ನು ಇವರ 'ಲೇಖನ ಸಂಚಯ' ಎಂಬ ಕೃತಿಯಿಂದ ಆಚರಿಸಲಾಗಿದೆ.

ಈ ಪಾಠದಲ್ಲಿ ಅಂದಂದಿನ ಕಾಲಘಟ್ಟಗಳಲ್ಲಿ ಮಾನವ ಕುಲವನ್ನು ಬಡಿದೆಬ್ಬಿಸಲು ಅವತರಿಸಿದ ವಿಭೂತಿ ಪುರುಷರ ಮಹತ್ಕಾರ್ಯಗಳನ್ನು ವಿವರಿಸಲಾಗಿದೆ. 2500 ವರ್ಷಗಳ ಹಿಂದೆ ಅವತರಿಸಿದ ಬುದ್ಧ, 800 ವರ್ಷಗಳ ಹಿಂದೆ ಕನ್ನಡ ನಾಡಿನಲ್ಲಿ ಜನ್ಮತಾಳಿದ ಬಸವಣ್ಣ ಹಾಗೂ ಅನ್ಯರ ದಾಳಿಗೆ ಈಡಾಗಿದ್ದ ಭಾರತವನ್ನು ವಿಮುಕ್ತಿಗೊಳಿಸಲು ಸತ್ಯ-ಅಹಿಂಸೆಗಳ ಮಾರ್ಗವನ್ನು ಅನುಸರಿಸಿ ಜಗತ್ತಿನ ಜನತೆಗೆ ಮಾರ್ಗದರ್ಶಕರಾದ ಮಹಾತ್ಮಾ ಗಾಂಧೀಜಿಯವರ ಬಾಳಿನ ಗುರಿ ಹಾಗೂ ಸಾಧನೆಗಳನ್ನು ಹೃದಯಂಗಮವಾಗಿ ಲೇಖಕರು ಇಲ್ಲಿ ವಿವರಿಸಿದ್ದಾರೆ.

## I. ಕಠಿಣ ಪದಗಳ ಅರ್ಥ

ಆರ್ಯೋಕ್ತ =ಸಂಸ್ಕೃತದ ಅಥವಾ ಪೂಜ್ಯರ ಮಾತು; ಸದ್ಗತಿ =ಒಳ್ಳೆಯ ಸ್ಥಿತಿ, ಮೋಕ್ಷ; ಉತ್ಥಾನ =ಉದಯ, ಮೇಲಕ್ಕೆ ಬರು; ವಿಭೂತಿ ಪುರುಷ =ಮಹಾಪುರುಷ, ಮಹಾತ್ಮ; ಅನುಷ್ಠಾನ =ಆಚರಣೆ; ಪರಿನಿರ್ವಾಣ =ಮುಕ್ತಿ, ಮೋಕ್ಷ; ಎಲ್ಲೆ =ಗಡಿ, ಮೇರೆ; ಆವಿರ್ಭಾವ =ಹುಟ್ಟು ; ಮೌಢ್ಯ =ತಿಳಿಗೇಡಿತನ, ದಡ್ಡತನ; ಅಂಧಕಾರ =ಕತ್ತಲು; ಅವಧಾನ =ಲಕ್ಷ್ಯ, ಗಮನ; ಪ್ರವರ್ಧಮಾನ =ಅಭಿವೃದ್ಧಿ ಹೊಂದುವ; ಅಚಿರ =ಕ್ಷಣಿಕ, ಅಶಾಶ್ವತ; ವಿಪ್ರ =ಬ್ರಾಹ್ಮಣ; ಅಂತ್ಯಜ =ಹರಿಜನ, ಶೂದ್ರ; ಚಾತುರ್ವರ್ಣ್ಯ =ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳು; ವಿನೂತನ =ಹೊಚ್ಚ ಹೊಸತಾದ; ಕುಲಜರು =ಉತ್ತಮ ಕುಲದಲ್ಲಿ ಹುಟ್ಟಿದವರು; ಮೇಲ್ಪಂಕ್ತಿ =ಉತ್ತಮ ಮಾದರಿ; ಅಮರ =ಸಾವಿಲ್ಲದ, ಶಾಶ್ವತವಾದ; ಅಗ್ರೇಸರ =ಮುಂದಾಳು, ಶ್ರೇಷ್ಠ; ಅಹರ್ನಿಶಿ =ಹಗಲುರಾತ್ರಿ; ನಿರಂತರ =ಎಡೆಬಿಡದೆ, ಯಾವಾಗಲೂ;

## II. ಕೆಳಗಿನ ಪ್ರಶ್ನೆಗಳಿಗೆ ಸಂಕ್ಷಿಪ್ತವಾಗಿ ಉತ್ತರಿಸಿರಿ.

1. ಮಾನವ ಜನಾಂಗದ ಕಲ್ಯಾಣಕ್ಕಾಗಿ ತನುಮನಧನಗಳನ್ನು ಧಾರೆಯೆರೆದ ಭರತ ಖಂಡದ ತ್ರಿಮೂರ್ತಿಗಳಾರು ?



2. ಬೌದ್ಧ ಧರ್ಮದ ವಿಶಿಷ್ಟ ತತ್ವಗಳೇನು ? ಅವನ್ನು ಪ್ರತಿಪಾದಿಸಿದವನಾರು ?
3. ಬೌದ್ಧ ಧರ್ಮಕ್ಕೆ ಪ್ರೋತ್ಸಾಹ ಕೊಟ್ಟ ರಾಜರಾರು ? ಅವರಿಂದ ಬೌದ್ಧ ಧರ್ಮವು ಬೇರೆ ಯಾವ ಯಾವ ದೇಶಗಳಿಗೆ ಹರಡಿತು ?
4. ಬಸವೇಶ್ವರರು ಯಾರ ಅಪರಾವತಾರ ? ಅವರು ಜನತೆಗೆ ಯಾವ ಮಾರ್ಗವನ್ನು ತೋರಿದರು ?
5. ಬಸವಣ್ಣನವರು ಯಾವ ವಿದ್ಯಾಪೀಠವನ್ನು ಸ್ಥಾಪಿಸಿದರು ? ಅದರ ಕಾರ್ಯಕಲಾಪಗಳೇನು ?
6. ಗಾಂಧೀಜಿಯ ಮಹಾಸ್ತ್ರಗಳಾವುವು ? ಆ ಅಸ್ತ್ರಗಳಿಂದ ಏನು ನಡೆಯಿತು ?

## III. ಈ ಪ್ರಶ್ನೆಗಳಿಗೆ ವಿವರವಾದ ಉತ್ತರ ಬರೆಯಿರಿ.

1. ಗೌತಮ ಬುದ್ಧನು ಸಾರಿದ ಉಪದೇಶದ ಸಾರಾಂಶವನ್ನು ವಿವರವಾಗಿ ಬರೆಯಿರಿ.
2. ಬಸವಣ್ಣನವರ ದೃಷ್ಟಿ ಎಂತಹುದು ? ಅದರ ಮೂಲ ಸೂತ್ರಗಳಾವುವು ?
3. ಗಾಂಧೀಜಿಯವರು ಯಾವ ರೀತಿ ಮಾನವ ಜನಾಂಗಕ್ಕಾಗಿ ಹೋರಾಡಿ ಅಮರರಾದರು ?
4. ಕಾಲದೃಷ್ಟಿಯಿಂದ ಬುದ್ಧ, ಬಸವ ಹಾಗೂ ಗಾಂಧಿ ಬೇರೆ ಬೇರೆಯಾದರೂ ಅಭಿಪ್ರಾಯದ ದೃಷ್ಟಿಯಿಂದ ಒಂದೇ ಆಗಿದ್ದಾರೆ ಎಂಬ ಲೇಖಕರ ಮಾತನ್ನು ವಿಶದ ಪಡಿಸಿರಿ.

## IV. ಭಾಷಾಭ್ಯಾಸ

1. **ಕೆಳಗಿನ ಪದಗಳನ್ನು ಉಪಯೋಗಿಸಿ ವಾಕ್ಯಗಳನ್ನು ರಚಿಸಿರಿ.**

ಹಿತಾರ್ಥ, ಉತ್ಥಾನ, ವಿಭೂತಿ, ಅನುಷ್ಠಾನ, ಅಂಧಕಾರ, ಪ್ರವರ್ಧಮಾನ, ವಿನೂತನ, ಅಮರ, ನಿರಂತರ

2. **ಕೆಳಗಿನ ಪದಗಳನ್ನು ಬಿಡಿಸಿ ಬರೆದು ಸಂಧಿಯ ಹೆಸರನ್ನು ತಿಳಿಸಿರಿ.**

ಆರ್ಯೋಕ್ತಿ, ಹಿತಾರ್ಥ, ಸದ್ಗತಿ, ಸನ್ಮತಿ, ಸದಾಚಾರ, ಮಹಾನುಭಾವ, ಸರ್ವೋದಯ, ಆತ್ಮೋದ್ಧಾರಕ, ಸರ್ವಾದರಣೀಯ

**V. ಚಟುವಟಿಕೆ**

1. ಬುದ್ಧ, ಬಸವ ಹಾಗೂ ಗಾಂಧೀ ಅವರ ಜೀವನ ಚರಿತ್ರೆಗೆ ಸಂಬಂಧಿಸಿದ ಪುಸ್ತಕಗಳನ್ನು ಓದಿರಿ.
2. ಹಾಗೆಯೇ ಇತರ ಮಹಾತ್ಮರ ಚರಿತ್ರೆಗಳನ್ನೂ ಓದಿ ತಿಳಿಯಿರಿ. ಅಂತಹ ವ್ಯಕ್ತಿಗಳ ಪಟ್ಟಿಯನ್ನು ತಯಾರಿಸಿರಿ.



# 5. ಕೊಟ್ಟ ಕುದುರೆ

**- ಜಿ.ಎಸ್. ಶಿವರುದ್ರಪ್ಪ**

ದೇವರಿದ್ದಾನೆಯೆ ಇಲ್ಲವೆ, ಈ ಬದುಕಿಗೊಂದು ಆದರ್ಶವಿರಬೇಕೆ ಬೇಡವೆ ಇತ್ಯಾದಿ ವಿಷಯಗಳಲ್ಲಿ, ಆಸ್ತಿಕರಿಗೂ ನಾಸ್ತಿಕರಿಗೂ, ಆದರ್ಶವಾದಿಗಳಿಗೂ, ವಾಸ್ತವವಾದಿಗಳಿಗೂ ಮೂಲಭೂತವಾದ ಅಭಿಪ್ರಾಯ ಭೇದಗಳಿರುವುದು ಸಾಧ್ಯ. ಆದರೆ ಈ ಬದುಕು ನಶ್ವರವೆಂಬುದನ್ನು ಮಾತ್ರ ಈ ಎಲ್ಲರೂ ಸಮಾನವಾಗಿ ಒಪ್ಪುತ್ತಾರೆ. ಆದರ್ಶವಾದಿಯಾದವನು, ವಿರಾಗದ ಹಾದಿಯನ್ನು ಮೆಚ್ಚುವವನು ಹೇಳುತ್ತಾನೆ: ಈ ಬದುಕು ಮೂರು ದಿನದ್ದು ; ಕೇವಲ ನಶ್ವರ. ಆದಕಾರಣ ಅದರಲ್ಲಿ ಯಾಕೆ ಮಗ್ನನಾಗುತ್ತೀಯ ಎಂದು ವಾಸ್ತವವಾದಿಯಾದವನು, ಭೋಗಿಯಾದವನು ಹೇಳುತ್ತಾನೆ: ಈ ಬದುಕು ಮೂರು ದಿನದ್ದು ; ಕೇವಲ ನಶ್ವರ. ಆದಕಾರಣ ಇರುವ ಅಲ್ಪಕಾಲದಲ್ಲಿಯೆ ಈ ಬದುಕಿನ ಸೊಗಸನ್ನು ಸವಿಯೋಣ ಎಂದು. ಎಂದರೆ ಇವರೆಲ್ಲರೂ ಸಮಾನವಾಗಿ ಒಪ್ಪುವ ಒಂದು ತತ್ವ ಈ ಜೀವನ ನಶ್ವರ ಎಂಬುದನ್ನು ಅಥವಾ ಮೃತ್ಯುವನ್ನು. ಯಾಕೆಂದರೆ ಈ ಬದುಕು ನಶ್ವರ ಎಂಬುದು ನಮಗೆ ಅನುಭವಕ್ಕೆ ಬರುವುದು, ಲೋಕವಸ್ತುಗಳು ನೋಡ ನೋಡುತ್ತಲೇ ಮೃತಿಯನ್ನೈದುತ್ತವೆ ಎಂಬ ಸತ್ಯದ ಮೂಲಕ. ಈ ಮೃತ್ಯುವೆಂಬುದು ಒಂದು ಅನಿವಾರ್ಯ ಅವಸ್ಥೆಯಾಗಿ ಎಲ್ಲವನ್ನು ನುಂಗಿ ನೊಣೆಯುತ್ತದೆ. ಈ ದೃಷ್ಟಿಯಿಂದ ನೋಡಿದಾಗ ಈ ಮೃತ್ಯು ಎಂಬುದು ಎಲ್ಲರಿಗೂ ಸಾಕ್ಷಾತ್ತಾಗಿ ಗೋಚರಿಸುವ ಮತ್ತು ಎಲ್ಲರೂ ಒಪ್ಪಿಕೊಳ್ಳಬೇಕಾದ ಒಂದು ತತ್ವ ಯೋಗಿಯಾಗಲಿ, ಭೋಗಿಯಾಗಲಿ, ಆಸ್ತಿಕನಾಗಲಿ, ನಾಸ್ತಿಕನಾಗಲಿ, ಸಮಾನವಾಗಿ ಒಪ್ಪಿಕೊಳ್ಳುವುದು ಮೃತ್ಯುವಿನ ಅಸ್ತಿತ್ವವನ್ನು.

ಈ ಮೃತ್ಯುವೆಂಬುದು ಒಂದು ಇದೆಯೆಂದರೂ ಬದುಕುವ ಹಂಬಲ ಅದಮ್ಯವಾದುದು. ದಿನದಿನವೂ ಸುತ್ತಲೂ ಜನ ಸಾಯುತ್ತಿದ್ದರೂ, ತಾವು ಮಾತ್ರ ಉಳಿದೇವೆಂಬಂತೆ, ಮರಣವನ್ನು ತಪ್ಪಿಸಲಾಗದಿದ್ದರೂ, ಅದನ್ನು ಕೊಂಚ ಮುಂದೆ ಹಾಕಬಹುದೇನೊ ಎಂಬಂತೆ ನಡೆದುಕೊಳ್ಳುತ್ತೇವೆ. ಮೃತ್ಯುವೆಂಬುದು ಈ ಬದುಕಿಗೆ ಕೊನೆ ಎಂದು ನಾವು ಕಂಡರೂ, ಮನುಷ್ಯನ ಮನಸ್ಸು ಇದೇ ಕೊನೆ ಅಲ್ಲವೆಂದೂ ಇದರಾಚೆಗೂ ಒಂದು ಜೀವನವಿದೆ ಎಂತಲೂ ಕಲ್ಪಿಸಿಕೊಂಡು, ಸಾವಿಗಿಂತಲೂ

ಜೀವನ ದೊಡ್ಡದೆಂಬುದನ್ನು ಸಾಧಿಸಲು ಪ್ರಯತ್ನಿಸಿದೆ. ಹೀಗಾಗಿ ಸಾವಿನಾಚೆ ಏನಿರಬಹುದು ಎಂಬ ಊಹಾಪೋಹಗಳು ಶುರುವಾಗಿ ಸ್ವರ್ಗ-ನರಕಗಳನ್ನೂ, ಲೋಕ ಲೋಕಾಂತರಗಳನ್ನೂ, ಅಲ್ಲಿರುವ ಮರಣಾತೀತವಾದ ದೇವಾನುದೇವತೆಗಳನ್ನೂ ಮನುಷ್ಯನ ಮನಸ್ಸು ನಿರ್ಮಿಸಿ, ಈ ಮರಣದ ಭಯಂಕರತೆಯಿಂದ ಪ್ರಾಪ್ತವಾಗುವ ನಿರಾಶೆಯನ್ನು ನಿವಾರಿಸಲು 'ಪರ'ದ ಕಲ್ಪನೆಯೊಂದನ್ನು ಕಟ್ಟಿ ನಿಲ್ಲಿಸಿದೆ.

ಮೃತ್ಯು ತತ್ವವನ್ನು ಒಂದು ಕೇಂದ್ರಬಿಂದುವನ್ನಾಗಿರಿಸಿಕೊಂಡು, ಯಾವಾಗ ಈ ಬದುಕನ್ನು ಇಹ-ಪರ ಎಂಬುದಾಗಿ ಇಬ್ಭಾಗಿಸಿಕೊಂಡೆವೋ, ಮತ್ತು ಈ ಒಂದು ಭಾವನೆ ಯಾವಾಗ ಪರಂಪರಾನುಗತವಾಗಿ ಜನಮನದಲ್ಲಿ ಬೆರೆತು ಬಂದಿತೋ ಅಂದಿನಿಂದ ನಮ್ಮ ದೈನಂದಿನ ಜೀವನದಲ್ಲಿ ಒಂದು ಬಗೆಯ ದ್ವಂದ್ವಕ್ಕೆ ಅವಕಾಶವಾಯಿತು. ಇಹವೆಂಬುದು ನಶ್ವರವೆಂತಲೂ, ಇದಕ್ಕಿಂತಲೂ ಶಾಶ್ವತವಾದ ಪರವೆಂಬುದೊಂದಿದೆಯೆಂತಲೂ, ಮನುಷ್ಯನ ಇಹದ ಬದುಕೇನಿದ್ದರೂ ಆ 'ಪರ'ದ ಸಾಧನೆಗೆ ಮಾಡಿಕೊಳ್ಳುವ ಒಂದು ಸಿದ್ಧತೆಯೆಂತಲೂ ಭಾವನೆಗಳು ಪ್ರಚಲಿತವಾದುವು. ಪರದ ಹಂಗಿಲ್ಲದೆ, ಇಹದ ಜೀವನವೊಂದಿದ್ದರೆ ಸಾಕೆಂಬ ನಂಬಿಕೆಯೆ ದುರ್ಬಲವಾಗುವಷ್ಟರ ಮಟ್ಟಿಗೆ ನಮ್ಮ ದೇಶದ ಶಾಸ್ತ್ರ-ಪುರಾಣ-ಆಗಮಗಳು ನಮ್ಮ ಬದುಕಿನ ಮೇಲೆ 'ಪರ'ದ ಮಹತ್ವವನ್ನು ಸ್ಥಾಪಿಸಿಬಿಟ್ಟಿವೆ. ಕೊಂಚ ವಿಚಾರ ಮಾಡಿದರೆ 'ಪರ'ದ ಕಲ್ಪನೆಯ ಉದ್ದೇಶ ಅಂಥದೊಂದು ಪ್ರತ್ಯೇಕವಾದ ಸ್ಥಿತಿ ಉಂಟೆಂಬುದಕ್ಕಿಂತ, ಇಹದ ಬದುಕಿನಲ್ಲಿ ಮನುಷ್ಯ ಪರದ ಆಕರ್ಷಣೆಯಿಂದಾದರೂ ಒಳಿತಾಗಿ ನಡೆದುಕೊಳ್ಳಲಿ ಎಂಬ ನೈತಿಕ ತಂತ್ರವಾದಂತೆ ತೋರುತ್ತದೆ. ಮನುಷ್ಯನ ಇಹದ ನಡವಳಿಕೆಗೆ, ಮರಣಾನಂತರ ಒದಗುವ ಸದ್ಗತಿ ದುರ್ಗತಿಗಳ ಸಂಗತಿಯನ್ನು, ಸ್ವರ್ಗದ ಆಕರ್ಷಣೆಯನ್ನು, ನರಕದ ಭಯವನ್ನೂ ಪರಿಣಾಮವಾಗಿ ಒಡ್ಡುವ ತಂತ್ರದ ಮೂಲಕ, ಈ ಲೋಕದ ಬದುಕು ಹಸನಾಗಲಿ ಎಂಬ ಉದ್ದೇಶವನ್ನು ಇದು ಸಾಧಿಸುತ್ತದೆ.

ಆದರೆ ಸಾವಿನಾಚೆಗೆ ಏನಿದೆಯೋ, ಏನಿಲ್ಲವೋ, ಅದನ್ನು ಕಂಡವರಾರು ? ಕಂಡರೂ ಹಿಂದಕ್ಕೆ ಬಂದು ಹೇಳಿದವರಾರು ? ಸಾವಿನೀಚೆಯ ಬದುಕಂತೂ ನಮ್ಮೆದುರಿಗಿದೆ; ಅದು ನಮ್ಮದು. ಅದನ್ನು ಪ್ರೀತಿಸುವುದನ್ನು, ಯಾವ ಪರದ ಪರದಾಟವೂ ಇಲ್ಲದೆ ಪ್ರೀತಿಸುವುದನ್ನು ನಾವು ಕಲಿಯಬೇಕಾಗಿದೆ. 'ಪರ'ದ



ಹೆಸರಿನಲ್ಲಿ ಇಹದ ಬದುಕನ್ನು ತುಚ್ಛವಾಗಿ ಕಾಣುವುದಾಗಲಿ, ಗೌಣವಾಗಿ ಎಣಿಸುವುದಾಗಲಿ ಸಲ್ಲದು. ಇಹ-ಪರವೆರಡರಲ್ಲೂ ಸಲ್ಲುವಂತೆ ಬದುಕಬೇಕು ಎನ್ನುತ್ತಾರೆ ತಿಳಿದವರು; ಆದರೆ ಪರವೆಂದರೇನೆಂದು ತಿಳಿಯದ ನಾವು ಇಹವನ್ನು ಚೆನ್ನಾಗಿ ಬದುಕಿದರೆ ಸಾಕು. ಡಿ.ವಿ.ಜಿ. ಯವರು ಹೇಳಿದ ಮಾತು - 'ಸುರಧನುವಿಗೇಣೆಯಿಡಹೊರಟು ನಿನ್ನಂಗಳದ ಕಿರುಹೂವ ಮರೆಯುವೆಯ, ಮಂಕುತಿಮ್ಮ' ಎಂಬುದು ನೆನಪಿನಲ್ಲಿಡಬೇಕಾದದ್ದಾಗಿದೆ. ಇಲ್ಲಿನ ಸುಖ-ದುಃಖ; ಇಲ್ಲಿನ ಚೆಲುವು ಒಲವು, ಸಾವಿನಾಚೆಗೆ ಇದ್ದಿರಲಾರದು. ನಮ್ಮ ಉಪನಿಷತ್‌ಕಾರರು ಒತ್ತಿ ಹೇಳಿದ್ದೂ ಇದನ್ನೇ; ಈ ಲೋಕದ ಕರ್ತವ್ಯ ಕರ್ಮಗಳನ್ನು ಮಾಡುತ್ತಲೇ ನಾವು ನೂರು ಶರದಗಳನ್ನು ಕಾಣುವಂತಾಗಲಿ ಎಂದು. ಈ ಜೀವನಶ್ರದ್ಧೆ ಎಲ್ಲಕ್ಕಿಂತ ದೊಡ್ಡದು; ಇರುವ ಬದುಕನ್ನು ಯಥಾವತ್ತಾಗಿ ಒಪ್ಪಿಕೊಂಡು ಬದುಕುವ ಧೈರ್ಯ ದೊಡ್ಡದು.

'ಕೊಟ್ಟ ಕುದುರೆಯನೇರಲರಿಯದೆ ಮತ್ತೊಂದ ಬಯಸುವವರು ವೀರರೂ ಅಲ್ಲ, ಧೀರರೂ ಅಲ್ಲ' — ಎಂಬ ಒಂದು ಮಾತು ಬರುತ್ತದೆ, ಅಲ್ಲಮಪ್ರಭುಗಳ ಒಂದು ವಚನದಲ್ಲಿ. ಈ ಮಾತಿನಲ್ಲಿ ಬದುಕನ್ನು ಕುರಿತ ವಾಸ್ತವಿಕ ದೃಷ್ಟಿಯ ವಿಚಾರವಿದೆ; ಅಷ್ಟೇ ಅಲ್ಲ, ಜೀವನವನ್ನು ಒಪ್ಪಿಕೊಳ್ಳಬೇಕಾದ ರೀತಿಯ ನಿರ್ದೇಶನವಿದೆ.

ಈ ಬದುಕಿನಲ್ಲಿ ನಾವು ನೂರಾರು ಕನಸು ಕಟ್ಟಬಹುದು; ಅದು ಹಾಗಿರಬೇಕು, ಹೀಗಿರಬೇಕು, ಎಂದು ಊಹಿಸಬಹುದು; ಭಾವಿಸಬಹುದು ; ಆಶಿಸಬಹುದು. ಆದರೆ ನಾವು ಊಹಿಸಿದ, ಆಶಿಸಿದ ರೀತಿಯಲ್ಲೇ ನಮಗೆ ಬದುಕಿನ ಸಮಯ-ಸಂದರ್ಭಗಳು ದೊರೆಯದೆ ಹೋಗಬಹುದು. ಆದುದರಿಂದ ಅಂದಂದು, ಬದುಕು ಏನೇನನ್ನು ತಂದೊಡ್ಡುತ್ತದೆಯೋ ಅದನ್ನು ಒಪ್ಪಿಕೊಳ್ಳದೆ, ಎದುರಿಸದೆ ಬೇರೆ ದಾರಿಯಿಲ್ಲ.

ಈ ಬದುಕು ಒಂದು ಕೊಟ್ಟ ಕುದುರೆಯಂತೆ, ಅದನ್ನು ಹತ್ತಿ ಪಳಗಿಸಿ ಸವಾರಿ ಮಾಡುವುದನ್ನು ಕಲಿಯಬೇಕಾಗಿದೆ. ನಾವು ಯಾವ ಯಾವ ಹೊತ್ತಿನಲ್ಲಿ ಯಾವ ಸಂದರ್ಭಗಳನ್ನು ಎದುರಿಸಬೇಕೆಂಬುದು ನಮಗೆ ತಿಳಿಯದ ಸಂಗತಿ; ಆದರೆ ಬಂದ ಪ್ರಸಂಗಗಳನ್ನು ಹಿಡಿದು ಪಳಗಿಸಿ ಅದರ ಮೇಲೆ ಪ್ರಭುತ್ವವನ್ನು ಸ್ಥಾಪಿಸುವುದನ್ನು

ನಾವು ಕಲಿಯಬೇಕಾಗಿದೆ. ಹೀಗೆ ಬದುಕು ತಂದುಕೊಟ್ಟ ಏರು ಎಂದ ಕುದುರೆಯನ್ನು, ಅದು ಚೆನ್ನಾಗಿಲ್ಲವೆಂದೋ, ಇದು ನನಗೆ ಬೇಡ ಎಂತಲೋ ಹೇಳಿ, ಕೊಟ್ಟ ಕುದುರೆಯನ್ನೇರಲರಿಯದೆ ಮತ್ತೊಂದನ್ನು ಬಯಸಿ, ಕುದುರೆ ಸವಾರಿಗೆ ಬಳಸುವ ತಡಿ-ಲಗಾಮು ಮೊದಲಾದ ಸಾಮಗ್ರಿಗಳನ್ನು ಹೊತ್ತು ನಾವೇ ಕುದುರೆಯಾಗಿ ಅಲೆಯುವುದು ಧೀರತೆಯ ಲಕ್ಷಣವಲ್ಲ. ಈ ಬದುಕು ಏನನ್ನು ತರುತ್ತದೋ, ಏನನ್ನು ಒಡ್ಡುತ್ತದೋ, ಎಲ್ಲಿಗೆ ಒಯ್ದು ಮುಟ್ಟಿಸುತ್ತದೋ ಅದನ್ನು ಧೈರ್ಯವಾಗಿ ಒಪ್ಪಿಕೊಳ್ಳಬೇಕು. ಆದಕಾರಣವೇ ಅಲ್ಲಮಪ್ರಭುಗಳು ಹೇಳಿದ್ದು : 'ಕೊಟ್ಟ ಕುದುರೆಯನೇರಲರಿಯದೆ ಮತ್ತೊಂದ ಬಯಸುವವರು ವೀರರೂ ಅಲ್ಲ ಧೀರರೂ ಅಲ್ಲ', ಎಂದು.

ಕೆಲವರಿಗೆ ವರ್ತಮಾನದ ಬದುಕು, ಬೇಡವಾದ ಕುದುರೆಯಂತೆ ತೋರುತ್ತದೆ; ಏಕೆಂದರೆ ಅವರು ಆಶಿಸಿದ್ದೇ ಒಂದು, ಅವರು ಪಡೆದದ್ದೇ ಒಂದು. ಇಂಥವರಿಗೆ ವರ್ತಮಾನದ ಪರಿಸ್ಥಿತಿಯಿಂದ ಪಾರಾಗಲು ಎರಡೇ ದಾರಿ: ಒಂದು, ಗತಕಾಲದ ಸ್ಮರಣೆಗಳಲ್ಲಿ ಮುಳುಗಿ ಅದನ್ನೇ ಹೊಗಳುತ್ತಾ, ವರ್ತಮಾನ ಕಾಲ ಕೆಟ್ಟು ಹೋಗಿದೆಯೆಂದು ಹೇಳುತ್ತಾ ಕಾಲ ಕಳೆಯುವುದು. ಎರಡನೆಯದು ಭವಿಷ್ಯದ ಸುಂದರ ಸ್ವಪ್ನಗಳನ್ನು ಕಾಣುತ್ತಾ, ಅದು ನನಸಾಗುವುದನ್ನು ಕಾಯುವುದು. ಇವರೆಲ್ಲರೂ ಕೊಟ್ಟ ಕುದುರೆಯನ್ನೇರಲರಿಯದವರು. ಹಳೆಯದೆಲ್ಲಾ ಹೊನ್ನು -ಎನ್ನುತ್ತಾ ಕೂರುವುದು ಒಂದು ಜಾತಿ. ಮತ್ತೆ ಕೆಲವರು ಮಹತ್ವಾಕಾಂಕ್ಷಿಗಳು; ಅವರಿಗೆ ಸದ್ಯದ ಸಂದರ್ಭ ಸನ್ನಿವೇಶಗಳನ್ನು ಅದು ಇದ್ದಂತೆ ಒಪ್ಪಿಕೊಳ್ಳುವುದಕ್ಕಿಂತ ನಾಳೆ ನಾವೇನಾಗಬೇಕು ಎನ್ನುವ ಕಡೆ ವಿಶೇಷ ಆಸಕ್ತಿ. ಅದಕ್ಕಾಗಿ ಕಂಡಕಂಡವರಿಗೆ ಕೈತೋರಿಸುತ್ತಾ, ತಮ್ಮ ಅಂಗೈ ಮೇಲಿನ ಗೆರೆಗಳು ಯಾವ ಫಲ ಕೊಟ್ಟಾವೆಂಬುದನ್ನು ಊಹಿಸುತ್ತಾ, ಜಾತಕ-ಪ್ರಶ್ನೆ ಇತ್ಯಾದಿಗಳಲ್ಲಿ ನಾಳಿನ ಬಾಗಿಲನ್ನು ಬಡಿಯುತ್ತಾ, ಅದಕ್ಕನುಸಾರವಾಗಿ ತಮ್ಮ ಬದುಕನ್ನು ಹೊಂದಿಸುತ್ತಾ ದಾರಿ ಕಾಯುವ ಜನ. ಅಕಸ್ಮಾತ್ತಾಗಿ ತಾವಂದುಕೊಂಡದ್ದು ಫಲಿಸಿತೋ ಸಂತೋಷ. ಫಲಿಸಲಿಲ್ಲವೋ ಆಘಾತ. ಇವತ್ತು ತಾನು ಏನಾಗಿದ್ದೇನೆಂಬ, ಏನಾಗಬೇಕೆಂಬ ಕಡೆ ಗಮನವಿಲ್ಲದ ಇವರು, ನಾಳೆ ನಾನೇನಾಗಬೇಕೆಂಬ ಹಂಬಲದಲ್ಲಿ ತಳಮಳಿಸುವ ಇವರು, ವರ್ತಮಾನದಲ್ಲಂತೂ ಬದುಕುತ್ತಿಲ್ಲ. ಇವರು 'ಕೊಟ್ಟ ಕುದುರೆಯನೇರಲರಿಯದೆ ಮತ್ತೊಂದ' ಬಯಸುವ ಜನ. ಹಾಗೆಂದ ಮಾತ್ರಕ್ಕೆ ನಾಳೆ ಬರುವುದೆಲ್ಲಾ ತಮ್ಮ



ಕರ್ಮಫಲವೆಂಬ ವಾದದಲ್ಲಿ ಪ್ರವೃತ್ತವಾಗಬೇಕೆಂದಾಗಲಿ, ಬದುಕಿಗೆ ಪುರುಷಕಾರ ಪ್ರಧಾನವಾದ ಮಹತ್ವಾಕಾಂಕ್ಷೆಗಳಿರಲೇಬಾರದೆಂದಾಗಲಿ ಅರ್ಥವಲ್ಲ. ಆದರೆ ಮೊದಲು ಮನುಷ್ಯ ತನ್ನ ಅಂದಿಂದಿನ ಬದುಕನ್ನು ಯಥಾವತ್ತಾಗಿ ಒಪ್ಪಿಕೊಳ್ಳುವುದನ್ನು ಕಲಿಯಬೇಕು ಎಂದು ಅರ್ಥ. ತನ್ನ ಪಾಲಿಗೆ ಬದುಕು ತಂದದ್ದನ್ನು ಅದಿದ್ದಂತೆ ಒಪ್ಪಿಕೊಂಡು, ಅದನ್ನು ಎದುರಿಸುವುದರಲ್ಲಿ, ತನಗೆ ಪ್ರಾಪ್ತವಾದದ್ದನ್ನು ಯಾವ ಗೊಣಗುಗಳೂ ಇಲ್ಲದೆ ಸಮರ್ಪಕವಾಗಿ ನಿರ್ವಹಿಸುವುದರಲ್ಲಿ ಕುಶಲಿಯಾಗಬೇಕು. 'ನಾಳೆ ಬಪ್ಪುದು ನಮಗಿಂದೇ ಬರಲಿ, ಇಂದು ಬಪ್ಪುದು ನಮಗೀಗಲೆ ಬರಲಿ, ಇದಕಾರಂಜುವರು, ಇದಕಾರಳುಕುವರು' — ಎಂದು ಹೇಳಿದ ಬಸವಣ್ಣನವರ ವಚನವೂ ಇದನ್ನೇ ಸಮರ್ಥಿಸುತ್ತದೆ. ಈ ಜೀವನ ಪ್ರೀತಿ; ಈ ಜೀವನ ಶ್ರದ್ಧೆ ನಮ್ಮ ಬದುಕಿಗೆ ಅತ್ಯಗತ್ಯವಾದದ್ದು.

## ಕೃತಿ-ಕರ್ತೃ ವಿಚಾರ

ಡಾ। ಜಿ.ಎಸ್. ಶಿವರುದ್ರಪ್ಪನವರು ಕನ್ನಡದ ಸುಪ್ರಸಿದ್ಧ ಕವಿಗಳು, ವಿಮರ್ಶಕರು ಹಾಗೂ ಕಾವ್ಯ ಮೀಮಾಂಸಕರು. ಕನ್ನಡ ಸಾರಸ್ವತ ಲೋಕದಲ್ಲಿ ಜಿ.ಎಸ್.ಎಸ್. ಎಂದೇ ನಾಮಾಂಕಿತರು. ನಮ್ಮ ಕಣ್ಣಿಗೆ ಅತಿ ಸಾಮಾನ್ಯವಾಗಿ ತೋರುವಂಥ ವಿಷಯಗಳಲ್ಲಿ ವೈಶಿಷ್ಟ್ಯವನ್ನೂ ಆಶ್ಚರ್ಯವನ್ನೂ ವ್ಯಕ್ತಪಡಿಸಿ ಓದುಗರ ಮನಸ್ಸನ್ನು ಸೆರೆ ಹಿಡಿಯುವ ಶಕ್ತಿ ಅವರ ಶೈಲಿಯಲ್ಲಿದೆ. ಜಿ.ಎಸ್.ಎಸ್. ಅವರು ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ಈಸೂರಿನಲ್ಲಿ 1926 ರಲ್ಲಿ ಜನಿಸಿದರು. ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿ, ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ, ಮೈಸೂರು ಹಾಗೂ ಉಸ್ಮಾನಿಯಾ ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಅವರು ಸಲ್ಲಿಸಿದ ಸೇವೆ ಮಹತ್ವಪೂರ್ಣವಾದುದು. ಸಂದರ್ಶಕ ಪ್ರಾಧ್ಯಾಪಕರಾಗಿ ರಷ್ಯಾ, ಇಂಗ್ಲೆಂಡ್ ಮುಂತಾದ ದೇಶಗಳಿಗೂ ಪ್ರವಾಸ ಹೋಗಿ ಬಂದಿದ್ದಾರೆ. ಸಾಮಗಾನ, ಚೆಲುವು ಒಲವು, ಅನಾವರಣ, ದೀಪದ ಹೆಜ್ಜೆ, ದೇವಶಿಲ್ಪಿ, ಕಾರ್ತಿಕ ಮುಂತಾದುವು ಅವರ ಪ್ರಸಿದ್ಧ ಕವನ ಸಂಕಲನಗಳು. ವಿಮರ್ಶೆಯ ಪೂರ್ವ ಪಶ್ಚಿಮ, ಪರಿಶೀಲನೆ, ಗತಿಬಿಂಬ ಇವು ವಿಮರ್ಶಾ ಗ್ರಂಥಗಳು. 'ಸೌಂದರ್ಯ ಸಮೀಕ್ಷೆ' ಎಂಬ ಮಹಾ

ಪ್ರಬಂಧಕ್ಕೆ ಇವರಿಗೆ ಡಾಕ್ಟರೇಟ್ ಪದವಿ ದೊರೆತಿದೆ. 'ಕಾವ್ಯಾರ್ಥ ಚಿಂತನ' ವು ಕಾವ್ಯ ಮೀಮಾಂಸೆಗೆ ಇವರ ಪ್ರಮುಖ ಕೊಡುಗೆ. ಈ ಕೃತಿಗೆ ಕೇಂದ್ರ ಹಾಗೂ ರಾಜ್ಯ ಸಾಹಿತ್ಯ ಅಕಾಡೆಮಿಗಳ ಪ್ರಶಸ್ತಿಗಳೂ ಲಭಿಸಿವೆ.

ಮನುಷ್ಯ ಯಾವಾಗಲೂ ಭವಿಷ್ಯದ ಪರಲೋಕದ ಬಗ್ಗೆಯೇ ಚಿಂತಿಸುತ್ತಾ ಕುಳಿತರೆ ಆಯಾ ದಿನದ ಸಂತೋಷವನ್ನು ಹಾಳು ಮಾಡಿಕೊಳ್ಳಬೇಕಾಗುತ್ತದೆ. ನಮ್ಮ ಇಂದಿನ ಸಾಧನೆಯನ್ನು ಅವಲಂಬಿಸಿ ನಮ್ಮ ಭವಿಷ್ಯ ಇರುವುದರಿಂದ ವರ್ತಮಾನದ ಜೀವನವನ್ನು ಸುಧಾರಿಸುವ ಕಡೆಗೆ ನಾವು ಮೊದಲ ಗಮನ ಹರಿಸಬೇಕು ಎಂದು ಜಿ.ಎಸ್.ಎಸ್. ಅವರು ಈ ಲೇಖನದಲ್ಲಿ ತಿಳಿಸಿದ್ದಾರೆ.

## I. ಕಠಿಣ ಪದಗಳ ಅರ್ಥ

ಆಸ್ತಿಕ =ದೈವ ಹಾಗೂ ಧರ್ಮಗಳಲ್ಲಿ ನಂಬಿಕೆಯುಳ್ಳವನು; ವಾಸ್ತವ =ನಿಜವಾಗಿ ಇರುವುದು, ಸಹಜವಾದುದು; ನಶ್ವರ = ಕ್ಷಣಿಕವಾದುದು, ನಾಶವಾಗುವುದು; ವಿರಾಗ =ವಿರಕ್ತಿ, ವೈರಾಗ್ಯ; ನೊಣೆಯು =ನುಂಗು, ಕಬಳಿಸು; ಅದಮ್ಯ =ಅಧಿಕವಾದ; ಊಹಾಪೋಹ =ತರ್ಕ ಮತ್ತು ವಿತರ್ಕ, ಕೇವಲ ಊಹೆ; ಗೌಣ =ಅಮುಖ್ಯ, ಪ್ರಧಾನವಲ್ಲದ; ಸುರಧನು =ಕಾಮನಬಿಲ್ಲು, ಇಂದ್ರಧನುಸ್ಸು; ಶರದ =ಶರತ್ಕಾಲ, ಮಳೆಗಾಲದ ಅನಂತರದ ಕಾಲ; ಗತಕಾಲ =ಕಳೆದ ಕಾಲ, ಭೂತಕಾಲ; ಆಕಾಂಕ್ಷೆ =ಬಯಕೆ, ಅಪೇಕ್ಷೆ;

## II. ಈ ಪ್ರಶ್ನೆಗಳಿಗೆ ಸಂಕ್ಷಿಪ್ತವಾಗಿ ಉತ್ತರಿಸಿ.

1. ಆಸ್ತಿಕರೂ ನಾಸ್ತಿಕರೂ ಸಾಮಾನ್ಯವಾಗಿ ಏನನ್ನು ಒಪ್ಪುತ್ತಾರೆ ?
2. ಪರದ ಕಲ್ಪನೆಯನ್ನು ಮನುಷ್ಯ ಏಕೆ ನಿರ್ಮಿಸಿಕೊಂಡನು ?
3. ಡಿ.ವಿ.ಜಿ. ಯವರು ಹೇಳಿದ ಮಾತೇನು ?
4. ಅಲ್ಲಮಪ್ರಭುವಿನ ವಚನದಲ್ಲಿ ಬರುವ ಸಾಲುಗಳೇನು ?



5. ವರ್ತಮಾನದ ಪರಿಸ್ಥಿತಿಯಿಂದ ಪಾರಾಗಲು ಮನುಷ್ಯ ಕಂಡುಕೊಂಡ ದಾರಿಗಳಾವುವು ?
6. ಬಸವಣ್ಣನವರು ತಮ್ಮ ವಚನದಲ್ಲಿ ಏನು ಹೇಳಿದ್ದಾರೆ ?

## III. ಈ ಪ್ರಶ್ನೆಗಳಿಗೆ ವಿವರವಾಗಿ ಉತ್ತರಿಸಿ.

1. ಎಲ್ಲರೂ ಸಮಾನವಾಗಿ ಒಪ್ಪಿಕೊಳ್ಳುವ ತತ್ವವನ್ನು ಕವಿಯು ಹೇಗೆ ವಿವೇಚಿಸಿದ್ದಾರೆ ?
2. ಇಹಪರದ ಬದುಕಿನ ಸ್ಥಿತಿಗತಿಗಳು ಮನುಷ್ಯನಲ್ಲಿ ಏಕೆ ಹುಟ್ಟಿಕೊಂಡವು ?
3. ನಮ್ಮ ಬದುಕನ್ನು ಸಮರ್ಪಕವಾಗಿ ನಿರ್ವಹಿಸಲು ಕವಿ ಹಾಕಿಕೊಟ್ಟ ಮಾರ್ಗಗಳೇನು ?

## IV. ಭಾಷಾಭ್ಯಾಸ

**1. ಕೆಳಗಿನ ಪದಗಳನ್ನು ಉಪಯೋಗಿಸಿ ವಾಕ್ಯಗಳನ್ನು ರಚಿಸಿರಿ.**

ಆದರ್ಶ, ಮೂಲಭೂತ, ಅನಿವಾರ್ಯ, ವಾಸ್ತವ, ಊಹಾಪೋಹ, ಆಕರ್ಷಣೆ, ಆಘಾತ, ಶ್ರದ್ಧೆ

**2. ಕೆಳಗಿನ ಪದಗಳ ವಿರುದ್ಧ ಪದಗಳನ್ನು ಬರೆಯಿರಿ.**

ಆಸ್ತಿಕ, ಮೃತ್ಯು, ಅಲ್ಪ, ಇಹ, ನೈತಿಕ, ಧೀರ, ಲಕ್ಷಣ

**3. ಕೆಳಗಿನ ಪದಗಳನ್ನು ಬಿಡಿಸಿ ಬರೆದು ಸಂಧಿಗಳನ್ನು ತಿಳಿಸಿರಿ.**

ಬದುಕಿಗೊಂದು, ಮರಣಾತೀತ, ಪರಂಪರಾನುಗತ, ಮರಣಾನಂತರ, ಸಾವಿನಾಚೆ, ಮಹತ್ವಾಕಾಂಕ್ಷೆ

## V. ಚಟುವಟಿಕೆ

1. ನಿಮ್ಮ ಶಾಲೆಯ ಪುಸ್ತಕಾಲಯದಲ್ಲಿರುವ ವಚನ ಸಂಗ್ರಹಗಳನ್ನು ಓದಿರಿ.
2. ಕೆಲವು ವಚನಗಳನ್ನು ಬಾಯಿಪಾಠ ಮಾಡಿ ರಾಗವಾಗಿ ಹಾಡುವುದನ್ನು ಕಲಿಯಿರಿ.

---



# 6. ಕರ್ಣಾಟಕ ಶಾಕುಂತಲ ನಾಟಕಂ

-ಬಸವಪ್ಪಶಾಸ್ತ್ರಿ

## ಚತುರ್ಥಾಂಕಂ

(ಅನಂತರ ಪುಷ್ಪಗಳನ್ನು ಕೊಯ್ಯುವುದನ್ನು ಅಭಿನಯಿಸುತ್ತ ಇಬ್ಬರೂ ಸಖಿಯರು ಬರುವರು)

ಮೊದಲನೆಯವಳು — ಎಲೆ ಪ್ರಿಯಂವದೆ, ಗಾಂಧರ್ವವಿವಾಹವಿಧಿಯಿಂದ ಮದುವೆಯಾದ ಶಕುಂತಲೆಯು ಅನುರೂಪನಾದ ಪತಿಯನ್ನು ಸೇರಿ ಕೃತಕೃತ್ಯಳಾದಳೆಂದು ನನ್ನ ಮನಸ್ಸು ಸಂತೋಷಪಟ್ಟಿತು; ಆದರೂ ಇದೊಂದು ಚಿಂತಿಸತಕ್ಕುದಾಗಿರುವುದು.

ಪ್ರಿಯಂ — ಅದೇನು ?

ಅನ. — ಈಗ ಆ ರಾಜರ್ಷಿಯು ಯಾಗವನ್ನು ಮುಗಿಯಿಸಿ ಋಷಿಗಳ ಅಪ್ಪಣೆಯನ್ನು ಪಡೆದು ತನ್ನ ಪಟ್ಟಣಕ್ಕೆ ಹೋಗಿ ರಾಣೀವಾಸವನ್ನು ಸೇರಿದಮೇಲೆ ಇತ್ತಣ ವೃತ್ತಾಂತವನ್ನು ಸ್ಮರಿಸುವನೋ ಇಲ್ಲವೋ ಎಂಬುದು.

ಪ್ರಿಯಂ — ನಂಬು, ಆತನ ಆಕೃತಿವಿಶೇಷವು ಅಂಥದಾಗಿ ಕಾಣುವುದಿಲ್ಲ; ಆದರೆ ಈಗ ತಂದೆಗಳು ಈ ವೃತ್ತಾಂತವನ್ನು ಕೇಳಿ ಮನಸ್ಸಿನಲ್ಲಿ ಏನು ತಿಳಿಯುವರೋ ನಾನರಿಯೆನು.

ಅನ. ನನ್ನ ಹಾಗೆಯೇ ಅವರೂ ಅಭಿಮತಿಸುವರೆಂದು ತಿಳಿಯುವೆನು.

ಪ್ರಿಯಂ. — ಅದು ಹೇಗೆ ?

ಅನ. — ಗುಣವಂತನಾದವನಿಗೆ ಕನ್ಯೆಯನ್ನು ಕೊಡಬೇಕೆಂಬುದು ತಂದೆಗೆ ಮುಖ್ಯ ಸಂಕಲ್ಪ ; ಅದನ್ನು ದೈವವೇ ನೆರವೇರಿಸಿದರೆ ವಿಶೇಷ ಆಯಾಸವಿಲ್ಲದೆ ಗುರು ಜನವು ಕೃತಾರ್ಥವಾಗಲಿಲ್ಲವೆ ?

ಪ್ರಿಯಂ — (ಪುಷ್ಪದ ಪಾತ್ರೆಯನ್ನು ನೋಡಿ) ಎಲೆ ಸಖಿ, ಪೂಜೆಗೆ ಸಾಕಾದಷ್ಟು ಕುಸುಮಗಳನ್ನು ಕೊಯ್ದಾಗಲಿಲ್ಲವೆ ?

ಅನ. — ಎಲೆ ಸಖಿ, ಶಕುಂತಳೆಯ ಸೌಭಾಗ್ಯದೇವತೆಯು ಪೂಜಿಸತಕ್ಕುದಾಗಿರುವುದಷ್ಟೆ ?

ಪ್ರಿಯಂ. — ಹೌದು ಹೌದು (ಎಂದು ಅದೇ ಕಾರ್ಯವನ್ನು ಉಪಕ್ರಮಿಸುವಳು).

ತೆರೆಯಲ್ಲಿ — ಇದೋ ನಾನು ಬಂದಿರುವೆನು!

ಅನ. — (ಕೇಳಿ) ಅತಿಥಿಗಳು ಧ್ವನಿಮಾಡುವಂತಿದೆ!

ಪ್ರಿಯಂ. — ಶಕುಂತಳೆ ಪರ್ಣಶಾಲೆಯಲ್ಲಿರುವಳಷ್ಟೆ ! (ತನ್ನಲ್ಲಿ ತಾನು) ಇದ್ದರೇನು? ಅವಳ ಮನಸ್ಸು ಮಾತ್ರ ಅವಳಲ್ಲಿಲ್ಲ.

ಅನ. — ಆಗಲಿ; ಪುಷ್ಪಗಳಿಷ್ಟೇ ಸಾಕು. (ಎಂದು ಹೊರಡುವಳು)

ತೆರೆಯಲ್ಲಿ — ಆಃ! ಅತಿಥಿ ತಿರಸ್ಕಾರಿಣಿಯೆ!

ಕಂದ॥ ನೀನಾವನ ಚಿಂತಿಸುತೆ ತ
ಪೋನಿಧಿಯಾದೆನ್ನನರಿಯದಾದೆಯೊ ನಿನ್ನಂ
ಏನರಿಪಿದೊಡಂ ಸ್ಮರಿಸಂ
ತಾನಾತಂ ಮುನ್ನ ಗೈದುದಂ ಮರುಳನವೋಲ್

ಅನ. — ಹಾಹಾ! ಚಿಂತಿಸುತ್ತಿದ್ದ ಹಾಗೆಯೇ ಆಯಿತಲ್ಲಾ ; ಮೈಮರೆತ ಶಕುಂತಲೆಯು ಪೂಜ್ಯನಾದ ಯಾವನೋ ಒಬ್ಬನ ವಿಷಯದಲ್ಲಿ ಅಪರಾಧವನ್ನು ಮಾಡಿದಳು; (ಪುನಶ್ಚ ನೋಡಿ) ಯಾವನೋ ಒಬ್ಬನಲ್ಲ; ಈತನು ಸುಲಭಕೋಪನಾದ ದೂರ್ವಾಸನು! ಹಾಗೆ ಶಪಿಸಿ ತಡೆಯಲಶಕ್ಯವಾದ ಗಮನದಿಂದ ಹಿಂದಿರುಗಿದನು; ಬೆಂಕಿಗಲ್ಲದೆ ಸುಡುವ ಶಕ್ತಿಯು ಇನ್ನಾರಿಗುಂಟು ? ನಡೆ, ಪಾದಗಳಿಗೆ ನಮಸ್ಕರಿಸಿ ಆತನನ್ನು ಹಿಂದಿರುಗಿಸು; ಅಷ್ಟರಲ್ಲೆ ಅರ್ಘ್ಯೋದಕವನ್ನು ತೆಗೆದುಕೊಂಡು ಬರುವೆನು.



ಪ್ರಿಯಂ — ಹಾಗಾಗಲಿ. (ಎಂದು ಹೋಗುವಳು).

ಅನ. — (ಎರಡು ಹೆಜ್ಜೆ ನಡೆದು ಎಡವಿದಂತೆ ಅಭಿನಯಿಸಿ) ಅಯ್ಯೋ! ಅವಸರದಿಂದ ಹೋಗುತ್ತಾ ಎಡವಿ ಪುಷ್ಪಪಾತ್ರೆಯನ್ನು ಕೆಡಹಿದೆನಲ್ಲಾ ! (ಎಂದು ಪುಷ್ಪಗಳನ್ನು ಆರಿಸುವಂತೆ ಅಭಿನಯಿಸುವಳು).

ಪ್ರಿಯಂ — ಎಲೆ ಸಖಿ, ದೂರ್ವಾಸನು ಸ್ವಭಾವದಿಂದ ವಕ್ರನಾದವನು; ಯಾರು ಹೇಳಿದ ವಿನಯವನ್ನು ತಾನೇ ಪರಿಗ್ರಹಿಸುವನು? ಆದರೂ ಅವನನ್ನು ಸ್ವಲ್ಪ ದಯಾರ್ದ್ರನನ್ನು ಮಾಡಿದೆನು.

ಅನ. — (ನಸುನಕ್ಕು) ಆತನಲ್ಲಿ ಇಷ್ಟಾದುದೇ ಹೆಚ್ಚು ; ಹೇಳು ಹೇಳು.

ಪ್ರಿಯಂ. — ಎಷ್ಟು ನಾನು ಒಡಂಬಡಿಸಿದರೂ ಹಿಂದಿರುಗಲಿಲ್ಲ ; ಆಗ ಹೀಗೆ ಬೇಡಿಕೊಂಡೆನು.

ಅನ. — ಹೇಗೆ ಹೇಳು.

ಪ್ರಿಯಂ. — ಪೂಜ್ಯರೆ, ತಮ್ಮ ತಪಃಪ್ರಭಾವವನ್ನು ತಿಳಿಯದ ಪುತ್ರಿಯ ಇದೊಂದು ಪ್ರಥಮಾಪರಾಧವನ್ನು ಕ್ಷಮಿಸಬೇಕು — ಎಂದು.

ಅನ. — ಆಮೇಲೆ ಆಮೇಲೆ ?

ಪ್ರಿಯಂ. — ಅನಂತರ ಅವರು ''ನಮ್ಮ ವಚನವು ತಪ್ಪತಕ್ಕುದಲ್ಲ; ಆದರೆ ಅಭಿಜ್ಞಾನಾಭರಣದರ್ಶನದಿಂದ ಶಾಪವಿಮೋಚನೆಯಾಗುವುದು'' ಎಂದು ಹೇಳಿ ಕೂಡಲೆ ಮಾಯವಾದರು.

ಅನ. — ಈಗ ನೆಮ್ಮದಿಯಾಯಿತು. ಆ ರಾಜರ್ಷಿಯು ಪಟ್ಟಣಕ್ಕೆ ಹೊರಡುವಾಗ ತನ್ನ ನಾಮಾಂಕಿತವಾದ ಮುದ್ರಿಕೆಯನ್ನು ಸ್ಮರಣೆಯನ್ನುಂಟು ಮಾಡತಕ್ಕುದೆಂದು ತಾನೇ ಶತುಂತಳೆಯ ಬೆರಳಿಗಿಟ್ಟು ಹೋದನು. ಅದರಿಂದ ಶಕುಂತಳೆಗೆ ಉಪಾಯವು ಸ್ವಾಧೀನವಾಗಿರುವುದು. ನಡೆ, ಇನ್ನು ದೇವಕಾರ್ಯವನ್ನು ನೆರವೇರಿಸೋಣ. (ಎಂದು ನಡೆಯುವರು)

ಪ್ರಿಯಂ. — (ನೋಡಿ) ಎಲೆ ಅನಸೂಯೆ, ಎಡದ ಕೈಯಮೇಲೆ ತನ್ನ ಮುಖವನ್ನಿಟ್ಟು ಚಿತ್ರದಲ್ಲಿ ಬರೆದ ಪ್ರತಿಮೆಯಂತಿರುವ ಪ್ರಿಯಸಖಿಯನ್ನು

ನೋಡಿದೆಯಾ? ಪತಿಯ ಚಿಂತೆಯಿಂದ ತನ್ನನ್ನೇ ತಾನು ಮರೆತಿರುವಳು: ಇನ್ನು ಬಂದ ಅತಿಥಿಯನ್ನು ಹೇಗೆ ತಿಳಿದಾಳು ?

ಅನ. — ಪ್ರಿಯಂವದೆ, ಈ ವೃತ್ತಾಂತ ನಮ್ಮಿಬ್ಬರ ಮುಖದಲ್ಲೇ ಇರಲಿ ಕಂಡೆಯಾ; ಸ್ವಭಾವಕೋಮಲೆಯಾದ ಸಖಿಯನ್ನು ರಕ್ಷಿಸಬೇಕಲ್ಲವೆ ?

ಪ್ರಿಯಂ. — ಯಾರು ತಾನೆ ಮಲ್ಲಿಗೆಬಳ್ಳಿಗೆ ಬಿಸಿನೀರನ್ನೆರೆಯುವರು ?

(ಎಂದು ಹೊರಟುಹೋಗುವರು.)

ಇದು ವಿಷ್ಕಂಭಂ

(ಅನಂತರ ಮಲಗಿದ್ದು ಎದ್ದ ಋಷಿಶಿಷ್ಯನು ಬರುವನು)

ಋಷಿಶಿಷ್ಯ — ವೇಳೆಯನ್ನು ತಿಳಿದು ಬರುವಂತೆ ಸೋಮತೀರ್ಥದಿಂದ ಬಂದ ಪೂಜ್ಯರಾದ ಕಣ್ವರಿಂದ ಆಜ್ಞಪ್ತನಾಗಿರುವೆನು; ಆದುದರಿಂದ ಹೊರಕ್ಕೆ ಹೋಗಿ ರಾತ್ರಿಯೆಷ್ಟು ಉಳಿದಿರುವುದೆಂದು ನೋಡುವೆನು. (ಎಂದು ಸ್ವಲ್ಪ ನಡೆದು ನೋಡಿ) ಒಹೋ! ಬೆಳಗಾಯಿತು! ಹಾಗೆಯೇ ಸರಿ.

ಕಂದ ॥ ಸಸಿ ಮುಳುಗುವನೊಂದೆಡೆಯುದ
ಯಿಸುವನದೊಂದೆಡೆ ದಿನೇಶನಿವರ್ಗಳ ಯುಗಪ
ದ್ವ್ಯಸನೋದಯಂಗಳಿವು ದುಃ
ಖಸುಖಂಗಳೊಳಿಳೆಯ ನಿಯಮಿಪಂತಿರೆ ತೋರ್ಕುಂ

ಕಂದ ॥ ಪೆರೆ ಮರೆಯಾದೊಡೆ ಮುನ್ನಿನ
ಸಿರಿಯುಳಿದಾನೈದಿಲೀಯದಕ್ಷಿಗೆ ಮುದಮಂ
ತೆರಳಲ್ಕಿಷ್ಟರ್ ದೇಶಾಂ
ತರಕಬಲಾಜನದ ಚಿಂತೆ ದುಸ್ಸಹಮಲ್ತೇ

(ತೆರೆಯನ್ನು ಹಾರಿಸಿಕೊಂಡು ಅನಸೂಯೆ ಪ್ರವೇಶಿಸುವಳು)



ಅನ. — ಹೀಗೆ ವಿಷಯಪರಾಙ್ಮುಖವಾದ ಜನಕ್ಕೂ ಇದು ತಿಳಿಯದೇ ಬೇರೆಯಿಲ್ಲ ; ಹೀಗಿರುವಲ್ಲಿ ಅಂತಪ್ಪರಾಜನಾದ ದುಷ್ಯಂತನೂ ನಮ್ಮ ಶಕುಂತಳೆಯ ವಿಷಯದಲ್ಲಿ ಅನ್ಯಾಯವನ್ನು ಮಾಡಿದನು.

ಯಜಮಾನ ಶಿಷ್ಯ — ಸಮೀಪಿಸಿದ ಹೋಮಕಾಲವನ್ನು ಗುರುಗಳಿಗೆ ತಿಳಿಸುವೆನು. (ಎಂದು ಹೋಗುವನು)

ಅನ. — ಅಥವಾ ತಿಳಿದಾಗ್ಯೂ ನಾನೇನು ಮಾಡುವೆನು ? ಮಾಡತಕ್ಕ ಕಾರ್ಯಗಳಲ್ಲಿಯೂ ನನಗೆ ಕೈಕಾಲುಗಳು ಆಡುವುದಿಲ್ಲ ; ಆಃ! ಸತ್ಯಸಂಧನಲ್ಲದ ದುಷ್ಯಂತನಲ್ಲಿ ಕಪಟವನ್ನರಿಯದ ಶಕುಂತಳೆಯನ್ನು ಸೇರಿಸಿದ ಕಾಮನು ಈಗ ತನ್ನ ಇಷ್ಟಾರ್ಥವನ್ನು ಪಡೆಯಲಿ! ಒಂದು ವೇಳೆ ದೂರ್ವಾಸನ ಶಾಪವು ಹೀಗೆ ಮಾಡಿದ್ದೀತು; ಹಾಗಲ್ಲದಿದ್ದರೆ ಆ ರಾಜಋಷಿಯು ಆ ರೀತಿಯಲ್ಲಿ ಹೇಳಿ ಹೋಗಿ ದಿವಸಗಳಾದಾಗ್ಯೂ ಒಂದು ಪತ್ರಿಕೆಯನ್ನಾದರೂ ಕಳುಹಿಸದಿರುವನೆ ? ಆದುದರಿಂದ ಸ್ಮೃತಿಯನ್ನು ಕೊಡುವುದಕ್ಕೆ ಇಲ್ಲಿಂದ ಉಂಗುರವನ್ನು ಕಳುಹಿಸಿಕೊಡುವೆನು; ದುಃಖಶೀಲವಾದ ತಪಸ್ವಿ ಜನವನ್ನು ಯಾರು ತಾನೆ ಪ್ರಾರ್ಥಿಸುವರು ? ತಪ್ಪು ಸಖಿಯದಾದ್ದರಿಂದ, ಸೋಮತೀರ್ಥದಿಂದ ಬಂದ ತಂದೆಯಾದ ಕಣ್ವರಿಗೆ ದುಷ್ಯಂತನನ್ನು ವರಿಸಿ ಶಕುಂತಳೆ ಗರ್ಭಿಣಿಯಾಗಿರುವಳೆಂದು ಹೇಗೆ ತಿಳಿಸಲಿ ? ತಿಳಿಸಲಾರೆ; ಹೀಗಿರುವಲ್ಲಿ ಇನ್ನು ನಾನು ಮಾಡತಕ್ಕದ್ದೇನು ?

ಪ್ರಿಯಂ. — (ಪ್ರವೇಶಿಸಿ ಹರ್ಷದಿಂದ) ಎಲೆ ಸಖಿ, ಏಳು ಏಳು! ಶಕುಂತಳೆಯ ಪ್ರಸ್ಥಾನ ಮಂಗಳವನ್ನು ನೆರವೇರಿಸೋಣ.

ಅನ. — ಇದೇನು!

ಪ್ರಿಯಂ. — ಕೇಳು; ಈಗ ನಾನು ಸುಖನಿದ್ರೆಯನ್ನು ಕೇಳುವುದಕ್ಕೆ ಶಕುಂತಳೆಯ ಸಮೀಪಕ್ಕೆ ಹೋಗಿದ್ದೆನು.

ಅನ. — ಆಮೇಲಾಮೇಲೆ ?

ಪ್ರಿಯಂ. — ಆಗ ಲಜ್ಜೆಯಿಂದ ತಲೆಯನ್ನು ತಗ್ಗಿಸಿಕೊಂಡು ನಿಂತಿದ್ದ ಶಕುಂತಳೆಯನ್ನು ಆಲಿಂಗಿಸಿಕೊಂಡು ತಂದೆಗಳು ಹೀಗೆ ಕೊಂಡಾಡಿದರು; ಯಜಮಾನನು ಹೊಗೆಯಿಂದ ಕಣ್ಣುಗಳನ್ನು ತೆರೆಯದಿದ್ದರೂ ಆತನ ಕೈಯಿಂದ

ಆಹುತಿಯು ದೈವಯೋಗದಿಂದ ಅಗ್ನಿಯಲ್ಲೇ ಬಿದ್ದಿತು. ಎಲೆ ಮಗಳೆ, ಸಚ್ಛಿಷ್ಯನಿಗೆ ಕೊಟ್ಟ ವಿದ್ಯೆಯಂತೆ ನನಗೆ ಸಂತೋಷವನ್ನುಂಟುಮಾಡುವವಳಾದೆ; ಋಷಿಯ ಪೋಷಣೆಯಲ್ಲಿದ್ದ ನಿನ್ನನ್ನು ಈಗಲೇ ನಿನ್ನ ಪತಿಯ ಸಮೀಪಕ್ಕೆ ಕಳುಹಿಸುವೆನು — ಎಂದು.

ಅನ. — ತಂದೆಯಾದ ಕಣ್ವರಿಗೆ ಈ ವೃತ್ತಾಂತವನ್ನು ಸೂಚಿಸಿದವರು ಯಾರು ?

ಪ್ರಿಯಂ. — ಹೋಮಶಾಲೆಯನ್ನು ಪ್ರವೇಶಿಸಿದ ತಂದೆಗೆ ಛಂದೋಮಯವಾದ ಅಶರೀರವಾಣಿಯು,

ಅನ. — (ಆಶ್ಚರ್ಯದಿಂದ) ಹೇಳು ಹೇಳು.

ಪ್ರಿಯಂ —

ಕಂದ ॥ ಶಾಂತಾತ್ಮ ನಿನ್ನ ಸುತೆ ದು
ಷ್ಯಂತನ ಕೈವಿಡಿದು ಧರಿಸಿ ಗರ್ಭವನುರ್ವ್ವಿ
ಸಂತೋಷಾರ್ಥಂ ಮೆರೆದಪ
ಳಂತಶ್ಶಿಖಿಯಾದ ಶಮಿಯವೋಲರಿಯೆನುತುಂ

ಅನ. — (ಪ್ರಿಯಂವದೆಯನ್ನು ಆಲಿಂಗಿಸಿ) ಸಖಿ, ಇದೇ ನನಗೆ ಬೇಕಾಗಿದ್ದದ್ದು, ಆದರೆ ಶಕುಂತಲೆ ಈಗಲೇ ಪತಿಗೃಹಕ್ಕೆ ಹೋಗುವಳೆಂಬ ಕಳವಳದಿಂದ ನನಗೆ ಸಾಧಾರಣವಾದ ಸಂತೋಷವುಂಟಾಗಿರುವುದು.

ಪ್ರಿಯಂ. — ಎಲೆ ಸಖಿ, ನಮ್ಮ ಕಳವಳವನ್ನು ಹೇಗಾದರೂ ಪರಿಹರಿಸಿಕೊಳ್ಳೋಣ; ದುಃಖಿತೆಯಾದ ಶಕುಂತಲೆ ಸುಖವನ್ನು ಪಡೆದರೆ ಸಾಕು.

ಅನ. — ಹಾಗಾದರೆ ಇದಕ್ಕಾಗಿ ಈ ಮಾವಿನಮರದ ಕೊಂಬೆಗೆ ತಗುಲಿಸಿದ ತೆಂಗಿನಗರಿಯ ಪುಟ್ಟಿಯಲ್ಲಿ ಇದುವರೆಗೂ ಕಂದದ ಹಾಗೆ ಇಟ್ಟಿದ್ದ ಕೇಸರಮಾಲಿಕೆಯನ್ನು ನಿನ್ನ ಕೈಗೆ ತೆಗೆದುಕೊ. ಅಷ್ಟರಲ್ಲಿ ನಾನೂ ಕೂಡ ಶಕುಂತಲೆಗೋಸ್ಕರ ಗೋರೋಚನ, ತೀರ್ಥಮೃತ್ತಿಕೆ, ದೂರ್ವಾಕಿಸಲಯಗಳ ಮಂಗಳಾನುಲೇಪಗಳನ್ನು ಮಾಡುವೆನು.



ಪ್ರಿಯಂ. — ಹಾಗೆ ಮಾಡು.

(ಅನಸೂಯೆ ಹೊರಟುಹೋಗುವಳು.)

ಪ್ರಿಯಂ. — (ಪುಷ್ಪಪಾತ್ರೆಯನ್ನು ಗ್ರಹಿಸುವಂತೆ ನಟಿಸುವಳು.)

ತೆರೆಯಲ್ಲಿ — ಎಲೆ ಗೌತಮಿ, ಶಕುಂತಲೆಯನ್ನು ಕರೆದುಕೊಂಡು ಹೋಗುವುದಕ್ಕೆ ಯೋಗ್ಯರಾದ ಶಾಙ್ಗರವ ಶಾರದ್ವತರನ್ನು ನೇಮಿಸು.

ಪ್ರಿಯಂ. — (ಕಿವಿಗೊಟ್ಟು) ಎಲೆ ಅನಸೂಯೆ, ಬೇಗ ಬಾ, ಹಸ್ತಿನಗರಕ್ಕೆ ಹೊರಡುವ ಋಷಿಗಳ ಶಬ್ದ ಕೇಳಿಬರುವುದು.

(ಅನುಲೇಪನದ ಪಾತ್ರೆಯನ್ನು ಹಿಡಿದುಕೊಂಡು ಅನಸೂಯೆ ಪ್ರವೇಶಿಸುವಳು.)

ಅನ. — ಸಖಿ ಬಾ! ಬಾ! ಹೋಗೋಣ (ಎಂದು ನಡೆಯುವರು).

ಪ್ರಿಯಂ. — (ಶಕುಂತಳೆಯನ್ನು ನೋಡಿ) ಇದೊ ಸೂರ್ಯೋದಯದಲ್ಲಿ ಶಕುಂತಳೆ ಮಂಗಳಮಜ್ಜನವನ್ನು ಮಾಡಿ ನೀವಾರಾಕ್ಷತಹಸ್ತೆಯರಾಗಿ ಸ್ವಸ್ತಿಯನ್ನು ಹೇಳುವ ತಾಪಸಿಯರಿಂದ ಅಭಿನಂದಿಸಲ್ಪಡುತ್ತ ನಿಂತಿರುವಳು. ಇವಳ ಸಮೀಪಕ್ಕೆ ಹೋಗೋಣ. (ಎಂದು ಸಮೀಪಕ್ಕೆ ಬರುವರು).

(ಅನಂತರ ಪೂರ್ವೋಕ್ತ ವ್ಯಾಪಾರವುಳ್ಳ ಶಕುಂತಳೆ ಪೀಠಗತೆಯಾಗಿ ಪ್ರವೇಶಿಸುವಳು.)

ಒಬ್ಬ ತಾಪಸಿ — (ಶಕುಂತಳೆಯನ್ನು ಕುರಿತು) ಮಗಳೆ, ಪತಿಯ ಬಹುಮಾನ ಸೂಚಕವಾದ ಮಹಾದೇವೀ ಶಬ್ದವನ್ನು ಹೊಂದು!

ಮತ್ತೊಬ್ಬಳು — ಎಲೆ ವತ್ಸೆ, ವೀರನಾದ ಮಗನನ್ನು ಪಡೆ!

ಇನ್ನೊಬ್ಬಳು — ಜಾತೆ, ಪತಿಗೆ ಪ್ರೀತಿಪಾತ್ರಳಾಗು! (ಹೀಗೆ ಹರಸಿ ಗೌತಮಿಯನ್ನು ಬಿಟ್ಟು ತಾಪಸಿಯರು ಹೋಗುವರು).

ಸಖಿಯರು — (ಸಮೀಪಕ್ಕೆ ಬಂದು) ಎಲೆ ಸಖಿ, ನಿನಗೆ ಸುಖಮಜ್ಜನ ಬಳೆಯಿತೆ ?

ಶಕುಂ. — ನನ್ನ ಪ್ರಿಯಸಖಿಯರಿಗೆ ಸುಖಾಗಮನವೇ ? ಇಲ್ಲಿ ಕುಳಿತುಕೊಳ್ಳಿರಿ.

ಇಬ್ಬರೂ — (ಮಂಗಳಪಾತ್ರೆಗಳನ್ನು ತೆಗೆದುಕೊಂಡು ಕುಳಿತು) ಎಲೆ ಶಕುಂತಳೆ, ಸಿದ್ಧಳಾಗು. ನಿನಗೆ ನಾವು ಚೆನ್ನಾಗಿ ಮಂಗಳಾನುಲೇಪವನ್ನು ಮಾಡುವೆವು.

ಶಕುಂ. — ಇದನ್ನು ವಿಶೇಷವಾಗಿ ಎಣಿಸುವೆನು; ಮುಂದಕ್ಕಿದು ನನಗೆ ದುರ್ಲಭವಾಗುವುದಲ್ಲವೆ ? (ಎಂದು ಕಣ್ಣೀರನ್ನು ಮಿಡಿಯುವಳು).

ಸಖಿಯರು — ಎಲೆ ಸಖಿ, ಮಂಗಳಕಾಲದಲ್ಲಿ ನೀನಿಂತು ರೋದನಮಾಡುವುದು ಉಚಿತವಲ್ಲ.

(ಎಂದು ಕಣ್ಣೀರನ್ನು ಒರೆಸಿ, ಅಲಂಕರಿಸುವಂತೆ ಅಭಿನಯಿಸುವರು.)

ಪ್ರಿಯಂ. — ಎಲೆ ಸಖಿ, ಆಭರಣವನ್ನು ಇಟ್ಟುಕೊಳ್ಳುವುದಕ್ಕೆ ಯೋಗ್ಯವಾದ ನಿನ್ನ ರೂಪು, ಆಶ್ರಮಸುಲಭವಾದ ಅಲಂಕಾರದಿಂದ ವಿಕಾರವನ್ನು ಪಡೆಯುವುದು.

ಅನಂತರ ಆಭರಣಾದಿಗಳನ್ನು ತೆಗೆದುಕೊಂಡು ಋಷಿಕುಮಾರರು ಬರುವರು.

ಋಷಿಕುಮಾರರು — ಇದೋ, ಅಲಂಕಾರವಸ್ತುಗಳು; ಇವುಗಳಿಂದ ಈ ಪೂಜ್ಯೆಯನ್ನು ಅಲಂಕರಿಸಿ.

(ಎಲ್ಲರೂ ನೋಡಿ ವಿಸ್ಮಯಹೊಂದುವರು.)

ಗೌತಮಿ — ವತ್ಸ ನಾರದನೆ, ಇದೆಲ್ಲಿಂದ ಬಂದಿತು ?

ಮೊದಲನೆಯವನು — ತಾತ ಕಣ್ವರ ಪ್ರಭಾವದಿಂದ.

ಗೌತಮಿ — ಇದೇನು ಮಾನಸಸೃಷ್ಟಿಯೋ ?

ಎರಡನೆಯವನು — ಅಲ್ಲ, ಕೇಳಬೇಕು; ಪೂಜ್ಯರಾದ ಕಣ್ವರು ಶಕುಂತಳೆಯ ನಿಮಿತ್ತವಾಗಿ ವನಸ್ಪತಿಗಳಿಂದ ಪುಷ್ಪಗಳನ್ನು ಕೊಯ್ದುಕೊಂಡು ಬನ್ನಿರೆಂದು ನಮ್ಮನ್ನು ಆಜ್ಞಾಪಿಸಿದರು; ಅನಂತರದಲ್ಲೆ ನಾವು ವನಸ್ಪತಿಗಳ ಬಳಿಗೆ ಹೋದೆವು.



ಬಳಿಕ —

ವೃತ್ತ ॥ ಇತ್ತುದದೊಂದು ಶಾಖಿ ಶುಭಕಾಗೊಲವಿಂ ಶಶಿಪಾಂಡುವಸ್ತ್ರಮಂ
ಮತ್ತಮದೊಂದು ವೃಕ್ಷಮಿರದಿತ್ತುದು ತಾನಡಿಯೂಡೆ ಲಾಕ್ಷೆಯಂ
ಎತ್ತಿದ ಪಲ್ಲವಪ್ರತಿಮಪಾಣಿಗಳಿಂ ವನದೇವಿಯರ್ ಮುದಂ
ಬೆತ್ತೊಡನಿತ್ತರೀತೊಡವನೆಲ್ಲಮನನ್ಯಕುಜಂಗಳಿತ್ತಣಿಂ

ಪ್ರಿಯಂ. — (ಶಕುಂತಳೆಯನ್ನು ನೋಡಿ) ಎಲೆ ಸಖಿ ಶಕುಂತಳೆ, ಇವರ ಈ ಅನುಗ್ರಹವು ನೀನು ಪತಿಗೃಹದಲ್ಲಿ ಅನುಭವಿಸತಕ್ಕ ರಾಜ್ಯಲಕ್ಷ್ಮಿಗೆ ಸೂಚಕವಾಗಿರುವುದು.

ಶಕುಂ.— (ಲಜ್ಜೆಯನ್ನು ನಟಿಸುವಳು)

ಮೊದಲನೆಯವನು — ಎಲೈ ಗೌತಮನೇ ನಡೆ ನಡೆ, ಸ್ನಾನಾರ್ಥವಾಗಿ ಇಳಿದ ಕಣ್ವರಿಗೆ ವನಸ್ಪತಿಗಳ ಸೇವೆಯನ್ನು ಅರಿಕೆಮಾಡೋಣ.

ಎರಡನೆಯವನು — ಹಾಗಾಗಲಿ. (ಎಂದು ಹೋಗುವರು)

ಅನ. — ಎಲೆ ಸಖಿ, ನಮಗೆ ಆಭರಣಗಳನ್ನಿಟ್ಟು ಅನುಭವವಿಲ್ಲ ; ಆದರೂ ಚಿತ್ರವನ್ನು ನೋಡಿದ ಪರಿಚಯದಿಂದ ನಿನ್ನ ಅಂಗಗಳಲ್ಲಿ ಆಭರಣಗಳನ್ನಿಡುವೆವು.

ಶಕುಂ. — ನಿಮ್ಮ ಜಾಣ್ಮೆಯನ್ನು ಬಲ್ಲೆನು.

ಸಖಿಯರು — (ಅಲಂಕರಿಸುವುದನ್ನು ಅಭಿನಯಿಸುವರು)

(ಅನಂತರ ಸ್ನಾನದಿಂದೆದ್ದು ಕಣ್ವರು ಪ್ರವೇಶಿಸುವರು.)

ಕಣ್ವರು —

ವೃತ್ತ ॥ ಕಳವಳವಾಂತುದೆನ್ನೆರ್ದೆ ಶಕುಂತಳೆ ಪೋದಪಳೆಂದು ಕಂಠಮು
ಮ್ಮಳಿಸುವುದೊತ್ತುವಶ್ರುಭರದಿಂ ಜಡಮಾದುದು ದೃಷ್ಟಿ ಚಿಂತೆಯಿಂ
ದಳಲಿನಿತಾಗೆ ಕಾಡ ಮನುಜಂಗೆನಗಂ ಕಡುನೇಹದಿಂದಮಿ
ನ್ನುಳಿದ ಗೃಹಸ್ಥರಾತ್ಮಭವೆಯಂ ಕಳುಪುತ್ತಕಟೆಂತಳಲ್ವರೊ

(ಎಂದು ಬರುವರು.)

ಸಖಿಯರು — ಎಲೆ ಶಕುಂತಳೆ, ಅಲಂಕಾರವೆಲ್ಲ ನೆರವೇರಿತು; ಇನ್ನು ದುಕೂಲದ್ವಯವನ್ನು ಧರಿಸಿಕೊ.

(ಶಕುಂತಳೆ ಎದ್ದು ಧರಿಸಿಕೊಳ್ಳುವಳು.)

ಗೌತಮಿ — ಎಲೆ ಮಗಳೆ, ಇದೋ ತಂದೆಗಳಾದ ಕಣ್ವರು ಆನಂದಬಾಷ್ಪ ಪ್ರವಾಹದಿಂದ ತುಂಬಿದ ಕಣ್ಣುಗಳಿಂದ ಆಲಿಂಗಿಸಿಕೊಳ್ಳುವಂತೆ ನಿನ್ನನ್ನು ನೋಡುತ್ತ ಸಮೀಪದಲ್ಲಿ ನಿಂತಿರುವರು. ಇವರಿಗೆ ನಮಸ್ಕರಿಸು.

ಶಕುಂ. — (ಭಕ್ತಿಪೂರ್ವಕವಾಗಿ) ತಂದೆಯೇ, ವಂದಿಸುವೆನು.

ಕಣ್ವರು —

ಕಂದ ॥ ಜಾತೆ ನಿಜಗುಣಗಳಿಂದೆ ಯ
ಯಾತಿಗೆ ಶರ್ಮಿಷ್ಠೆಯಂತೆ ಪತಿಹಿತೆಯಾಗು
ತ್ತಾತರುಣೆ ಪೂರುವಂ ಪಡೆ
ದಾತೆರದಿಂ ಚಕ್ರವರ್ತಿಪುತ್ರನ ಪಡೆ ನೀಂ

ಗೌತಮಿ — ಪೂಜ್ಯರೇ, ಇವು ವರಗಳಲ್ಲದೆ ಕೇವಲ ಆಶೀರ್ವಾದಗಳಲ್ಲ.

ಕಣ್ವರು — ವತ್ಸೆ, ಇತ್ತ ಬಾ; ಈಗಲೇ ಹವಿಸ್ಸನ್ನು ಕೈಕೊಂಡಿರುವ ಅಗ್ನಿಗಳನ್ನು ಪ್ರದಕ್ಷಿಣೆ ಮಾಡು. (ಎಲ್ಲರೂ ಬರುವರು)

ಕಣ್ವರು — (ಋಕ್ಛಂದಸ್ಸಿನಿಂದ ಹರಸುವರು) ಎಲೆ ವತ್ಸೆ —

ಕಂದ ॥ ವೇದಿಯ ಸುತ್ತಲ್ ನೆಲೆಗೊಂ
ಡಾದಂ ಸಮಿಧೆಗಳನಾಂತು ಪೊಣ್ಮುವ ಹವ್ಯಾ
ಮೋದದಿನಘಪರಿಹಾರಕ
ಮಾದೀ ವೈತಾನವಹ್ನಿ ಸಲಹುಗೆ ನಿನ್ನಂ

ಇನ್ನು ಪ್ರಯಾಣಮಾಡು (ಕಣ್ಣುಸನ್ನೆಯಿಂದ) ಎಲ್ಲಿ ಶಾರ್ಙ್ಗರವ ಶಾರದ್ವತರು?

(ಶಿಷ್ಯರು ಬರುವರು.)



ಶಿಷ್ಯರು — ಪೂಜ್ಯರೇ, ಇದೋ ಸಿದ್ಧರಾಗಿರುವೆವು.

ಕಣ್ವರು — ಎಲೈ ಶಾರ್ಙ್ಗರವನೇ, ನಿನ್ನ ಸಹೋದರಿಗೆ ಮಾರ್ಗವನ್ನು ತೋರಿಸು.

ಶಾಙ್ಗರವ — ಎಲೌ ಪೂಜ್ಯಳೇ, ಹೀಗೆ ಬರತಕ್ಕದ್ದು.

(ಶಕುಂತಳೆ ಆ ಮಾರ್ಗವಾಗಿ ಹೋಗುವಳು.)

ಕಣ್ವರು — ಎಲೆ ಎಲೆ, ಸನ್ನಿಹಿತದೇವತೆಗಳಾದ ತಪೋವನ ತರುಗಳಿರಾ, ಕೇಳಿರಿ:

ವೃತ್ತ ॥ ಜಲವನದಾವಳೀಂಟಲೆರೆದಲ್ಲದೆ ನಿಮ್ಮಯ ಪಾತೆಗಂಬುವಂ
ತಳಿರ್ಗಳ ಕೊಯ್ಯಳಾವಳೊಲವಿಂ ಮಿಗೆ ಸಿಂಗರದಾಸೆಯುಳ್ಳೊಡಂ
ಅಲರ್ಗಳ ತಾಳೆ ನೀವು ಮೊದಲುತ್ಸವವಾಂತಪಳಾವಳಾಶಕುಂ
ತಳೆ ಪತಿಸದ್ಮಕೈದಿದಪಳಾಕೆಗನುಜ್ಞೆಯನೀವುದೆಲ್ಲರುಂ

(ಕೋಕಿಲಧ್ವನಿಯನ್ನು ತೋರಿಸಿ)

ಕಂದ ॥ ಬಾಲೆ ಪತಿಗೃಹಕೆ ಪೋಪುದ
ಪೇಳಲ್ ವನವಾಸಬಂಧುವೀ ತರುವೃಂದಂ
ಕೇಳುತನುಮತಿಸಿ ಕಲಕಂ
ಠಾಲಾಪದ ನೆವದೆ ನುಡಿವುದಿದೊ ಪಡಿಮಾತಂ

(ಆಕಾಶದಲ್ಲಿ)

ವೃತ್ತಂ ॥ ತಾವರೆ ತೀವಿ ತೋರುವ ಸರೋವರದಿಂ ರಮಣೀಯಮಾಗಿ ತ
ಳ್ತಾವರಿಸಿರ್ದ ಸಾಲ್ಮರಗಳಿಂದೆ ಹೃತಾತಪತಾಪಮಾಗಿ ರಾ
ಜೀವಗಳದ್ರಜೋಮೃದುಲರೇಣುಗಳಿಂದತಿಸಾಂದ್ರಮಾಗಿ ಸೌ
ಖ್ಯಾವಹಮೀಕೆಗಕ್ಕೆಯನುಕೂಲಸಮೀರಣಮಾಗಿ ಮೇಣ್ ಪಥಂ

(ಎಲ್ಲರೂ ವಿಸ್ಮಯಬಟ್ಟು ಕೇಳುವರು.)

ಗೌತಮಿ — ಎಲೆ ಮಗಳೆ, ಪ್ರಿಯಬಂಧುಗಳಂತಿರುವ ಈ

ತಪೋವನದೇವತೆಗಳು ಅನುಜ್ಞೆಯನ್ನು ಕೊಟ್ಟರು. ಇನ್ನು ಇವರಿಗೆ ನಮಸ್ಕರಿಸಿ ನಡೆ.

(ಶಕುಂತಳೆ ನಮಸ್ಕರಿಸಿ ಪೋಗುತ್ತಾ)

ಶಕುಂ. — ಎಲೆ ಪ್ರಿಯಂವದೆ, ಪತಿಯನ್ನು ನೋಡುವ ಕುತೂಹಲ ನನಗೆ ಬಹಳವಾಗಿದ್ದಾಗ್ಯೂ, ಆಶ್ರಮವನ್ನು ಬಿಟ್ಟುಹೋಗುವ ನನ್ನ ಕಾಲುಗಳು ಅತಿ ಕಷ್ಟದಿಂದ ಮುಂದಕ್ಕೆ ಸಾಗುವುವು.

ಪ್ರಿಯಂ. — ಎಲೆ ಸಖಿ, ತಪೋವನವನ್ನು ಬಿಟ್ಟು ಹೋಗಲಾರದ ದುಃಖ ನಿನ್ನೊಬ್ಬಳಿಗೇ ಅಲ್ಲ. ನಿನ್ನ ವಿಯೋಗದಿಂದ ತಪೋವನಕ್ಕಾದ ಅವಸ್ಥೆಯನ್ನು ನೋಡು.

ಕಂದ ॥ ಕುಣಿವುದನುಳಿದುವು ಶಿಖಿಗಳ್
ತೃಣಕಬಳಂ ಜಗುಳೆ ಬಾಯಿನರಿಯದು ಹರಿಣೀ
ಗಣಮುದಿರ್ವೆಲೆಯಿಂ ರಮಣೀ
ಮಣಿ ಕಣ್ಣೀರ್ವಿಡುವ ತೆರದೆ ತೋರ್ಪುವು ಲತೆಗಳ್

ಶಕುಂ. — (ಸ್ಮರಿಸಿಕೊಂಡು) ತಂದೆಯೆ, ಲತಾಭಗಿನಿಯಾದ ವನಜ್ಯೋತ್ಸ್ನೆಗೆ ಹೇಳಿಬರುವೆನು.

ಕಣ್ವರು — ಬಲ್ಲೆನು; ನಿನಗದರಲ್ಲಿ ಒಡಹುಟ್ಟಿದ ಸ್ನೇಹವಿರುವುದಷ್ಟೆ. ಇದೋ ಬಲಗಡೆ ಇರುವುದು.

ಶಕುಂ. — (ಲತೆಯ ಬಳಿಗೆ ಬಂದು) ಎಲೆ ವನಜ್ಯೋತ್ಸ್ನೆಯೆ, ಸಹಕಾರ ಸಂಗತೆಯಾಗಿದ್ದಾಗ್ಯೂ ಈ ಕಡೆಯ ಶಾಖಾಭುಜಗಳಿಂದ ನನ್ನನ್ನು ಆಲಿಂಗಿಸು; ಇನ್ನು ಮೇಲೆ ನಿನಗೆ ನಾನು ದೂರಗತೆಯಾಗುವೆನಲ್ಲವೆ ?

ಕಣ್ವರು —

ಕಂದ ॥ ನಂದನೆ ನಾಂ ಸಂಕಲ್ಪಿಸಿ
ದಂದದೊಳನುರೂಪಪತಿಯ ಸೇರಿದೆ ನೀಂ ಸೈ
ಪಿಂದೀಮಾಲತಿಯುಂ ಮಾ
ಕಂದವನೊಂದಿತ್ತು ನಿಮ್ಮೊಳಾಂ ನಿಶ್ಚಿಂತಂ



ಇತ್ತಲೀಮಾರ್ಗವಾಗಿ ನಡೆ.

ಶಕುಂ. — ಎಲೌ ಸಖಿಯರೆ, ಈ ವನಜ್ಯೋತ್ಸ್ನೆಯನ್ನು ನಿಮ್ಮಿಬ್ಬರ ಕಯ್ಗೆ ಕೊಟ್ಟಿರುವೆನು.

ಸಖಿಯರು — ಇದನ್ನಂತೂ ನಮ್ಮ ಕಯ್ಗೆ ಕೊಟ್ಟೆ ; ನಮ್ಮನ್ನು ನೀನು ಈಗ ಯಾರಕೈಗೆ ಕೊಟ್ಟೆ ? (ಎಂದು ಕಣ್ಣೀರನ್ನು ಮಿಡಿಯುವರು).

ಕಣ್ವರು — ಎಲೆ ಅನುಸೂಯೆ, ಎಲೆ ಪ್ರಿಯಂವದೆ, ಇದೇನು! ನೀವೇ ಹೀಗೆ ರೋದಿಸುವುದಕ್ಕೆ ಉಪಕ್ರಮಿಸಿದರೆ ಇನ್ನು ಶಕುಂತಳೆಯನ್ನು ಸಮಾಧಾನ ಪಡಿಸುವವರು ಯಾರು? ಸಾಕು; ಸುಮ್ಮನಿರಿ.

(ಎಲ್ಲರೂ ನಡೆಯುವರು)

ಶಕುಂ. — ಎಲೈ ತಂದೆಯೆ, ಪರ್ಣಶಾಲೆಯ ಬಳಿ ತಿರುಗುವ ಪೂರ್ಣಗರ್ಭಿಣಿಯಾದೀ ಹುಲ್ಲೆಗೆ ಯಾವಾಗ ಸುಖಪ್ರಸವವಾಗುವುದೋ ಆಗ ನನಗೆ ಕುಶಲ ಪತ್ರಿಕೆಯನ್ನು ಕಳುಹಿಸಬೇಕು.

ಕಣ್ವರು — ಆಗಲಿ; ಇದನ್ನು ಮರೆಯದಿರುವೆವು.

ಶಕುಂ. — (ಗಮನಭಂಗವನ್ನು ಅಭಿನಯಿಸಿ) ಇದು ಯಾವುದು ? ಮರಳಿ ಮರಳಿ ನನ್ನ ಸೀರೆಯ ಸೆರಗನ್ನು ಹಿಡಿದು ಸೆಳೆಯುವುದು ? (ಎಂದು ಹಿಂತಿರುಗುವಳು)

ಕಣ್ವರು —

ಕಂದ ॥ ಮಗಳೆ ಕುಶಸೂಚಿ ತಾಗಿದ
ಮೊಗದೊಳ್ ವ್ರಣಹರಣತೈಲವೆರೆಯುತೆ ನೀವಾ
ರಗಳ ಹಿಡಿಯಿತ್ತು ಪೊರೆದೀ
ಮೃಗಾರ್ಭಕಂ ನಿನ್ನ ಮಾರ್ಗಮಂ ಬಿಟ್ಟಪುದೇ ?

ಶಕುಂ — ಎಲೆ ವತ್ಸ, ಸಹವಾಸವನ್ನು ಬಿಟ್ಟುಹೋಗುವ ನನ್ನನ್ನು ಏತಕ್ಕೆ ಅನುಸರಿಸುವೆ ? ಹುಟ್ಟಿದಕೂಡಲೆ ತಾಯನಗಲಿದ ನಿನ್ನನ್ನು ಬೆಳೆಸಿದೆನು; ಈಗಲೂ

ನನ್ನನ್ನು ಅಗಲಿದ ನಿನ್ನ ಪೋಷಣೆಯ ವಿಷಯದಲ್ಲಿ ತಂದೆಗಳೂ ಚಿಂತಿಸುವರು; ಇನ್ನು ಹಿಂದಿರುಗಿಹೋಗು (ಎಂದು ರೋದಿಸುತ್ತಾ ಹೋಗುವಳು).

ಕಣ್ವರು —

ಕಂದ ॥ ತಡೆ ಮಗಳೆ ಬರ್ಪ ಕಂಬನಿ
ಗಡಣವನೆನ್ನಾಣೆ ಕಾಣದಿರ್ಪೀ ನೆಲದೊಳ್
ನಡೆದೊಡೆ ನಿಮ್ನೋನ್ನತಮಾ
ದೆಡೆಯೊಳ್ ಪಲ್ಲಟಿಪುವಲ್ತೆ ನಿನ್ನ ಪದಂಗಳ್

ಶಾರ್ಙ್ಗರವ. — ಪೂಜ್ಯರೆ, ಬಂಧುಜನಗಳು ಜಲಾಶಯದವರೆಗೆ ಸಂಗಡ ಬರತಕ್ಕುದೆಂಬುದು ಸಂಪ್ರದಾಯವಲ್ಲವೆ? ಆದುದರಿಂದ, ಇದೋ ಸರೋವರತೀರವು; ಇಲ್ಲಿ ನಮಗೆ ಆಜ್ಞಾಪಿಸುವುದನ್ನು ಆಜ್ಞಾಪಿಸಿ ಹಿಂದಕ್ಕೆ ದಯಮಾಡಬೇಕು.

ಕಣ್ವರು — ಆದರೆ ಈ ಕ್ಷೀರವೃಕ್ಷದ ನೆರಳಲ್ಲಿ ಕುಳಿತುಕೊಳ್ಳೋಣ ಬನ್ನಿ.

(ಎಲ್ಲರೂ ಬಂದು ಕುಳಿತುಕೊಳ್ಳುವರು)

ಕಣ್ವರು — (ತಮ್ಮಲ್ಲಿ ತಾವು) ಪೂಜ್ಯನಾ ಆ ದುಷ್ಯಂತನ ಯೋಗ್ಯತಾನುಸಾರವಾಗಿ ಏನು ಹೇಳಿಕಳುಹಿಸೋಣ ? (ಎಂದು ಚಿಂತಿಸುವರು)

ಶಕುಂ. — (ಮರೆಯಲ್ಲಿ) ಎಲೆ ಅನಸೂಯೆ, ಇದೋ ನೋಡು; ತಾವರೆಯಲ್ಲಿ ಮರೆಯಾದ ಮಾತ್ರಕ್ಕೇ ತನ್ನ ಸಹಚರನನ್ನು ಕಾಣದೆ ಈ ಚಕ್ರವಾಕಸ್ತ್ರೀಯು ಕಳವಳಗೊಂಡು ಎಷ್ಟು ಕೂಗಿಕೊಳ್ಳುವುದು! ನಾನಲ್ಲವೆ ಅತಿದುಷ್ಕರವಾದುದನ್ನು ಮಾಡುವವಳು!

ಅನ. — ಎಲೆ ಸಖಿ, ಹೀಗೆ ನೀನು ಆಲೋಚಿಸಬೇಡ.

ಕಂದ ॥ ಉಳಿದಿನಿಯನನಿದುವುಂ ಮನ
ದಳಲಿಂ ಪಿರಿದೆನಿಸಿದಿರುಳ ಕಳೆವುದು ಬಲು ವೆ
ಗ್ಗಳಿಸಿದ ವಿರಹವ್ಯಥೆಯಂ
ಕೆಳದಿಯೆ ಸಹಿಪಂತೆ ಮಾಳ್ಪುದಾಶಾಬಂಧಂ



ಕಣ್ವರು — ಎಲೈ ಶಾರ್ಙ್ಗರವನೆ, ಶಕುಂತಲೆಯ ಇದಿರಿನಲ್ಲಿ ಆ ರಾಜನನ್ನು ಕುರಿತು, ನಾನು ಹೇಳಿದೆನೆಂದು ಹೇಳತಕ್ಕುದು;

ಶಾರ್ಙ್ಗರವ — ಪೂಜ್ಯರೇ, ಆಜ್ಞಾಪಿಸಬೇಕು.

ಕಣ್ವರು —

ವೃತ್ತ ॥ ಪಿರಿದುಂ ಚಿಂತಿಸಿ ಸಂಯಮಾರ್ಥರೆನಿಪೆಮ್ಮಂ ಮೇಣ್ ಭವದ್ವಂಶದೆ
ಳ್ತರಮಂ ನಿನ್ನೊಳಗೀಕೆ ತಾನೆಯೊಲವೆತ್ತಾಪ್ತಾಂಗುಮಂ ಪೆಂಡಿರೊಳ್
ಸರಿಗಂಡೀಕೆಯ ನೀಂ ಬರ್ದುಂಕಿಪುದು ಭಾಗ್ಯಾಧೀನಮಿನ್ನಿಂತರಿಂ
ಪೆರತೆಲ್ಲಂ ಬಗೆಯಲ್ಕದಂ ನುಡಿವುದಲ್ಲಂ ದಲ್ ವಧೂಬಂಧುಗಳ್

ಶಾರ್ಙ್ಗರವ — ಅಪ್ಪಣೆಯಾದುದನ್ನು ಗ್ರಹಿಸಿದೆನು.

ಕಣ್ವರು — ವತ್ಸೆ, ಈಗ ನಿನಗೆ ಬುದ್ಧಿವಾದವನ್ನು ಹೇಳಬೇಕಾಗಿರುವುದು. ಕೇಳು: ನಾವು ವನವಾಸಿಗಳಾದರೂ ಲೋಕತಂತ್ರವನ್ನೆಲ್ಲಾ ಬಲ್ಲೆವು.

ಶಾರ್ಙ್ಗರವ — ಬುದ್ಧಿಶಾಲಿಗಳಿಗೆ ಯಾವುದು ತಾನೆ ಅಗೋಚರವಾಗಿ ಇದ್ದೀತು ?

ಕಣ್ವರು — ಎಲೆ ಮಗಳೆ, ಇನ್ನು ನೀನು ಗಂಡನ ಮನೆಯನ್ನು ಸೇರಿ,

ವೃತ್ತ ॥ ಪಿರಿಯರ ಸೇವೆಗೆಯ್ ಸವತಿಯರ್ಕಳೊಳಿಷ್ಟವಯಸ್ಯೆಯಂದದಿಂ
ದಿರು ಪತಿಯೊರ್ಮೆ ಹೇವಗೊಳಿಸಲ್ ಮುಳಿಸಿಂ ಪ್ರತಿಕೂಲೆಯಾಗದಿರ್
ಪರಿಜನವಂ ಕರಂ ಸಲಹು ಭಾಗ್ಯದೆ ಬಾಗಿರು ಪೆಣ್ಗಳಿಂತಿರಲ್
ಗರತಿಯರಪ್ಪರಿಂತಿರದರನ್ವಯಕಾಧಿಯನುಂಟುಮಾಳ್ಪರೌ

ಇದು ಹೊರತು ಗೌತಮಿ ಇನ್ನೇನು ತಿಳಿದಿರುವಳೊ ಕೇಳು.

ಗೌತಮಿ — ವಧೂಜನಕ್ಕೆ ಹೇಳತಕ್ಕ ಉಪದೇಶವು ಇಷ್ಟುತಾನೆ; ಇದರ ಮೇಲೇನಿರುವುದು ? ಎಲೆ ವತ್ಸೆ, ಇದನ್ನೆಲ್ಲಾ ಗ್ರಹಿಸಿಕೊಂಡಿರು ಕಂಡೆಯಾ ?

ಕಣ್ವರು — ಎಲೆ ವತ್ಸೆ, ನನ್ನನ್ನೂ ನಿನ್ನ ಸಖೀಜನರನ್ನೂ ಆಲಿಂಗಿಸು.

ಶಕುಂ. — ತಂದೆಯೆ, ಪ್ರಿಯಂವದೆ ಮೊದಲಾದ ಸಖಿಯರು ಇಲ್ಲಿಂದಲೇ

ಹಿಂದಿರುಗುವರೇ ?

ಕಣ್ವರು — ಎಲೆ ಮಗಳೆ, ಇವರು ಮದುವೆಯಾಗತಕ್ಕವರು. ಆದುದರಿಂದ ಇವರು ಅಲ್ಲಿಗೆ ಬರುವುದು ಯುಕ್ತವಲ್ಲ; ನಿನ್ನೊಡನೆ ಗೌತಮಿ ಬರುವಳು.

ಶಕುಂ. — (ತಂದೆಯನ್ನು ಆಲಿಂಗಿಸಿಕೊಂಡು) ಈಗ ತಂದೆಯ ತೊಡೆಯನ್ನು ಬಿಟ್ಟು ಮಲಯಪರ್ವತದ ತಟದಿಂದ ಕಿತ್ತುಹಾಕಿದ ಚಂದನಲತೆಯಂತೆ ದೇಶಾಂತರದಲ್ಲಿ ನಾನೆಂತು ಜೀವವನ್ನು ಧರಿಸುವೆನು ?

ಕಣ್ವರು — ಎಲೆ ಮಗಳೆ, ಹೀಗೇತಕ್ಕೆ ಕಳವಳಪಡುವೆ ?

ವೃತ್ತ II ಕುವರಿ ಕುಲೀನನಾದ ಪತಿಗೊಪ್ಪುವ ಪಟ್ಟದ ರಾಣಿಯಾಗಿ ವೈ
ಭವಗಳಿನೇಳ್ಗೆವೆತ್ತಿನನ ಕೃತ್ಯದೊಳಾಕುಲೆಯಾಗುತಾವಗಂ
ರವಿಯನಮರ್ತ್ಯನಾಥದಿಶೆ ತಾಂ ಪಡೆದಂತೆ ಸುಗಾತ್ರಪುತ್ರನಂ
ತವಕದೆ ಪೆತ್ತು ನೀನೆಣಿಸದಿರ್ಪೆ ಮದೀಯವಿಯೋಗದುಃಖಮಂ

(ಶಕುಂತಳೆಯು ತಂದೆಯ ಪಾದಗಳಿಗೆ ನಮಸ್ಕರಿಸುವಳು.)

ಶಕುಂ.— (ಸಖಿಯರ ಸಮೀಪಕ್ಕೆ ಬಂದು) ಎಲೌ ಸಖಿಯರೆ, ನೀವಿಬ್ಬರೂ ನನ್ನನ್ನು ಸಮವಾಗಿ ಆಲಿಂಗಿಸಿ.

ಸಖಿಯರು — (ಹಾಗೆಯೇ ಆಲಿಂಗಿಸಿಕೊಂಡು) ಎಲೆ ಸಖಿ, ಆ ರಾಜನು ನಿನ್ನನ್ನು ಮರೆತಿದ್ದುದೇ ಆದರೆ ಆಗ ಆತನಿಗೆ ಅವನ ನಾಮಾಂಕಿತವಾದ ಈ ಉಂಗುರವನ್ನು ತೋರಿಸು.

ಶಕುಂ.— ಎಲೌ ಸಖಿಯರೆ, ನಿಮ್ಮೀ ಸಂದೇಹದಿಂದ ಕಂಪಿತೆಯಾದೆನು.

ಸಖಿಯರು — ಅಂಜಬೇಡ; ಅತಿ ಸ್ನೇಹವು ಪಾಪಶಂಕಿಯಾದದ್ದು.

ಶಾರ್ಙ್ಗರವಂ — ಎಲೌ ಪೂಜ್ಯಳೆ, ಸೂರ್ಯನಾದರೆ ನಗದ ಮಧ್ಯಕ್ಕೆ ಹತ್ತಿದನು, ಬೇಗ ನಡೆ.

ಶಕುಂ.— (ಆಶ್ರಮಕ್ಕೆ ಇದಿರಾಗಿ ನಿಂತು) ತಂದೆಯೆ, ತಪೋವನವನ್ನು ಇನ್ನು ಯಾವಾಗ ನೋಡುವೆನು ?



ಕಣ್ವರು — ಕೇಳು;

ಕಂದ II ಕ್ಷಿತಿಪತಿಗೆ ಸವತಿಯಾಗಲ್
ಪ್ರತಿರಥನಂ ಸುತನ ಪೆತ್ತು ಸುತೆ ನೀಂ ತನಯಾ
ರ್ಪಿತರಾಜ್ಯನಪ್ಪ ನಿನ್ನಯ
ಪತಿಯೊಡನೀಕ್ಷಿಸುವೆ ಮಗುಳ್ದು ಮೀಯಾಶ್ರಮವಂ

ಗೌತಮಿ — ಮಗಳೆ, ಗಮನವೇಳೆ ಕಳೆಯುತ್ತಾ ಬಂದಿತು; ತಂದೆಯನ್ನು ಹಿಂದಕ್ಕೆ ಕಳುಹಿಸು; ಅಥವಾ ನೀವಾದರೂ ಹಿಂದಿರುಗಬೇಕು. ಈಕೆ ಪದೇ ಪದೇ ಹೀಗೆಯೇ ನುಡಿಯುತ್ತಿರುವಳು.

ಕಣ್ವರು — ಎಲೆ ವತ್ಸೆ, ತಪೋನುಷ್ಠಾನವು ನನ್ನನ್ನು ತಡೆಯುವುದು.

ಶಕುಂ. — (ತಂದೆಯನ್ನು ಮತ್ತೂ ಆಲಿಂಗಿಸಿಕೊಂಡು) ಮೊದಲೇ ತಪಶ್ಚರ್ಯೆಯಿಂದ ಪೀಡಿತವಾದ ತಂದೆಯ ಶರೀರವು ಮತ್ತೂ ನನಗೋಸ್ಕರ ಬಹಳವಾಗಿ ಕಳವಳ ಪಡುವುದು.

ಕಣ್ವರು — (ನಿಟ್ಟುಸಿರಿಂದ ಕೂಡಿ)

ಕಂದ II ಸಾರುತುಮಾನುಟಜವನಾ
ದ್ವಾರದ ಬಳಿಯಲ್ಲಿ ಮೊದಲೆ ನೀನಿರಿಸಿದ ನೀ
ವಾರಬಲಿಯಂ ವಿಲೋಕಿಸಿ
ಮೀರುವ ಮನದಳಲನೆಂತು ತಡೆವೆಂ ಮಗಳೇ

ನಡೆ, ನಿನಗೆ ಮಾರ್ಗವೆಲ್ಲಾ ಮಂಗಳಕರವಾಗಲಿ!

(ಶಕುಂತಳೆಯೂ ಸಂಗಡ ಹೋಗತಕ್ಕವರೂ ಹೊರಡುವರು.)

ಸಖಿಯರು — (ಶಕುಂತಳೆಯನ್ನು ನೋಡಿ) ಹಾ! ಹಾ! ನಮ್ಮ ಪ್ರಿಯಸಖಿಯಾದ ಶಕುಂತಳೆಯು ವನಪಙ್ಕ್ತಿಯಿಂದ ಮರೆಯಾದಳಲ್ಲಾ!

ಕಣ್ವರು — (ನಿಟ್ಟುಸಿರನ್ನು ಬಿಟ್ಟು) ಎಲೆ ಅನಸೂಯೆ, ನಿಮ್ಮ ಒಡನಾಡಿಯಾದ ಶಕುಂತಳೆಯು ಹೊರಟುಹೋದಳು; ಶೋಕವನ್ನು ತಡೆದು ನನ್ನೊಡನೆ ಬನ್ನಿ, ಹೋಗೋಣ.

ಇಬ್ಬರು ಸಖಿಯರೂ — ತಂದೆಯೆ, ಶಕುಂತಳೆಯು ಇಲ್ಲದುದರಿಂದ ಶೂನ್ಯವಾದಂತಿರುವ ತಪೋವನವನ್ನು ಹೇಗೆ ಹೊಗುವೆವು ?

ಕಣ್ವರು — ಸ್ನೇಹವು ಹೀಗೆ ತೋರ್ಪಡಿಸುವುದು. (ವಿಚಾರಯುಕ್ತರಾಗಿ ಸ್ವಲ್ಪ ನಡೆದು) ಆಹ! ಶಕುಂತಳೆಯನ್ನು ಪತಿಗೃಹಕ್ಕೆ ಕಳುಹಿಸಿ ಈಗ ನೆಮ್ಮದಿಯನ್ನು ಪಡೆದೆನು.

ಕಂದ ॥ ಕನ್ನೆ ಪೆರನೊಡವೆ ಗಡ ಪತಿ
ಸನ್ನಿಧಿಗಿಂದವಳ ಕಳುಹಿ ನಿರ್ಮಲವಾದ
ತ್ತೆನ್ನಯ ಮಾನಸಮಾದಂ
ತನ್ನಯ ಬಳಿಯಿಟ್ಟೊಡವೆಯ ಮಗುಳಿತ್ತನವೊಲ್

(ಎಲ್ಲರೂ ಹೊರಟುಹೋಗುವರು.)

### ಕೃತಿ-ಕರ್ತೃ ವಿಚಾರ

ಕಾಳಿದಾಸನ ಶಾಕುಂತಲ ನಾಟಕವನ್ನು ಸಂಸ್ಕೃತದಿಂದ ಕನ್ನಡಕ್ಕೆ ಭಾಷಾಂತರಿಸಿ 'ಅಭಿನವ ಕಾಳಿದಾಸ' ಎಂಬ ಬಿರುದಿಗೆ ಪಾತ್ರರಾದವರು ಬಸವಪ್ಪ ಶಾಸ್ತ್ರಿಗಳು. ಅವರು ಮುಮ್ಮಡಿ ಕೃಷ್ಣರಾಜ ಒಡೆಯರ್ ಮತ್ತು ಚಾಮರಾಜ ಒಡೆಯರರ ಆಸ್ಥಾನ ವಿದ್ವಾಂಸರಾಗಿದ್ದರು. ಅವರು 1843 ರಲ್ಲಿ ನಾಗಸಂದ್ರದಲ್ಲಿ ಜನಿಸಿದರು. ಅವರು ಚಿಕ್ಕಂದಿನಲ್ಲಿಯೇ ತಂದೆತಾಯಿಯವರನ್ನು ಕಳೆದುಕೊಂಡರು. ಆದರೂ ಧೃತಿಗೆಡದೆ ಸಂಸ್ಕೃತ ಹಾಗೂ ಕನ್ನಡ ಭಾಷೆಗಳಲ್ಲಿ ಪಾಂಡಿತ್ಯವನ್ನು ಪಡೆದು ಆಸ್ಥಾನ ಪಂಡಿತರಾದರು. ಅವರು ಶಾಕುಂತಲ, ವಿಕ್ರಮೋರ್ವಶೀಯ, ಉತ್ತರರಾಮಚರಿತ, ಮಾಲತಿ ಮಾಧವ, ರತ್ನಾವಳಿ ಮುಂತಾದ ಸಂಸ್ಕೃತ ನಾಟಕಗಳನ್ನು ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಅವರು ಮಾಡಿದ ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕದ ಕನ್ನಡ ಅನುವಾದ ಅತ್ಯುತ್ತಮವಾಗಿದೆ.

''ಕಾವ್ಯೇಷು ನಾಟಕಂ ರಮ್ಯಂ ತತ್ರ ರಮ್ಯಾ ಶಕುಂತಲಾ
ತತ್ರಾಪಿಚ ಚತುರ್ಥೋಂಕಃ ತತ್ರ ಶ್ಲೋಕ ಚತುಷ್ಟಯಂ''

ಎಂದು ಪ್ರಸಿದ್ಧವಾಗಿರುವ 'ಶಾಕುಂತಲ' ನಾಟಕದ ನಾಲ್ಕನೆಯ ಅಂಕವನ್ನು



ಇಲ್ಲಿ ಕೊಡಲಾಗಿದೆ. ಕಣ್ವಋಷಿಗಳು ತಮ್ಮ ಸಾಕು ಮಗಳಾದ ಶಕುಂತಲೆಯನ್ನು ಗಂಡನ ಮನೆಗೆ ಕಳುಹಿಸುವಾಗ ಆಡುವ ಹಿತನುಡಿಗಳು ಅವರಿಗಾಗುವ ದುಃಖ ಮುಂತಾದವುಗಳು ಅತ್ಯಂತ ಮನೋಜ್ಞವಾಗಿ ಈ ಭಾಗದಲ್ಲಿ ನಿರೂಪಿತವಾಗಿವೆ.

### I. ಕಠಿಣ ಪದಗಳ ಅರ್ಥ

ಗಾಂಧರ್ವ ವಿವಾಹ =ಹೆಣ್ಣು ಗಂಡು ಪರಸ್ಪರ ಮೆಚ್ಚಿ ತಾವೇ ಮಾಡಿಕೊಳ್ಳುವ ವಿವಾಹ; ಇತ್ತಣ =ಈ ಕಡೆಯ; ವೃತ್ತಾಂತ =ಸಮಾಚಾರ; ಅನುರೂಪ =ತನ್ನ ರೂಪಕ್ಕೆತಕ್ಕ; ಅರ್ಘ್ಯೋದಕ =ಅರ್ಘ್ಯವನ್ನು ಕೊಡುವುದಕ್ಕಾಗಿ ಬಳಸುವ ನೀರು; ದಯಾರ್ದ್ರ =ಕರುಣಾಳು; ಮುದ್ರಿಕೆ =ಉಂಗುರ; ಕೃತಕೃತ್ಯ =ಕೃತಾರ್ಥ, ಧನ್ಯ; ಅಭಿಮತಿಸು =ಅಭಿಪ್ರಾಯ ಪಡು; ದೂರ್ವ =ಗರಿಕೆ; ಕಿಸಲಯ =ಚಿಗುರು; ಆತ್ಮಭವೆ =ಮಗಳು; ಮಜ್ಜನ =ಸ್ನಾನ; ತೀವಿ =ತುಂಬಿ; ಆತಪ =ಬಿಸಿಲು; ಶಿಖಿ =ನವಿಲು; ತೃಣ =ಹುಲ್ಲು ; ಭಗಿನಿ =ಸಹೋದರಿ; ದುಷ್ಕರ =ಕಠಿಣ; ವೆಗ್ಗಳಿಸಿದ =ಅಧಿಕವಾದ; ಪಾಂಗು =ರೀತಿ; ಗಮನವೇಳೆ =ಹೊರಡುವ ವೇಳೆ; ಉಟಜ =ಪರ್ಣಶಾಲೆ; ಅಭಿಜ್ಞಾನಾಭರಣದರ್ಶನ =ನೆನಪನ್ನುಂಟುಮಾಡುವುದಕ್ಕಾಗಿ ಧರಿಸಿದ ಆಭರಣವನ್ನು ನೋಡುವುದು; ಶಾಪವಿಮೋಚನೆ =ಶಾಪದಿಂದ ಮುಕ್ತಿ; ಪೆರೆ =ಚಂದ್ರ; ಅಕ್ಷಿ =ಕಣ್ಣು ; ಪ್ರಸ್ಥಾನಮಂಗಳ =ಬೀಳ್ಕೊಡಿಗೆ ಸಮಾರಂಭ; ಸಚ್ಛಿಷ್ಯ =ಒಳ್ಳೆಯ ಶಿಷ್ಯ; ಗೋರೋಚನ =ಹಳದಿಬಣ್ಣದ ಸುಗಂಧದ್ರವ್ಯ; ತೀರ್ಥಮೃತ್ತಿಕೆ =ಪವಿತ್ರವಾದ ಮಣ್ಣು; ಶಾಖಿ =ಮರ; ವೈತಾನವಹ್ನಿ =ಯಜ್ಞದ ಬೆಂಕಿ; ನೀವಾರ =ಕಾಡುಭತ್ತ; ಮೃಗಾರ್ಭಕ =ಜಿಂಕೆಮರಿ; ಪೂರೋಕ್ತ =ಹಿಂದೆ ಹೇಳಿದ; ಮದೀಯ ವಿಯೋಗ =ನನ್ನ ಅಗಲುವಿಕೆ

### II. ಈ ಪ್ರಶ್ನೆಗಳಿಗೆ ಸಂಕ್ಷಿಪ್ತವಾಗಿ ಉತ್ತರಿಸಿ.

1. ಶಕುಂತಳೆಯ ಸಖಿ ಅನುಸೂಯೆಗೆ ಉಂಟಾದ ಸಂಶಯವೇನು ?
2. ದೂರ್ವಾಸರು ಏನೆಂದು ಶಪಿಸಿದರು ?
3. ದೂರ್ವಾಸರು ಶಾಪವಿಮೋಚನೆಯು ಹೇಗೆ ಆಗುವುದೆಂದರು ?
4. ಗೌತಮಿ ಶಕುಂತಳೆಗೆ ಏನೆಂದು ಆಶೀರ್ವದಿಸಿದಳು ?
5. ಹಿಂಬಾಲಿಸುತ್ತಿದ್ದ ಜಿಂಕೆಯ ಮರಿಯನ್ನು ಕುರಿತು ಶಕುಂತಳೆಯು ಏನು ಹೇಳಿದಳು ?

**III. ಈ ಪ್ರಶ್ನೆಗಳಿಗೆ ವಿವರವಾಗಿ ಉತ್ತರಿಸಿ.**

1. ಅನುಸೂಯ ಮತ್ತು ಪ್ರಿಯಂವದ ಇವರಿಬ್ಬರಿಗೂ ನಡೆದ ಸಂಭಾಷಣೆಯನ್ನು ಬರೆಯಿರಿ.
2. ಶಕುಂತಳೆಗೆ ದೂರ್ವಾಸನು ಶಾಪಕೊಟ್ಟ ಬಗೆಯನ್ನು ವಿವರಿಸಿ.
3. ಕಣ್ವರು ರಾಜನಿಗೆ ನೀಡಿದ ಸಂದೇಶವೇನು ?
4. ಕಣ್ವರು ಶಕುಂತಳೆಗೆ ಹೇಳಿದ ಬುದ್ಧಿವಾದಗಳೇನು ?
5. ಕಣ್ವರು ಶಕುಂತಳೆಯನ್ನು ಕಳುಹಿಸಿ ಹೇಗೆ ದುಃಖಿತರಾದರು ?

**IV. ಭಾಷಾಭ್ಯಾಸ**

1. **ಈ ಪದಗಳನ್ನು ವಾಕ್ಯಗಳಲ್ಲಿ ಉಪಯೋಗಿಸಿ.**

   ವೃತ್ತಾಂತ, ಕೃತಾರ್ಥ, ಅಭಿಮತ, ರಕ್ಷಿಸು, ಪೋಷಣೆ
2. **ಈ ಪದಗಳನ್ನು ಬಿಡಿಸಿ ಸಂಧಿಯ ಹೆಸರನ್ನು ಬರೆಯಿರಿ.**

   ರಾಜರ್ಷಿ, ಅಘ್ರ್ಯೋದಕ, ಪ್ರಥಮಾಪರಾಧ, ಅಭಿಜ್ಞಾನಾಭರಣ, ನಾಮಾಂಕಿತ, ಸೂರ್ಯೋದಯ
3. **ಇವುಗಳ ವಿಗ್ರಹವಾಕ್ಯ ಮಾಡಿ ಸಮಾಸಗಳನ್ನು ಹೆಸರಿಸಿ.**

   ಮಂಗಳಮಜ್ಜನ, ಮಂಗಳಾನುಲೇಪನ, ಆನಂದಭಾಷ್ಪ, ಕಣ್ಣೀರಿಡು, ವನಜ್ಯೋತ್ಸ್ನೆ

**V. ಚಟುವಟಿಕೆ**

1. ಬಸವಪ್ಪ ಶಾಸ್ತ್ರಿಗಳು ಅನುವಾದಿಸಿದ ಅಭಿಜ್ಞಾನ ಶಾಕುಂತಳಾ ನಾಟಕವನ್ನು ಪೂರ್ತಿಯಾಗಿ ಓದಿರಿ.
2. ಈ ನಾಟಕವನ್ನು ಅಭಿನಯಿಸಿ.
3. ಕಣ್ವರ ಸಂದೇಶಗಳು ಎಲ್ಲ ಕಾಲಗಳಿಗೂ ಅನ್ವಯಿಸುವಂತಹುದು ಎಂಬುದರ ಬಗ್ಗೆ ತರಗತಿಯಲ್ಲಿ ಚರ್ಚಿಸಿ.

# ಪದ್ಯ ಭಾಗ

## 1. ಮದಲಿಂಗನ ಕಣಿವೆ

**– ಮಾಸ್ತಿ ವೆಂಕಟೇಶ ಅಯ್ಯಂಗಾರ್**

ಇನ್ನೊಂದು
ಇಂಥ ಹೆಸರಿರಬಹುದು. ಚಿಕನಾಯಕನ ಹಳ್ಳಿಯನು
ಬಿಟ್ಟು ತುಮಕೂರ ಕಡೆ ಬರುವ ದಾರಿ ಅದೊಂದು
ಕಣಿವೆಯಲಿ ಬರುತಿಹುದು; ಅದನು ಮದಲಿಂಗನ
ಕಣಿವೆಯೆನ್ನುವರು. ಈ ಬಳಿಯ ಕತೆಯನು ಕೇಳಿ
ಯಾರ ಮನವಾದರೂ ಕರಗುವುದು. ಹಿಂದೆ ಬಹು
ವರುಷಗಳ ಹಿಂದೆ ಈ ಬಳಿಯ ಒಂದೂರಿನಲಿ
ಅಕ್ಕತಂಗಿಯರು ಹುಡುಗಿಯರಿಬ್ಬರಿದ್ದರು.
ಬಹಳ ಚೆಲುವೆಯರು. ಅವರಲಿ ಹಿರಿಯ ಹುಡುಗಿಯನು
ಅವರ ಮಾವನ ಮಗ, ಮದಲಿಂಗ ಎಂಬುವನು –
ಮದಲಿಂಗ ಎನ್ನುವುದು ಇಟ್ಟಹೆಸರೋ, ಇಲ್ಲ
ಮದವಣಿಗ ಎನ್ನುವುದು ಮದಲಿಂಗನಾಯಿತೋ,
ನಾನರಿಯೆ–ಮದಲಿಂಗ ಮದುವೆಯಾದನು; ಕೆಲವು
ದಿನ ಕಳೆದಮೇಲೆ ಅವಳನು ಕರೆವುದಕೆ ಬಂದು
ಒಳ್ಳೆದಿನವ ನೋಡಿ ಹೊರಟಿಹನು. ಹೊಸದೊಂದು
ಹೆಂಡತಿಯ ಜೊತೆಗತ್ತೆ ನಾದಿನಿಯರೂ ಹೊರಟು
ಬರುತಿಹರು. ಮದಲಿಂಗ ಕಟ್ಟಾಳು; ನೋಡಲಿಕೆ
ಸಂತೋಷವಾಗುವುದು. ಅಗಲವಾಗಿರುವ ಎದೆ;
ಅಗಲವಾಗಿಹ ತುಂಬು ಮುಖ; ಹೊಳೆವ ಕಣ್ಣುಗಳು;
ನಕ್ಕನೆನೆ ತುಟಿಹಲ್ಲು ಕುಡಿಮೀಸೆಗಳ ಚೆಂದ
ಬಹುಚೆಂದ. ಹೆಂಗಸರು ಮೂವರು ಇವನನ್ನು

ಮೊದಲಿಂದ ಚೆನ್ನಾಗಿ ಬಲ್ಲವರು; ದಾರಿಯಲಿ
ಇವನೊಡನೆ ಹಾಸ್ಯಮಾಡುತ ಸರಸವಾಡುತ್ತ
ನಡೆಯುತಿರುವರು. ಇವನ ನಾದಿನಿ ಅಕ್ಕನನು
''ಅಕ್ಕಯ್ಯ ನೀನು ನಮ್ಮನು ಬಿಟ್ಟು ಹೋಗುವರೆ
''ಮನಸು ಬರುವುದೆ'' ಎಂದು ಕೇಳಿದಳು. ಅಕ್ಕನಿಗೆ
ಕಣ್ಣಿನಲಿ ನೀರು ಚಿಮ್ಮಿತು; ಮದುವೆಯಾದವಳು
ಗಂಡನೊಂದಿಗೆ ಹೋಗಬೇಕು; ಆದರೆ ತಾನು
ಚಿಕ್ಕಂದಿನಿಂದ ಒಡನಾಡಿ ಜೊತೆಯಲಿ ಬೆಳೆದು
ಜೀವದಲಿ ಜೀವವೆಂಬಂತೆ ಮೆಚ್ಚಾಗಿದ್ದ
ತಂಗಿಯನು ಬಿಡಬೇಕು. ಅವಳು ತಂಗಿಯ ನುಡಿಗೆ
ಕಂಬನಿಯ ಸುರಿಸಿದಳು. ತಾಯಿ ಕಿರಿಯಳ ಕುರಿತು
''ನಾಳೆ ಗಂಡನ ಮನೆಗೆ ನೀ ಹೋಗದಿರುವೆಯಾ
''ಎಲ್ಲರೂ ಹೋಗುವರು. ಮನಸು ಬರುವುದು'' ಎಂದು
ಹೇಳಿದಳು. ನನಗಾವ ಗಂಡನೂ ಬೇಡೆಂದು
ಹುಡುಗಿ ತಲೆಯನು ಒಂದು ಕಡೆಗೆ ಹಾರಿಸಿ ಹುಬ್ಬ
ಗಂಟಿಕ್ಕಿ ಹೇಳಿದಳು. ಮದಲಿಂಗ ನಸುನಗುತೆ
''ಬಲ್ಲೆನೀ ಆಟಗಳ, ಎಲ್ಲರೂ ಹೀಗೆಯೇ
''ಬೇಡ ಬೇಡಾ ಎಂದು ಬಾಯಲ್ಲಿ ಹೇಳುವರು,
''ಯಾವನೋ ಬಂದು ಕರೆಯುವ ಮುನ್ನ ಓಡುವರು,
''ಹುಡುಗಿಯರ ಆಟವೇ ಹೀಗೆ'' ಎಂದನು. ಅದಕೆ
ಹುಸಿನಗೆಯ ಮುಖದ ಹೊಳೆಹೊಳೆವ ಕಣ್ಣಿನ ಹುಡುಗಿ
''ಭಾವನಿಗೆ ಮದಿವ್ಯಾಗಿ ಮೂರು ದಿನವಾಗಿಹುದು,
ಆಗಲೇ ಎಲ್ಲವನು ತಿಳಿದಿರುವನಂತೆ, ಅಹ
''ಎಷ್ಟುಗಟ್ಟಿಗನೊ'' ಎಂದುಸುರಿದಳು. ಮಧ್ಯಾಹ್ನ;
ಎಲ್ಲೆಡೆಯು ಬೆಳಕು ತುಂಬಿಹುದು; ಸಂತಸದ ದಿನ;
ಹುಡುಗ ಹುಡುಗಿಯರು ಎಲೆ ಅಡಿಕೆ ಅಗಿದಿರುವರು;
ಹುಡುಗನಿಗೆ ಸರಸದಲಿ ಆಸೆ; ಈ ನಾದಿನಿಯೊ
ಸರಸದಲಿ ಪಂತವನು ಹೂಡಿ ಮಾತಾಡುವಳು;



ಪಂತವನು ಹೂಡಿ ಹರೆಯದ ಹುಡುಗಿ ನುಡಿಸುತಿರೆ
ಪಂತವಾಡದ ಜವ್ವನಿಗನುಂಟೆ? ಮದಲಿಂಗ
ನಾದಿನಿಯ ಕಡೆ ನಗುತೆ ''ಬಲ್ಲೆನೋ ಇಲ್ಲವೋ
''ನಿನಗೆ ತಿಳಿಯುವುದೆಂತು? ಅಕ್ಕನನು ಬಿಡುವುದಕೆ
''ನಿನಗಿಷ್ಟವಿಲ್ಲದಿರೆ ಬಿಡದೆ ನೀನೂ ಒಡನೆ
ಬಾ ಆಗ ತಿಳಿಯುವುದು'' ಎನಲು ನಾದಿನಿ ನಾಚಿ
ತಲೆಬಾಗಿ ತಾಯ ಕಡೆ ನೋಡಿದಳು. ಆಮೇಲೆ
ಮಾತನಾಡದೆ ಎಲ್ಲ ದಾರಿ ನಡೆಯುತಲಿಹರು.
ಅರ್ಧ ಹರಿದಾರಿ ನಡೆಯುವ ಮುನ್ನ ಹಿರಿಯಳು
''ಅಮ್ಮ, ತಂಗಿಯನೆನ್ನ ಜೊತೆಗೇ ಕಳುಹಿಸಮ್ಮ;
''ಇವರು ಒಪ್ಪುವರು; ಜೊತೆಯಲಿ ಬೆಳೆದ ತಂಗಿಯನು
''ಬಿಟ್ಟು ನಾನಿರಲಾರೆ; ಎನ್ನ ಕೈ ಹಿಡಿದವರು
''ಇವಳ ಕೈಯನು ಹಿಡಿದು ಸಾಕಲಾರರೆ?'' ಎಂದು
ಗೋಗರೆದು ಕೇಳಿದಳು. ಮದಲಿಂಗನಿಗೆ ಆಸೆ
ಮನದಿ ನಿಜವಾಗಿ ಹುಟ್ಟಿತು. ಹುಡುಗಿ ಬಹು ಚೆಲುವೆ.
ತುಟಿಯ ರಂಗು; ಮೂಗು ಮೂಗುತಿ; ಬಾವಲಿಯ
ಕಿವಿ; ಹಣೆಯ ಕುಂಕುಮದ ಬಟ್ಟು; ಭಾರದ ಹೆರಳು;
ಹೆರಳಿನಲಿ ತೊಟ್ಟ ಮಲ್ಲಿಗೆಹೂವು, ಕೊಪ್ಪು; ಇವ
ಕಂಡು ಮನಸೋತವನು; ಅತ್ತೆಯನು ನೋಡಿ
ಸುಮ್ಮನಿರ್ದನು. ಅವನ ನಾದಿನಿ ತಾಯ ಕಡೆ
ನೋಡು ನೋಡುತೆ ಸುಮ್ಮನಿಹಳು. ಇವರಿಬ್ಬರಿಗೆ
ಮನ ಒಬ್ಬರೊಬ್ಬರಲಿ ನೆಟ್ಟಿತು. ಇದು ಎಂತು
ಇಷ್ಟು ಬೇಗದೊಳಾಯಿತೆನಲು, ನಾನರಿವೆನೆ ?
ಆಗಸದಿ ವಾಯುಮಂಡಲದ ರಾಜರ ತೆರದೆ
ಗೃಧ್ರಗಳು ಗರಿಹರಡಿ ಹಾರುತಿರುವುದ ನೀವು
ನೋಡಿರುವಿರೋ? ಹೆಣ್ಣು ಗಂಡು ಗರಿಯನು ಹರಡಿ
ಮೇಲುಮೇಲಕೆ ಇನ್ನು ಮೇಲಗ್ಗಡೆಗೆ ಹಾರುವುವು;
ಒಂದರೊಡನೊಂದು ಮಾತಾಡುವುವೆ? ಸನ್ನೆಯಲಿ

ಆಸೆಯನು ತೋರುವುವೆ ? ಒಮ್ಮೊಮ್ಮೆ ಒಂದೊಂದು
ನೀಳವಾಗಿಹ ತಮ್ಮ ಸೀಳುದನಿಯಲಿ ಕೂಗಿ
ಏರಿದೆವು ಎಂದು ಜಯಘೋಷವನು ಹಾಕುವುವು.
ಇದ ನೀವು ನೋಡುವಿರಿ ಕೇಳುವಿರಿ; ಆ ಮಧ್ಯೆ
ಗಂಡುಹೆಣ್ಣಿಗೆ ಮೋಡದಿಂದ ಮೋಡಕೆ ಹರಿವ
ತೆಳುಮಿಂಚಕಿಡಿಯಂತೆ ಮನದಾಸೆ ಹರಿಯುವುದ
ನೋಡಿರುವಿರಾ? ಮಧ್ಯೆ ಹಾರುವುದ ನಿಲ್ಲಿಸುತೆ
ಅವು ಎರಡು ಒಂದು ಪೆರ್ಮರನ ತಲೆಮೇಲಿಳಿದು
ಕೆಳೆಯ ಬೆಳೆಸುವುವು. ಇದು ದೇವದೇವನ ಮಾಯೆ.
ಮದಲಿಂಗನಿಗೆ ಅವನ ನಾದಿನಿಗೆ ಯಾವಾಗ
ಮನದೊಲುಮೆಯಾಯಿತೋ ಎಂತಾಯಿತೋ ನಾನು
ಏನರಿವೆ? ಓರೊರ್ವರಿಗೆ ಮನವತೆತ್ತವರು
ತಾಯಿ ಏನೆಂಬಳೋ ಎಂದು ಯೋಚಿಸುತಿಹರು.
ನಾಲ್ಕು ಹೆಜ್ಜೆಯ ನಡೆದು ತಾಯಿ ''ನಿಮ್ಮಂತವರು
''ತುಂಬುಹರೆಯದ ಹೆಂಡಿರಿಬ್ಬರನು ಆಳುವುದು
''ಯಾರಿಂದಲಾದೀತು ಯಾವ ಮಾತಿದು ಬಿಡು''
ಎಂದು ಹಿರಿಯವಳಿಗೆಂದಳು. ಅದಕೆ ಮದಲಿಂಗ
''ಅತ್ತೆಮ್ಮ, ನಾನೇನು ಮುದುಕನೇ; ಹುಡುಗಿಯರು
''ಸಂಪ್ರದಾಯದ ಮಕ್ಕಳಲ್ಲವೇ; ನೀಕೊಡಲು
''ಇವಳನೂ ನಾಸಾಕಲಾರೆನೇ; ಇಬ್ಬರೂ
''ಎನಗೆ ಸಂಸಾರವನು ಮಾಡರೇ; ಎಲ್ಲಿಯೂ
''ಒಬ್ಬ ಗಂಡಗೆ ಹೆಂಡಿರಿಬ್ಬರಿರರೇ?'' ಎಂದು
ತವಕದೊಳಗಾಡಿದನು. ಇಷ್ಟು ಹೊತ್ತಿಗೆ ಅವರು
ಈ ಕಣಿವೆ ಇರುವ ಬಳಿ ಸೇರಿದರು. ಕಣಿವೆ ಇದು
ಬಹು ಎತ್ತರದ ಒಂದು ಗುಡ್ಡದಡಿಯನು ಬಳಸಿ
ಮತ್ತೆ ಆ ಕಡೆಗೆ ಸೇರುವುದು. ಬುಡದಲಿ ದಾರಿ
ಒಂದು ಹರಿದಾರಿಯಾಗುವುದು. ಗುಡ್ಡವನೇರಿ
ಆಕಡೆಗೆ ಇಳಿದು ದಾರಿಯ ಮತ್ತೆ ಸೇರುವರೆ



ಅದರೊಳಾರರಲೊಂದು ಪಾಲಿಹುದು. ಕೆಚ್ಚೆದೆಯ
ಗಡಸುಗಾರರು ಕೂಡ ಬಳಸಿಯೇ ಹೋಗುವರು;
ಗುಡ್ಡವೇರುವುದಷ್ಟು ಕಷ್ಟ. ಹುಡುಗಿಯರಮ್ಮ
''ಸಂಪ್ರದಾಯದ ಮಕ್ಕಳಾದರೇನಪ್ಪಯ್ಯ,
''ಬಾಳುವರೆ ಸರಿಯಾದ ಗಂಡನೇಯಿರಬೇಕು.
ನೀನಿವಳನೂ ಮದುವೆಯಾಗಲೆಳಸುವುದಾಗೆ
''ಹಿಂದು ಹಿಂದಕೆ ನಡೆದು ಹತ್ತಿ ಗುಡ್ಡವನೇರಿ
''ಆ ಕಡೆಗೆ ಇಳಿದು ದಾರಿಯ ಸೇರೆ ಒಪ್ಪುವೆನು.
''ಏರಿ ಇಳಿಯುವೆಯ'' ಎಂದಳು. ಅವಳು ಹೇಳಿದುದು
ಮೂರುಪಾಲಿಗೆ ಸರಸ; ಸುಮ್ಮನಿರದಾಡಿದಳು.
ಮದಲಿಂಗ ಕಟ್ಟಾಳು; ಹರೆಯದವ; ಹುಡುಗಿಯನು
ಪಡೆಯುವುದು ಸಾಧ್ಯವೆನೆ ಪಡೆವುದಕೆ ಆಸೆ ಇದೆ;
ಅವರಮ್ಮ ಬೇರೆ ಈ ಪಂತವನು ಹೂಡಿದಳು.
ಪಂತವನು ಹೂಡಿ ಹೆಂಗಸು ಮಾತನಾಡಿಸಲು
ಪಂತಕೊಪ್ಪದ ಜವ್ವನಿಗನುಂಟೆ? ಮದಲಿಂಗ
ಒಪ್ಪಿದನು; ''ಗುಡ್ಡವನು ಹಿಂದು ಹಿಂದಕೆ ಏರಿ
''ಇಳಿದು ಬರುವೆನು. ಆಗ ಹುಡುಗಿಯನು ಕೊಡು ಎನಗೆ.
''ದಣಿದುನಾಬರುವ ವೇಳೆಗೆ ಇವಳ ಕೈಯಿಂದ
''ಈ ಚೊಂಬುನೀರಹೊಯ್ಸಿಸಿ ಕೈಗೆ ಇವಳಿಂದ
''ಕುಡಿವುದಕೆನೀರ ಕೊಡಿಸು'' ಎಂದು ಒಂದುಸಲ
ನಾದಿನಿಯ ಕಡೆ ನೋಡಿ ಬೆನ್ನಗುಡ್ಡದ ಕಡೆಗೆ
ತಿರುಗಿಸುತೆ ಏರ ತೊಡಗಿದನು. ಬಹುಬಿಸಿಲು;
ಬಹು ಎತ್ತರದ ಗುಡ್ಡ; ಅದನೇರತೊಡಗಿದನು.
ಸ್ವಲ್ಪ ಹತ್ತಿದಮೇಲೆ ಅತ್ತೆ ಅಳಿಯನ ನೋಡಿ
ಈ ಬಿಸಿಲಿನಲಿ ಹತ್ತಿ ಇಳಿದು ಇವ ಬದುಕುವನೆ
ಎಂದು ಬಹುಭಯದಿಂದ ''ಏರಿದುದು ಸಾಕಪ್ಪ,
''ಇಳಿದು ಬಾರಪ್ಪಯ್ಯ'' ಎಂದು ಹುಯಿಲಿಟ್ಟಳು.
ಮದಲಿಂಗ ''ಇಳಿದು ಆಕಡೆ ಬರುವೆ, ಕುಡಿವುದಕೆ

‘‘ನೀರಿಟ್ಟುಕೊಂಡಿರಿ’’ ಎಂದು ನುಡಿಯುತೆ ಅಂತೆ
ಏರಿಏರಿ ಹೋದ. ತಾಯಿಯೂ ಮಕ್ಕಳೂ
‘‘ಅಯ್ಯೊ ಸರಸದ ಮಾತು ವಿರಸವಾಯಿತು’’ ಎಂದು
ಬೇಗಬೇಗನೆ ನಡೆದು ಗುಡ್ಡದಡಿಯನುಬಳಸಿ
ಆ ಕಡೆಯ ಸೇರಿದರು. ಬಿಸಿಲಿಂದೆ ಬಹುದಾಹ.
ಇರುವುದೊಂದೇ ಚೊಂಬುನೀರು. ಅಲ್ಲೆಲ್ಲಿಯೂ
ನೀರೊಂದು ತೊಟ್ಟಿಲ್ಲ. ಸೋತಿರುವ ಅಮ್ಮನಿಗೆ
ಹಿರಿಮಗಳು ‘‘ಅಮ್ಮ ನೀ ಸ್ವಲ್ಪ ಕುಡಿ’’ ಎಂದಳು.
ಕಿರಿಮಗಳು ‘‘ತಡೆಯಮ್ಮ, ನಾವಿಷ್ಟು ಸೋತಿರಲು
ಭಾವನಿನ್ನೆಷ್ಟು ಸೋಲುವನೊ, ಅವನಿಗೆ ಕೊಟ್ಟು
‘‘ಮಿಕ್ಕದ್ದ ನೀಕುಡಿಯುವೆಂತೆ’’ ಎಂದಳು; ತಾಯಿ
‘‘ಅಮ್ಮಯ್ಯ, ನೀನು ಹೇಳುವುದು ದಿಟ, ಗುಡ್ಡವನು
‘‘ಬಳಸಿ ಬಂದಿಹ ನಮಗೆ ಇಷ್ಟು ದಾವರವಾಗೆ
‘‘ಏರಿ ಬರುವನಿಗೆಷ್ಟು ದಾವರವೊ! ಬರಲಮ್ಮ,
‘‘ಅವನ ಕೈಗಷ್ಟು ನೀರನು ಹಾಕು, ಕುಡಿವುದಕೆ
‘‘ಕೊಡು, ಮಿಕ್ಕ ನೀರ ನಾ ಕುಡಿಯುವೆನು’’ ಎಂದಳು.
ಮದಲಿಂಗ ಬರುವುದಕೆ ಅವರಿಂತು ಕಾದಿಹರು.
ಈಗಲೇ ಕತೆ ಬಹಳ ದೊಡ್ಡದಾಯಿತು ಇದು;
ಇನ್ನವನು ಹತ್ತಿದುದು ಇಳಿದುದನು ಬಣ್ಣಿಸೆನು.
ನಡುಬೇಸಗೆಯಲಿ ನಡುಹಗಲಿನಲಿ ಗುಡ್ಡವನು
ಹಿಂದು ಹಿಂದಕೆ ಹತ್ತಿ ಹಿಂದುಹಿಂದಕೆ ಇಳಿದು
ದಾರಿಯನು ಸೇರುವರೆ, ಬಳಲಿದನು, ಬೆಮರಿದನು,
ಬಸವಳಿದು ಸೋತನೆಂಬುದ ನಿಮಗೆ ನಾನೀಗ
ಹೇಳಿಕೊಡಬೇಕೆ? ಮದಲಿಂಗ ಬಹು ಬಾಯಾರಿ
ಬಹು ಹೊತ್ತು ಕಳೆದು ದಾರಿಗೆ ಬಂದು ಸೇರಿದನು.
ಗಂಟಲಲಿ ತೇವ ಒಣಗಿದೆ. ಜೀವ ತೇಲುತಿದೆ.
ದಾರಿಯನು ಸೇರಿ ನಾದಿನಿಯ ಕಡೆ ನೋಡಿದನು.
ಮಾತನಾಡಲು ಬಾಯಿಬರದು; ಸನ್ನೆಯಮಾಡಿ



ನೀರಕೇಳುತೆ ಹುಡುಗ ಗೆಲ್ಲ ಸಂತಸದಿಂದ
ಸ್ವಲ್ಪ ನಗುವನು ತೋರಿ ಅತ್ತೆಯನು ನೋಡುತ್ತೆ
ಕುಡಿವುದಕೆ ಬೊಗಸೆಹಿಡಿದನು. ಅವನ ನಾದಿನಿ
ತನ್ನ ಚೆನ್ನಿಗ ಗೆದ್ದ ಸಂತೋಷ ಕಣ್ಣಿನಲಿ
ಗೆದ್ದವನಿಗೊಂದು ಮರ್ಯಾದೆಯನು ನೀಡಲಿಕೆ
ಮುತ್ತುಗಳ ತಂದಂತೆ ಕಣ್ಣೀರು ತಲೆದೋರೆ
ಬಹು ತವಕಪಡುತೆ ಚೊಂಬಿನ ನೀರ ತಂದಳು.
ಅವನ ಕೈಯಲಿ ಅದನು ಸುರಿಯೆ ಬಗ್ಗಿಸಿದಳು.
ಸಂತಸದ ಆತುರದಿ ಅದಬಗ್ಗಿಸುವುದರಲಿ
ಕೈಜಾರಿ ಅದನು ಕೆಡವಿದಳು. ನೀರೆಲ್ಲವೂ
ಚೆಲ್ಲಿಹೋಯಿತು. ದಾಹದಿಂದುಸುರು ತೇಲುತಿರೆ
ಮದಲಿಂಗ ಖೇದದಿಂದೊಮ್ಮೆ ಅವಳನು ನೋಡಿ
ಅಲ್ಲಿ ಮಲಗಿದನು. ‘‘ಅಯ್ಯೋ’’ ಎಂದು ಅವರತ್ತೆ
ಬಂದು ಬಳಿಯಲಿ ಕುಳಿತು ಸೆರಗಿನಲಿ ಬೀಸಿದಳು.
ಹಿರಿಹುಡುಗಿ ಎನ್ನ ಗಂಡನಕೊಂದೆ ನೀನೆಂದು
ಅಮ್ಮನನು ಬಯ್ದಳು; ತಂಗಿಯನು ಬಯ್ದಳು;
ಎನ್ನ ಸುಖವನು ನೋಡಿ ಧರಿಸಲಾರದೆ ನೀನು ಇವನ
ಕೊಲ್ಲಲು ನೀರ ಚೆಲ್ಲಿದೆಯ ಎಂದಳು.
ತಂಗಿ ಒಂದಾದರೂ ಮಾತನಾಡದೆ ಚೊಂಬ
ಹಿಡಿದೆತ್ತಿ ನೀರ ತರಬೇಕೆಂದು ಹತ್ತಿರದ
ಊರು ಎಲ್ಲಿಹುದೊ ಎಂದೋಡಿದಳು. ಮದಲಿಂಗ
ಅವಳು ಬಹ ಮುನ್ನವೇ ಮಡಿದನಾ ಕಲ್ಲಿನಲಿ.
ಇನ್ನಾದುದನು ಹೇಳಲೇಕೆ? ಬೆಳೆಯುವ ಪೈರು
ಭಾದ್ರಪದದೊಳೆ ಸುಟ್ಟು ಹೋಯಿತು. ಮದಲಿಂಗ
ಆ ಕಣಿವೆಗಂದು ಹೆಸರನು ಕೊಟ್ಟ, ಆ ದಿನದ
ಖೇದವನು ನೋಡಿ ಸಂಕಟಪಟ್ಟ ಕಲ್ಲುಗಳು
ಈಗಳೂ ಮರುಗುವವೊಲಿದೆ. ಇಲ್ಲಿ ಮದಲಿಂಗ
ಈಗಳೂ ದಾಹದಲಿ ಅಲೆಯುತಿಹನೆಂದು ಜನ

ಆಡಿಕೊಳ್ಳುವರು; ಒಮ್ಮೊಮ್ಮೆ ಕೆಲಕೆಲವರು
ಕಾಣುವನೊ ಏನೊ ಎನ್ನುವ ಭಯದಿ ನಡೆಯುತ್ತ
ಕಂಡನೆಂಬಂತೆ ನೆನೆಯುವರು ಭಯಪಡುವರು.

## ಕವಿ-ಕಾವ್ಯ ವಿಚಾರ

ಮಾಸ್ತಿ ಕನ್ನಡದ ಆಸ್ತಿ. ಶ್ರೀನಿವಾಸ ಕಾವ್ಯನಾಮದಿಂದ, ಸಣ್ಣ ಕತೆಗಳ ಜನಕರೆಂದು ಸುಪ್ರಸಿದ್ಧರಾದ ಮಾಸ್ತಿ ವೆಂಕಟೇಶ ಅಯ್ಯಂಗಾರ್ **6-6-1891** ರಂದು ಕೋಲಾರ ಜಿಲ್ಲೆಯ ಮಾಲೂರು ತಾಲೂಕಿನ ಮಾಸ್ತಿ ಎಂಬಲ್ಲಿ ಹುಟ್ಟಿದರು. ಬೆಂಗಳೂರು ಸೆಂಟ್ರಲ್ ಕಾಲೇಜಿನಿಂದ ಬಿ.ಎ. ಪದವಿಯನ್ನೂ ಮದರಾಸಿನ ಪ್ರೆಸಿಡೆನ್ಸಿ ಕಾಲೇಜಿನಿಂದ ಎಂ.ಎ. (ಇಂಗ್ಲಿಷ್) ಪದವಿಯನ್ನೂ **1913** ರಲ್ಲಿ ಮೈಸೂರು ಸಿವಿಲ್ ಸರ್ವಿಸ್ ಪರೀಕ್ಷೆಯಲ್ಲಿ ಮೊದಲ ಸ್ಥಾನವನ್ನೂ ಪಡೆದು ಮೈಸೂರು ಸರ್ಕಾರದಲ್ಲಿ ಅಸಿಸ್ಟೆಂಟ್ ಕಮೀಶನರ್ ಆಗಿ ಕೆಲಸಕ್ಕೆ ಸೇರಿ ಬಳಿಕ ರಾಜ್ಯದ ನಾನಾ ಭಾಗಗಳಲ್ಲಿ ಉನ್ನತ ಹುದ್ದೆಗಳಲ್ಲಿ ಸೇವೆ ಸಲ್ಲಿಸಿ **1944** ರಲ್ಲಿ ಸ್ವಇಚ್ಛೆಯಿಂದ ನಿವೃತ್ತರಾದರು. **1942** ರಲ್ಲಿಯೇ ಮೈಸೂರಿನ ಮಹಾರಾಜರು ಇವರಿಗೆ 'ರಾಜ ಸೇವಾಸಕ್ತ' ಎಂಬ ಬಿರುದನ್ನು ನೀಡಿದರು. **1910-11** ರ ಸುಮಾರಿನಲ್ಲಿಯೇ ಅವರ ಚೊಚ್ಚಲ ಕತೆ 'ರಂಗನ ಮದುವೆ' ಬೆಳಕಿಗೆ ಬಂತು. ಈವರೆಗೆ ಮಾಸ್ತಿಯವರು ಬರೆದ **90**ಕ್ಕೂ ಹೆಚ್ಚು ಕತೆಗಳು **14** ಸಂಪುಟಗಳಲ್ಲಿ ಪ್ರಕಟವಾಗಿವೆ. ಅವರಿಗೆ ಕನ್ನಡ ಕಥಾ ಬ್ರಹ್ಮ, ಸಣ್ಣ ಕತೆಗಳ ಪಿತಾಮಹ ಎಂದೆಲ್ಲಾ ಹೆಸರಿದೆ. **1944** ರಲ್ಲಿ 'ಜೀವನ' ಪತ್ರಿಕೆಯನ್ನು ಪ್ರಾರಂಭಿಸಿ ಅದನ್ನು **21** ವರ್ಷಗಳವರೆಗೆ ನಡೆಸಿದರು. ಅಂದಿನ ಹಲವಾರು ಉದಯೋನ್ಮುಖ ಕವಿಗಳ ಕೃತಿಗಳನ್ನು ಪ್ರಕಟಿಸಿ ಅವರನ್ನು ಪ್ರೋತ್ಸಾಹಿಸಿದರು. ಸಣ್ಣಕತೆ, ಕಾವ್ಯ, ಕಾದಂಬರಿ, ನಾಟಕ, ವಿಮರ್ಶೆ ಮುಂತಾದ ಹಲವು ಪ್ರಕಾರಗಳಲ್ಲಿ ಮಾಸ್ತಿಯವರು ಕೃತಿಗಳನ್ನು ರಚಿಸಿದ್ದಾರೆ. ಬಿನ್ನಹ, ಅರುಣ, ತಾವರೆ, ಮಲಾರ, ಸಂಕ್ರಾಂತಿ ಮೊದಲಾದುವು ಅವರ ಕವನ ಸಂಕಲನಗಳು. ಕಥನ ಕವನಗಳಲ್ಲಿ ಗೌಡರಮಲ್ಲಿ, ಸೋಜಿಗದ ಹೊಳಲು, ದೇಶಾಚಾರ, ಗುಂಡುಸೂಜಿ, ಮದಲಿಂಗನ ಕಣಿವೆ ಹೆಸರಿಸುವಂತವು. ಸರಳ ರಗಳೆಯಲ್ಲಿ ಬರೆದ 'ಶ್ರೀರಾಮ ಪಟ್ಟಾಭಿಷೇಕ' ರಾಮಾಯಣದ ಬೃಹತ್ ಕೃತಿ. ಶಾಂತಾ, ಮಂಜುಳಾ, ಕಾಕನಕೋಟೆ,



ಯಶೋಧರಾ, ಕಾಳಿದಾಸ ಮೊದಲಾದುವು ಅವರ ನಾಟಕಗಳು. ಅವರು ಷೇಕ್ಸ್‌ಪಿಯರನ ಹಲವು ನಾಟಕಗಳನ್ನು ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಮಾಸ್ತಿಯವರ ಆತ್ಮಕತೆ 'ಭಾವ' ಮೂರು ಸಂಪುಟಗಳಲ್ಲಿ ಪ್ರಕಟವಾಗಿದೆ. ಚಿಕವೀರ ರಾಜೇಂದ್ರ ಹಾಗೂ ಚನ್ನಬಸವ ನಾಯಕ ಅವರ ಪ್ರಸಿದ್ಧ ಕಾದಂಬರಿಗಳು. ಚಿಕವೀರ ರಾಜೇಂದ್ರ ಕೃತಿಗೆ **1983** ರಲ್ಲಿ ಜ್ಞಾನಪೀಠ ಪ್ರಶಸ್ತಿ ದೊರೆತಿದೆ.

'ಮದಲಿಂಗನ ಕಣಿವೆ' ಅವರ ಪ್ರಮುಖ ಕಥನ ಕವನಗಳಲ್ಲಿ ಒಂದಾಗಿದೆ. ಈ ಕವನದಲ್ಲಿ ಹಳ್ಳಿಯವರ ಮುಗ್ಧ ಭಾವನೆಗಳು ಪ್ರತಿಬಿಂಬಿತವಾಗಿವೆ. ಅವರ ಸಹಜವಾದ ಮಾತಿನ ಧಾಟಿ, ಅಷ್ಟೇ ಸಹಜವಾದ ಅರ್ಥ ಗಾಂಭೀರ್ಯ ನಮ್ಮ ಮನಸ್ಸನ್ನು ತಟ್ಟುತ್ತದೆ. ಮದಲಿಂಗನು ಮದುವೆಯಾದ ಹೊಸದರಲ್ಲಿ ತನ್ನ ಹೆಂಡತಿಯನ್ನು ಕರೆದುಕೊಂಡು ಬರುವಾಗ ಜತೆಗೆ ಅತ್ತೆ ನಾದಿನಿಯರು ಬರುತ್ತಾರೆ. ಸಹಜವಾದ ಸಲುಗೆಯಿಂದ ಸರಸವಾಡುತ್ತಾ ನಡೆದಾಗ ಸಂಭವಿಸಿದ ದುರಂತ ಘಟನೆಯೇ ಕವನದ ವಸ್ತುವಾಗಿದೆ. ಮದಲಿಂಗನ ಮನಸ್ಸು ನಾದಿನಿಯಲ್ಲಿ ನೆಡುತ್ತದೆ. ಆಕೆಯೂ ಮದಲಿಂಗನ ಕಡೆಗೆ ಒಲಿಯುತ್ತಾಳೆ. ಈ ರೀತಿಯ ಪರಸ್ಪರ ಒಲುಮೆ ಪಂದ್ಯವೊಂದರ ವಿಷಯಕ್ಕೆ ಎಡೆ ಮಾಡುತ್ತದೆ. ಅದುವೇ ಕೊನೆಗೆ ಅನರ್ಥಕ್ಕೆ ಕಾರಣವಾಗುತ್ತದೆ. ಆಡುಮಾತಿಗಿಂತ ಕವಿತೆ ಬೇರೆಯಲ್ಲವೆಂಬಂತೆ ಅದನ್ನು ಹೇಳುವ ಕವಿಯ ಕೌಶಲ ಮತ್ತು ಪಾತ್ರಗಳಲ್ಲಿ ಕಂಡೂ ಕಾಣದಂತೆ ಸುಳಿಯುವ ಭಾವನೆಗಳನ್ನು ನಿರೂಪಿಸುವ ಕಲೆ ನಮ್ಮ ಗಮನವನ್ನು ಬಹಳವಾಗಿ ಸೆಳೆಯುತ್ತದೆ. ಕಥನ ಕವನದ ಪ್ರತಿಯೊಂದು ಅಂಶವೂ ಆಕರ್ಷಕವಾಗಿದೆ. ಇಲ್ಲಿನ ದುರಂತ ಓದುಗರ ಮನ ಕರಗಿಸುವಷ್ಟು ತೀವ್ರವಾಗಿದೆ.

## I. ಕಠಿಣ ಪದಗಳ ಅರ್ಥ

ಕಣಿವೆ =ಕಂದರ, ಎರಡು ಬೆಟ್ಟಗಳ ನಡುವಿನ ಆಳವಾದ ಪ್ರದೇಶ; ಮದುವಣಿಗ =ಮದುಮಗ, ವರ; ಕಟ್ಟಾಳು =ಶೂರ, ಗಟ್ಟಿಗ; ಪಂತ =ಪಂದ್ಯ; ಹರಿದಾರಿ =ಮೂರು ಮೈಲುಗಳ ಒಂದು ಅಳತೆ; ರಂಗು =ಬಣ್ಣ, ಚೆಲುವು; ಗೃಧ್ರ =ಹದ್ದು; ನೀಳ =ಉದ್ದ ; ಪೆರ್ಮರ =ದೊಡ್ಡಮರ; ತವಕ =ಅವಸರ, ಆತುರ; ಹುಯಿಲು =ಗಲಾಟೆ, ಬೊಬ್ಬೆ ; ದಿಟ =ಸತ್ಯ, ನಿಜ; ದಾವರ =ಬಾಯಾರಿಕೆ,

ಬಯಕೆ; ತೇವ =ಒದ್ದೆ ; ಖೇದ =ದುಃಖ; ಧರಿಸಲಾರದೆ =ತೊಡಲಾರದೆ, ಹೊರಲಾರದೆ;

## II. ಕೆಳಗಿನ ಪ್ರಶ್ನೆಗಳಿಗೆ ಸಂಕ್ಷಿಪ್ತವಾಗಿ ಉತ್ತರಿಸಿ.

1. ಮದಲಿಂಗನ ಕಣಿವೆ ಎಲ್ಲಿದೆ ?
2. ಮದಲಿಂಗನ ವ್ಯಕ್ತಿತ್ವ ಪದ್ಯದಲ್ಲಿ ಹೇಗೆ ನಿರೂಪಿತವಾಗಿದೆ ?
3. ಮದಲಿಂಗನು ಹುಡುಗಿಯರ ಆಟವನ್ನು ಹೇಗೆ ವಿವರಿಸಿರುವನು ?
4. ನಾದಿನಿಯ ಅಂದ ಚಂದಗಳು ಹೇಗೆ ವರ್ಣಿತವಾಗಿವೆ ?
5. ಸಂತಸದಿಂದ ನಾದಿನಿಯು ಮಾಡಿದ ಅಚಾತುರ್ಯದ ಘಟನೆಯೇನು?
6. ಮದಲಿಂಗನ ಹೆಂಡತಿಯು ತನ್ನ ತಂಗಿ, ತಾಯಿಯರನ್ನು ಏನೆಂದು ಬಯ್ಯುವಳು ?

## III. ಕೆಳಗಿನ ಪ್ರಶ್ನೆಗಳನ್ನು ವಿವರವಾಗಿ ಉತ್ತರಿಸಿ.

1. ಮದಲಿಂಗ ಹಾಗೂ ಆತನ ನಾದಿನಿಯ ನಡುವೆ ಪಂದ್ಯಕ್ಕೆ ಕಾರಣವಾಗುವ ಸಂಭಾಷಣೆಯನ್ನು ಬರೆಯಿರಿ.
2. ಮದಲಿಂಗ ಹಾಗೂ ನಾದಿನಿಯರೊಳಗೆ ಪ್ರೀತಿ ಹೇಗೆ ಅಂಕುರವಾಯಿತು ?
3. ಇಲ್ಲಿನ ಪಾತ್ರಗಳು ಬಿಸಿಲ ಬೇಗೆಯಲ್ಲಿ ಹೇಗೆ ಕಂಗಾಲಾಗಿವೆ ಎಂಬುದನ್ನು ವಿವರಿಸಿರಿ.
4. 'ಮದಲಿಂಗನ ಕಣಿವೆ' - ಕಥನ ಕವನದ ಸ್ವಾರಸ್ಯವನ್ನು ನಿಮ್ಮ ಮಾತಿನಲ್ಲಿ ಬರೆಯಿರಿ.



## IV. ಕೆಳಗಿನ ವಾಕ್ಯಗಳ ಸಂದರ್ಭ ಸ್ವಾರಸ್ಯ ಬರೆಯಿರಿ.

1. 'ಅಕ್ಕಯ್ಯ ನೀನು ನಮ್ಮನು ಬಿಟ್ಟು ಹೋಗುವರೆ ಮನಸು ಬರುವುದೆ'
2. 'ಎಲ್ಲರೂ ಹೋಗುವರು, ಮನಸ್ಸು ಬರುವುದು'
3. 'ಹುಡುಗಿಯರ ಆಟವೇ ಹೀಗೆ'
4. ಇದು ದೇವದೇವನ ಮಾಯೆ.
5. ಸರಸದ ಮಾತು ವಿರಸವಾಯಿತು.
6. ಪಂತಕೊಪ್ಪದ ಜವ್ವನಿಗನುಂಟೆ ?
7. ಮುತ್ತುಗಳ ತಂದಂತೆ ಕಣ್ಣೀರು ತಲೆದೋರೆ.
8. ಬೆಳೆಯುವ ಪೈರು ಭಾದ್ರಪದದೊಳೆ ಸುಟ್ಟು ಹೋಯಿತು.

## V. ಭಾಷಾಭ್ಯಾಸ

1. ಕೆಳಗಿನ ಪದಗಳನ್ನು ಬಿಂಗಡಿಸಿ ಸಂಧಿಯನ್ನು ಹೆಸರಿಸಿ.

ಕತೆಯನ್ನು, ಹೊಸದೊಂದು, ಒಮ್ಮೊಮ್ಮೆ, ಪಂತಕೊಪ್ಪದ, ಕಣಿವೆಗಂದು

2. ಕೆಳಗಿನ ಪದಗಳನ್ನು ಉಪಯೋಗಿಸಿ ವಾಕ್ಯಗಳನ್ನು ರಚಿಸಿರಿ.

ಕಟ್ಟಾಳು, ನೀಳ, ತವಕ, ಹುಯಿಲು, ಕೈಜಾರು, ದಾವರ, ಖೇದ

3. ಕೆಳಗಿನ ಪದಗಳ ವಿರುದ್ಧ ಪದಗಳನ್ನು ಬರೆಯಿರಿ.

ವಿರಸ, ಸುಖ, ಬಗ್ಗು, ಏರು

## VI. ಚಟುವಟಿಕೆ

1. ಕನ್ನಡದ ಇತರ ಪ್ರಮುಖ ಕವಿಗಳ ಕಥನ ಕವನಗಳನ್ನು ಓದಿರಿ.
2. 'ಮದಲಿಂಗನ ಕಣಿವೆ' ಕಥನ ಕವನವನ್ನು ನಾಟಕ ರೂಪದಲ್ಲಿ ಬರೆದು ಅಭಿನಯಿಸಿರಿ.

---



# 2. ಮನೆ ತುಂಬಿಸುವುದು

– ವಿ. ಸೀತಾರಾಮಯ್ಯ

ಎಮ್ಮ ಮನೆಯಂಗಳದಿ ಬೆಳೆದೊಂದು ಹೂವನ್ನು
ನಿಮ್ಮ ಮಡಿಲೊಳಗಿಡಲು ತಂದಿರುವೆವು,
ಕೊಳ್ಳಿರೀ ಮಗುವನ್ನು ಎಮ್ಮ ಮನೆ ಬೆಳಕನ್ನು
ನಿಮ್ಮ ಮನೆಯನು ತುಂಬಲೊಪ್ಪಿಸುವೆವು.

ಮರೆ ಮೋಸ ಕೊಂಕುಗಳನರಿಯಳಿವಳು;
ಇನಿಸವಿಶ್ವಾಸವನು ಕಂಡರಿಯಳು,
ಕಷ್ಟಗಳ ಸೈಸದೆಯೆ ಕಾಣದೆಯೆ ಬೆಳೆದವಳು
ಸಲಹಿಕೊಳಿರೀ ಮಗಳನೊಪ್ಪಿಸುವೆವು.

ಕಠಿಣಗಳ ನೆಳಲ್ ಸುಳಿಯಲದುರಿ ಬಾಡುವಳು
ಹಿರಿ ಮಂಜು ಬಳಲಿಸಿದ ಹೂವಿನಂತೆ,
ಸುಖದಲ್ಲಿ ದುಃಖದಲ್ಲಿ ಎಲ್ಲ ದೆಸೆಯಿರವಿನಲಿ
ನಿಮ್ಮ ಪಾಲಿಗೆ ನಿಲುವ ಕುವರಿಯಿವಳು.

ನಿಮಗಿವಳು ನೀಡುತಿಹ ಹಾಲುಹಣ್ಣುಗಳ ಸವಿ
ಎಂದೆಂದು ಅವಳ ನಡೆ ನಿಮ್ಮ ಪರವಾಗಿ,
ಎಮ್ಮ ಕುಲ ಮನೆಗಳಿಗೆ ಹೊರಗಾಗಿ ಬಂದಿಹಳು
ನಿಮ್ಮ ಕುಲವನು ಬೆಳಸೆ ಬಂದಿರುವಳು.

ನಿನ್ನ ಮಡದಿಯ ಕೊಂಡು ಸುಖಿಯಾಗಿರೌ ಮಗುವೆ
ನಿಮ್ಮ ಸೊಸೆ-ಸೋದರಿಯು-ಕೊಳ್ಳಿರಿವಳ,
ನಿಮ್ಮ ಕೀರುತಿ ಬೆಳೆಯಲಿವಳ ಸೌಜನ್ಯದಲಿ
ನಿಮ್ಮ ಕುಲ ಶೀಲಗಳು ಪರಿಮಳಿಸಲಿ.

ಹೆತ್ತವರ ಮನೆಗಿಂದು ಹೊರಗಾದೆ, ನೀ ಮಗಳೆ,
ಈ ಮನೆಯೆ, ಈ ಇವರೆ ನಿನ್ನವರು ಮುಂದೆ;

ಇವರೆ ತಾಯ್ಗಳು, ಸಖರು, ಭಾಗ್ಯವನು ಬೆಳೆಸುವರು
ಇವರ ದೇವರೆ ನಿನ್ನ ದೇವರುಗಳು.

ನಿಲ್ಲು ಕಣ್ಣೊರಸಿಕೊಳು, ನಿಲ್ಲುತಾಯ್, ಹೋಗುವೆವು;
ತಾಯ್ವಿರಾ, ತಂದೆಯಿರ, ಕೊಳ್ಳಿರಿವಳ;
ಎರಡು ಮನೆಗಳ ಹೆಸರು ಖ್ಯಾತಿಗಳು ಉಳಿವಂತೆ
ತುಂಬಿದಾಯುಷ್ಯದಲಿ ಬಾಳಿ ಬದುಕು.

## ಕವಿ-ಕಾವ್ಯ ವಿಚಾರ

ನವೋದಯ ಸಾಹಿತ್ಯದ ಆರಂಭದ ಸಾಹಿತಿಗಳಲ್ಲಿ ಪ್ರೊ। ವಿ. ಸೀತಾರಾಮಯ್ಯನವರು ಪ್ರಮುಖರು. ಮೈಸೂರು ವಿಶ್ವವಿದ್ಯಾನಿಲಯದ ನಿವೃತ್ತ ಕನ್ನಡ ಪ್ರಾಧ್ಯಾಪಕರಾದ ಇವರ ಕಾವ್ಯನಾಮ ವಿ.ಸೀ. ಕನ್ನಡ ಭಾಷೆಯಲ್ಲಿ ಅಸಾಧಾರಣ ಪಂಡಿತರಾಗಿರುವಂತೆ ಇಂಗ್ಲಿಷ್‌ನಲ್ಲಿಯೂ ಇವರು ಆಳವಾದ ಪಾಂಡಿತ್ಯವನ್ನು ಹೊಂದಿದ್ದರು. ಕಳೆದ ಶತಮಾನದ ಎರಡನೆಯ ದಶಕದಿಂದಲೇ ಸಾಹಿತ್ಯ ರಚನೆ ಕೈಗೊಂಡ ಕನ್ನಡದ ಹಿರಿಯ ಸಾಹಿತಿಗಳಾದ ವಿ.ಸೀ. ಅವರು ದೀಪಗಳು, ನೆಳಲು ಬೆಳಕು, ದ್ರಾಕ್ಷಿ-ದಾಳಿಂಬ ಮೊದಲಾದ ಕವನ ಸಂಗ್ರಹಗಳನ್ನೂ ಆಗ್ರಹ ಹಾಗೂ ಸೊಹ್ರಾದ್ ರುಸ್ತುಂ ಎಂಬ ನಾಟಕಗಳನ್ನೂ, ಪಂಪಾಯಾತ್ರೆ, ಕವಿದೃಷ್ಟಿ ಎಂಬ ಪ್ರಬಂಧ ಸಂಕಲನಗಳನ್ನೂ ರಚಿಸಿರುತ್ತಾರೆ. 1953 ರಲ್ಲಿ ಕುಮಟದಲ್ಲಿ ಜರುಗಿದ ಸಾಹಿತ್ಯ ಸಮ್ಮೇಳನಕ್ಕೆ ಇವರು ಅಧ್ಯಕ್ಷರಾಗಿದ್ದರು. 1922 ರಲ್ಲಿ ಕಾರವಾರದಲ್ಲಿ ನಡೆದ ಕವಿ ಸಮ್ಮೇಳನಕ್ಕೂ ಅಧ್ಯಕ್ಷರಾಗಿದ್ದರು. ಹೊಸಗನ್ನಡದ ಮೇಲ್ಮಟ್ಟದ ಕವಿಗಳಲ್ಲೊಬ್ಬರಾದ ಇವರು ಉತ್ತಮ ಉಪನ್ಯಾಸಕರೂ ಆಗಿದ್ದರು. ಬೆಂಗಳೂರು ಆಕಾಶವಾಣಿ ಕೇಂದ್ರದ ಕನ್ನಡ ಕಾರ್ಯಕ್ರಮಗಳ ಪ್ರಮುಖ ನಿರ್ದೇಶಕರಾಗಿಯೂ ಇವರು ಕಾರ್ಯ ನಿರ್ವಹಿಸಿರುತ್ತಾರೆ. ವಿ.ಸೀ. ಯವರು ಬಹುಮುಖ ಪ್ರತಿಭೆಯ ಶ್ರೇಷ್ಠ ವ್ಯಕ್ತಿ.

'ಮನೆ ತುಂಬಿಸುವುದು' ಕವನವು ಮದುವೆಯಾದ ಹೆಣ್ಣನ್ನು ಗಂಡನ ಮನೆಗೆ ಕಳುಹಿಸಿಕೊಡುವಾಗ ಹಿಂದಿನಿಂದಲೂ ಹಾಡುತ್ತಾ ಬಂದಿರುವ ಸಂಪ್ರದಾಯದ ಹಾಡಿನ ಧಾಟಿಯಲ್ಲಿದೆ. ಬಾಯಿಂದ ಬಾಯಿಗೆ, ಪೀಳಿಗೆಯಿಂದ ಪೀಳಿಗೆಗೆ



ಶ್ರುತಿಬದ್ಧವಾಗಿ ಜನತೆಯಲ್ಲಿ ಬೆರೆತು ಹೋಗಿರುವ ಇಂತಹ ಜನಪದ ಹಾಡುಗಳು ಹಲವಿವೆ. ಆ ಹಾಡುಗಳಲ್ಲಿ ಅನುಭವದ ಸಂಪತ್ತು ಹಾಗೂ ಬದುಕಿನ ಸಾರವಿರುವುದನ್ನು ನಾವು ಕಾಣುತ್ತೇವೆ. ತಾಯಿ ಹಾಗೂ ತವರು ಮನೆಗೆ ಹೆಣ್ಣಿನ ಜೀವನದಲ್ಲಿ ವಿಶಿಷ್ಟ ಸ್ಥಾನವಿದೆ. ಸಂಸಾರದ ಸುಖ ಸಂತೃಪ್ತಿಗಳಿಗೆ ತವರು ಮನೆಯೇ ಮೂಲ ಕಾರಣ. ಹೆಣ್ಣೊಬ್ಬಳು ತನ್ನ ಜೀವನದ ಬಾಲ್ಯಾವಸ್ಥೆಯನ್ನು ತವರು ಮನೆಯಲ್ಲಿ ಕಳೆಯುವಾಗ ಜೀವನದ ಕಷ್ಟ ಸುಖಗಳನ್ನೂ ದುಃಖ ದುಮ್ಮಾನಗಳನ್ನೂ ಅನುಭವಿಸುತ್ತಾ ಮುಂದಿನ ತನ್ನ ಜೀವನಕ್ಕೆ ಅಗತ್ಯವಾದ ಹಲವು ವಿಷಯಗಳನ್ನು ಕಲಿಯುತ್ತಾಳೆ. ಆದರೆ ಹೆತ್ತವರು ಹೆಣ್ಣು ಬೇರೆ ಮನೆಗೆ ಹೋಗುವವಳೆಂಬುದನ್ನು ಅರಿತು ಆಕೆಗೆ ಸಂಸಾರದ ಕಷ್ಟನಷ್ಟಗಳು ತಿಳಿಯದಂತೆ ಮುದ್ದಿನಿಂದ ಸಾಕುತ್ತಾರೆ. ಈ ಪದ್ಯದಲ್ಲಿ ಹೆತ್ತವರು ಮಗಳನ್ನು ಒಪ್ಪಿಸಿ ಕೊಡುವಾಗ ಆಕೆಯ ಮುಗ್ಧ ಸ್ವಭಾವಗಳನ್ನು ಹೊಗಳುವ ಹಾಗೂ ಆಕೆಗೆ ಬುದ್ಧಿವಾದವನ್ನು ಹೇಳುವ ವಿಚಾರವಿದೆ. ಹೀಗೆ ಸರಳ ಸುಂದರ ಶೈಲಿಯಲ್ಲಿರುವ ಈ ಪದ್ಯ ತುಂಬ ಜನಪ್ರಿಯವಾಗಿದೆ.

## I. ಕಠಿಣ ಪದಗಳ ಅರ್ಥ

ಮಡಿಲು =ಉಡಿ, ಆಶ್ರಯ; ಕೊಂಕು =ವಕ್ರತೆ, ಚುಚ್ಚುಮಾತು, ವ್ಯಂಗ್ಯಮಾತು; ಸೈಸು =ಸಹಿಸು; ನೆಳಲು =ನೆರಳು; ಅದುರಿ =ನಡುಗಿ, ಕಂಪಿಸಿ; ಇರವಿನಲಿ =ಸ್ಥಿತಿಯಲ್ಲಿ ; ಸೌಜನ್ಯ =ವಿನಯ, ಒಳ್ಳೆಯತನ; ಸಖ =ಗೆಳೆಯ, ಸ್ನೇಹಿತ;

## II. ಈ ಪ್ರಶ್ನೆಗಳಿಗೆ ಸಂಕ್ಷಿಪ್ತವಾಗಿ ಉತ್ತರಿಸಿ.

1. ಮಗಳನ್ನು ತವರು ಮನೆಯವರು ಯಾವುದಕ್ಕೆ ಹೋಲಿಸಿದ್ದಾರೆ ?
2. ಮಗಳ ಗುಣಾತಿಶಯಗಳಾವುವು ?
3. ಗಂಡನ ಮನೆಯಲ್ಲಿ ಹೇಗಿರಬೇಕೆಂದು ಮಗಳಿಗೆ ಬುದ್ಧಿವಾದ ನೀಡುತ್ತಾರೆ ?
4. ಮಗಳಿಗೆ ಹೆತ್ತವರು ನೀಡುವ ಹಾರೈಕೆಯೇನು ?

## III. ಈ ಪ್ರಶ್ನೆಗಳಿಗೆ ವಿವರವಾಗಿ ಉತ್ತರಿಸಿ.

1. ತವರು ಮನೆಯವರು ತಮ್ಮ ಮಗಳ ಸದ್ಗುಣಗಳನ್ನು ಹೇಗೆ ವಿವರಿಸುತ್ತಾರೆ ?
2. ಗಂಡನ ಮನೆಯವರು ತಮ್ಮ ಮಗಳನ್ನು ಹೇಗೆ ನೋಡಿಕೊಳ್ಳಬೇಕೆಂದು ತವರು ಮನೆಯವರು ಹಂಬಲಿಸುತ್ತಾರೆ ?
3. ತವರು ಮನೆಯವರು ಮಗಳಿಗೆ ನೀಡುವ ಬುದ್ಧಿವಾದಗಳು ಈ ಪದ್ಯದಲ್ಲಿ ಹೇಗೆ ನಿರೂಪಿತವಾಗಿವೆ ?

## IV. ಕೆಳಗಿನ ವಾಕ್ಯಗಳ ಸಂದರ್ಭ, ಸ್ವಾರಸ್ಯ ಬರೆಯಿರಿ.

1. ಕಷ್ಟಗಳ ಸೈಸದೆಯೆ ಕಾಣದೆಯೆ ಬೆಳೆದವಳು.
2. ಎಂದೆಂದು ಅವಳ ನಡೆ ನಿಮ್ಮ ಪರವಾಗಿ.
3. ನಿಮ್ಮ ಕುಲಶೀಲಗಳು ಪರಿಮಳಿಸಲಿ.
4. ಇವರ ದೇವರೆ ನಿನ್ನ ದೇವರುಗಳು.

## V. ಭಾಷಾಭ್ಯಾಸ

**1. ಕೆಳಗಿನ ಪದಗಳನ್ನು ಉಪಯೋಗಿಸಿ ವಾಕ್ಯ ರಚಿಸಿರಿ.**

ಮಡಿಲು, ಕೊಂಕು, ಅದುರಿ, ಸೌಜನ್ಯ, ಕಣ್ಣೊರಸು

**2. ಕೆಳಗಿನ ಪದಗಳ ವಿರುದ್ಧ ಪದಗಳನ್ನು ನೀಡಿರಿ.**

ಬೆಳಕು, ವಿಶ್ವಾಸ, ಕಷ್ಟ, ಕಠಿಣ, ಖ್ಯಾತಿ

## VI. ಚಟುವಟಿಕೆ

1. ಮದುವೆಯ ಸಂದರ್ಭದಲ್ಲಿ ಹಾಡುವ ಜನಪದ ಹಾಡುಗಳನ್ನು ಸಂಗ್ರಹಿಸಿ ಹಾಡಿರಿ.
2. ತಾಯಿ, ತವರು ಮನೆ ಹಾಗೂ ಮಕ್ಕಳಿಗೆ ಸಂಬಂಧಿಸಿದ ಜನಪದ ಹಾಡುಗಳನ್ನು ಸಂಗ್ರಹಿಸಿ ಹಾಡಿರಿ.

---



# 3. ನನ್ನ ದೇಹದ ಬೂದಿ

- ದಿನಕರ ದೇಸಾಯಿ

ನನ್ನ ದೇಹದ ಬೂದಿ ಗಾಳಿಯಲಿ ತೂರಿಬಿಡಿ
ಹೋಗಿ ಬೀಳಲಿ ಬತ್ತ ಬೆಳೆಯುವಲ್ಲಿ
ಬೂದಿ ಗೊಬ್ಬರದಿಂದ ತೆನೆಯೊಂದು ನೆಗೆದುಬರೆ
ಧನ್ಯವಾಯಿತು ಹುಟ್ಟುಸಾವಿನಲ್ಲಿ

ನನ್ನ ದೇಹದ ಬೂದಿ ಹೊಳೆಯಲ್ಲಿ ಹರಿಯಬಿಡಿ
ತೇಲಿ ಬೀಳಲಿ ಮೀನ ಬಾಯಿಯಲ್ಲಿ
ಮುಷ್ಟಿ ಬೂದಿಯ ತಿಂದು ಪುಷ್ಟವಾಗಲು ಮೀನು
ಧನ್ಯವಾಯಿತು ಹುಟ್ಟು ಸಾವಿನಲ್ಲಿ

ನನ್ನ ದೇಹದ ಬೂದಿ-ಕೊಳದಲ್ಲಿ ಬೀರಿಬಿಡಿ
ತಾವರೆಯು ದಿನದಿನವು ಅರಳುವಲ್ಲಿ
ಬೂದಿ ಕೆಸರನು ಕೂಡಿ ಹೊಸ ಪಂಕಜವು ಮೂಡೆ
ಧನ್ಯವಾಯಿತು ಹುಟ್ಟು ಸಾವಿನಲ್ಲಿ

ಸತ್ತಮೇಲಾದರೂ ದೇಹ ಸೇವೆಗೆ ನಿಲಲಿ
ಇಂದಿಗೀ ನರಜನ್ಮ ಸೇವೆಯೆಂದು
ತನ್ನ ಸ್ವಾರ್ಥವ ನೆನೆದು ವ್ಯರ್ಥವಾಗಿದೆ ದೇಹ
ನಿಜಸೇವೆ ಮಾಡಲಿಕೆ ಬರಲಿ ಮುಂದು

**ಕವಿ-ಕಾವ್ಯ ವಿಚಾರ**

ಹೊಸಗನ್ನಡ ಸಾಹಿತ್ಯದಲ್ಲಿ ಶಿಶುಗೀತೆಗಳನ್ನು ಬರೆದ ಮೊದಲಿಗರಲ್ಲಿ ದಿನಕರ ದೇಸಾಯಿ ಒಬ್ಬರು. ಇವರು ಕುಮಟ ತಾಲೂಕಿನ ಅಂತರವಳ್ಳಿ ಗ್ರಾಮದ ಹಂಡದೊಕ್ಕಲ ದೇಸಾಯಿ ಮನೆತನಕ್ಕೆ ಸೇರಿದವರು. **10-09-1909** ರಂದು ಅಂಕೋಲೆಯಲ್ಲಿ ಜನಿಸಿದ ಇವರ ತಂದೆ ಶಾಲಾ ಶಿಕ್ಷಕ ಶ್ರೀ ದತ್ತಣ್ಣನವರು. ಇಂದು ಎಂಬವರು ಇವರ ಧರ್ಮ ಪತ್ನಿ. ಇವರ ಚುಟುಕಗಳು ಬಹಳ ಶ್ರೇಷ್ಠವಾಗಿವೆ. ಇವರು ಎಂ.ಎ., ಎಲ್.ಎಲ್.ಬಿ. ಪದವೀಧರರಾಗಿ ''ಸರ್ವೆಂಟ್ಸ್ ಆಫ್ ಇಂಡಿಯಾ ಸೊಸೈಟಿ''ಯ ಸದಸ್ಯರಾಗಿದ್ದರು. **1928** ರಿಂದಲೂ ಪದ್ಯ ರಚಿಸ ತೊಡಗಿದರು. ಕರ್ನಾಟಕದ ಇತಿಹಾಸ ಕುರಿತು ಆಂಗ್ಲದಲ್ಲಿ 'ಭಾರತೀಯ ಪ್ರಾಥಮಿಕ ಶಿಕ್ಷಣ' ಹಾಗೂ 'ಕೂಲಿಕಾರರ ಸಮಸ್ಯೆಗಳು' ಎಂಬ ಎರಡು ದೊಡ್ಡ ಗ್ರಂಥಗಳನ್ನು ಪ್ರಕಟಿಸಿರುತ್ತಾರೆ. ''ಗೀತಗಳು'' ಎಂಬ ಕವನ ಸಂಗ್ರಹ ಪ್ರಕಟಿಸಿದ್ದಾರೆ. ಇವರ ಮಕ್ಕಳ ಕವಿತಾ ಪುಸ್ತಕಗಳಿಗೆ ಮುಂಬಯಿ ಸರಕಾರವು ಗೌರವಧನವಿತ್ತು ಮನ್ನಿಸಿದೆ. ಇವರು ಕಾರ್ಮಿಕ ಚಳುವಳಿಯ ಮುಖಂಡರಲ್ಲೊಬ್ಬರು. ಜಿನೀವಾದಲ್ಲಿ ನಡೆದ ಅಂತರರಾಷ್ಟ್ರೀಯ ಕೂಲಿಕಾರ ಸಮ್ಮೇಳನಕ್ಕೆ ಇವರು ಪ್ರತಿನಿಧಿಗಳಾಗಿ ಹೋಗಿದ್ದರು. ''ದಿ ಕೆನರಾ ವೆಲ್‌ಫೇರ್ ಟ್ರಸ್ಟ್'' ಎಂಬ ಸೇವಾ ಸಂಸ್ಥೆಯನ್ನು ಸ್ಥಾಪಿಸಿ, ಅದರ ಮುಖಾಂತರ ಕೆಲವು ಹೈಸ್ಕೂಲುಗಳನ್ನೂ ವೃತ್ತಿ ಶಿಕ್ಷಣಾಲಯಗಳನ್ನೂ ನಡೆಸಿದರು. ಹೀಗೆ ಇವರು ಶಿಕ್ಷಣತಜ್ಞರಾಗಿಯೂ, ಕಾರ್ಮಿಕ ಮುಖಂಡರಾಗಿಯೂ, ಕವಿಯಾಗಿಯೂ ಬಹುಮುಖ ವ್ಯಕ್ತಿತ್ವವನ್ನು ಹೊಂದಿರುತ್ತಾರೆ.

ಭೂಮಿಯಲ್ಲಿ ಉಸಿರಿರುವಾಗ ಮಾಡುವ ಸಮಾಜ ಸೇವೆ ಹಿರಿದಾದುದು. ಅದಕ್ಕಿಂತಲೂ ಸತ್ತಮೇಲೂ ತನ್ನ ಬಾಳು ಧನ್ಯವಾಗಲು ಏನು ಮಾಡಬೇಕೆಂದು ಹಾತೊರೆಯುವುದು ಅತ್ಯಂತ ಶ್ಲಾಘ್ಯ ವಿಚಾರ. ಇಂದು ಮಾನವ ಸತ್ತಮೇಲೆ ತನ್ನ ಕಣ್ಣು ಹಾಗೂ ದೇಹದ ಇನ್ನಿತರ ಭಾಗಗಳನ್ನು ಇತರರಿಗೆ ದಾನ ಮಾಡುವುದಾಗಿ ಉಯಿಲು ಬರೆದಿಡುವುದನ್ನು ಕಾಣುತ್ತೇವೆ. ಅದು ಇಂದು ಬದುಕಿನಲ್ಲಿ ಕಂಡುಕೊಂಡ ಸತ್ಯದ ಪ್ರಭಾವದಿಂದ ಮೂಡಿದ ವಿಚಾರ. ಆದರೆ ತಮ್ಮ ದೇಹದ ಭಾಗಗಳನ್ನು ಸತ್ತ ಮೇಲೆ ಕತ್ತರಿಸಿ ತೆಗೆಯುವುದು ಮಹಾ ಪಾಪ ಎಂದು ತಿಳಿದಿದ್ದ ಕಾಲಘಟ್ಟದಲ್ಲಿ ತನ್ನ ದೇಹದ ಬೂದಿಯನ್ನು ಪಾಪ ಪರಿಹಾರಕ್ಕಾಗಿ ಪುಣ್ಯ ನದಿಗಳಲ್ಲಿ ಹರಿಯ ಬಿಡಿ ಎನ್ನದೆ ಗಾಳಿ, ಹೊಳೆ, ಕೊಳಗಳಲ್ಲಿ ತೂರಿಬಿಡಿ, ಅದರಿಂದ



ಕೆಲವರಿಗಾದರೂ ಸಹಾಯವಾಗಬಹುದೆಂದು ಭಾವಿಸುವುದು ಕವಿಯ ಉತ್ತಮ ಮನಸ್ಸಿಗೆ ನಿದರ್ಶನವಾಗಿದೆ.

**I. ಕಠಿಣ ಪದಗಳ ಅರ್ಥ**

ತೂರು =ಎಸೆ, ಚೆಲ್ಲು ; ತೆನೆ =ಧಾನ್ಯದ ಹೊಡೆ, ಕದಿರು; ನೆಗೆ =ಮೇಲಕ್ಕೆ ಬರು, ಕಾಣಿಸಿಕೊಳ್ಳು; ಬೀರು =ಎಸೆ, ಚೆಲ್ಲು; ಪಂಕಜ =ತಾವರೆ; ಮೂಡು =ಹುಟ್ಟು; ಸ್ವಾರ್ಥ =ಸ್ವಹಿತ, ತನ್ನ ಪ್ರಯೋಜನ;

**II. ಈ ಪ್ರಶ್ನೆಗಳಿಗೆ ಸಂಕ್ಷಿಪ್ತವಾಗಿ ಉತ್ತರಿಸಿ.**

1. ದೇಹದ ಬೂದಿಯನ್ನು ಗಾಳಿಯಲ್ಲಿ ತೂರಿದರೆ ಏನು ಬೆಳೆಯುತ್ತದೆ ?
2. ದೇಹದ ಬೂದಿಯನ್ನು ತಿಂದ ಮೀನು ಹೇಗೆ ಬೆಳೆಯುತ್ತದೆ ?
3. ದೇಹದ ಬೂದಿಯನ್ನು ಕೊಳದಲ್ಲಿ ಬೀರಿದರೆ ಏನು ಮೂಡುವುದೆಂದು ಕವಿ ಹೇಳುತ್ತಾರೆ ?

**III. ಈ ಪ್ರಶ್ನೆಗಳಿಗೆ ವಿವರವಾಗಿ ಉತ್ತರಿಸಿ.**

1. ಸತ್ತ ಮೇಲೆ ದೇಹದ ಬೂದಿಯ ಮೂಲಕ ಜನಸೇವೆಯನ್ನು ಹೇಗೆ ಮಾಡಬಹುದೆಂದು ಕವಿ ತಿಳಿಸಿದ್ದಾರೆ ?
2. 'ನನ್ನ ದೇಹದ ಬೂದಿ' ಕವನದ ಆಶಯವೇನು ?

**IV. ಭಾಷಾಭ್ಯಾಸ**

**1. ಕೆಳಗಿನ ಪದಗಳನ್ನು ಉಪಯೋಗಿಸಿ ವಾಕ್ಯಗಳನ್ನು ರಚಿಸಿರಿ.**

ತೂರು, ನೆಗೆ, ಬೀರು, ಧನ್ಯ, ಸ್ವಾರ್ಥ, ನಿಜಸೇವೆ

**2. ಕೆಳಗಿನ ಪದಗಳ ವಿರುದ್ಧ ಪದಗಳನ್ನು ಬರೆಯಿರಿ.**

ಹುಟ್ಟು, ತೇಲು, ಬೀಳು, ಜನ್ಮ, ಸ್ವಾರ್ಥ, ಮುಂದು

3. ಬೆಳೆಯುವಲ್ಲಿ, ಸಾವಿನಲ್ಲಿ ಎಂಬ ಪದಗಳಂತೆ ಈ ಪದ್ಯದಲ್ಲಿ ಬಂದಿರುವ ಪ್ರಾಸದ ಪದಗಳನ್ನು ಪಟ್ಟಿ ಮಾಡಿ.

## V. ಚಟುವಟಿಕೆ

1. 'ನನ್ನ ಜೀವನದ ಧ್ಯೇಯ' - ಎಂಬ ಶೀರ್ಷಿಕೆಯಲ್ಲಿ ಒಂದು ಕಿರು ಪ್ರಬಂಧವನ್ನು ಬರೆಯಿರಿ.
2. ದಿನಕರ ದೇಸಾಯಿಯವರು ಬರೆದ ಇತರ ಪುಸ್ತಕಗಳನ್ನು ಓದಿ.
3. ಈ ಪದ್ಯವನ್ನು ಬಾಯಿಪಾಠ ಮಾಡಿ.

---



# 4. ಕಟ್ಟುವೆವು ನಾವು

**- ಎಂ. ಗೋಪಾಲಕೃಷ್ಣ ಅಡಿಗ**

ಕಟ್ಟುವೆವು ನಾವು ಹೊಸ ನಾಡೊಂದನು, — ರಸದ
ಬೀಡೊಂದನು.

ಹೊಸನೆತ್ತರುಕ್ಕುಕ್ಕಿ ಆರಿಹೋಗುವ ಮುನ್ನ,
ಹರೆಯದೀ ಮಾಂತ್ರಿಕನ ಮಾಟ ಮಸುಳುವ ಮುನ್ನ,
ಉತ್ಸಾಹಸಾಹಸದ ಉತ್ತುಂಗ ವೀಚಿಗಳ
ಈ ಕ್ಷುಬ್ಧಸಾಗರವು ಬತ್ತಿ ಹೋಗುವ ಮುನ್ನ
ಕಟ್ಟುವೆವು ನಾವು ಹೊಸ ನಾಡೊಂದನು !

ನಮ್ಮೆದೆಯ ಕನಸುಗಳೆ ಕಾಮಧೇನು
ಆದಾವು, ಕರೆದಾವು ವಾಂಛಿತವನು;
ಕರೆವ ಕೈಗಿಹುದಿದೋ ಕಣಸುಗಳ ಹರಕೆ;
ಗುರಿ ತಪ್ಪದೊಮ್ಮುಖದ ಬಯಕೆ ಬೆಂಬಲಕೆ!

ಜಾತಿಮತಭೇದಗಳ ಕಂದಕವು ಸುತ್ತಲೂ,
ದುರ್ಭೇದ್ಯವೆನೆ ಕೋಟೆಕೊತ್ತಲಗಳು;
ರೂಢಿರಾಕ್ಷಸನರಸುಗೈಯುವನು, ತೋಳ್ತಟ್ಟಿ
ತೊಡೆತಟ್ಟಿ ಕರೆಯುವನು ಸಂಗ್ರಾಮಕೆ!

ನಾವು ಹಿಂದೆಗೆವೆವೇ ? ವೀರ ತರುಣರು ನಾವು!
ಒಂದೆ ನೆಗೆತಕೆ ನೆಗೆವೆವೋ ಕಂದಕವನು,
ಕುಟ್ಟಿ ಪುಡಿಮಾಡುವೆವು ಕೋಟೆಗಳನು,
ಎದೆಯ ಮೆಟ್ಟಿ ಮುರಿಯುವೆವಸುರರಟ್ಟೆಗಳನು !

ಕೋಟೆಗೋಡೆಗೆ ನಮ್ಮ ಹೆಣಗಳೇ ಮೆಟ್ಟಿಲು,
ನಮ್ಮ ಸಾವೇ ನೋವೆ ಹೊಸ ನಾಡ ತೊಟ್ಟಿಲು
ಆದಾವು; ಅಂಜುವೆದೆ ನಮ್ಮದಲ್ಲ ;

ಸೋಲುಬಗೆ ವೀರನಿಗೆ ಸಲ್ಲ, ಹೊಲ್ಲ!

ಎಡರುಗಳ ಕಡಲುಗಳನೀಸಿ ಬರುವೆವು, ಘೋರ
ನೈರಾಶ್ಯದಗ್ನಿಮುಖದಲ್ಲು ಕೂಡ
ಹೊಕ್ಕು ಹೊರಡುವೆವೆಲ್ಲ ತೊಡಕುಗಳ ಒಡಕುಗಳ
ಬಿಡಿಸಿ, ಇಡಿಗೊಳಿಸಿ ಕಟ್ಟುವೆವು ನಾಡ!

ಇಂದು ಬಾಳಿದು ಕೂಳ ಕಾಳೆಗವು; ಹೊಟ್ಟೆಯೇ
ಕೇಂದ್ರವಾಗಿದೆ ನರನ ಜೀವಿತಕ್ಕೆ;
ಅನ್ನದನ್ಯಾಯದಾವಾಗ್ನಿಯಲಿ ಕರಗುತಿದೆ
ನರತೆ, ಸಂಸ್ಕೃತಿ, ಪ್ರೀತಿ, ದಿವದ ಬಯಕೆ!

ಇರುವೆಲ್ಲವನು ಎಲ್ಲ ಜನಕೆ ತೆರವಾಗಿಸುವ
ಸಮಬಗೆಯ ಸಮಸುಖದ ಸಮದುಃಖದ
ಸಾಮರಸ್ಯದ ಸಾಮಗಾನಲಹರಿಯ ಮೇಲೆ
ತೇಲಿ ಬರಲಿದೆ ನೋಡು, ನಮ್ಮ ನಾಡು!

ಇಲ್ಲೆ ಈ ಎಡೆಯಲ್ಲೆ, ನಮ್ಮ ಮುಂಗಡೆಯಲ್ಲೆ,
ಅಳಲುಗಳ ಹೆಡೆಯಲ್ಲೆ,
ಸೋಲುಗಳ ತೊಡೆಯಲ್ಲೆ
ಅರಳೀತು ನಮ್ಮ ನಾಡು;
ನಮ್ಮೆದೆಯ ತುಂಬಿರುವ ಅದರ ನರುಗಂಪು ಹೊರ
ಹೊಮ್ಮುವುದ ಕಾದು ನೋಡು!

ಉತ್ಸಾಹ ಉದ್ವೇಗ ಉದ್ರೇಕಗಳ ವೀರ
ಯುವಜನದ ನಾಡ ಗುಡಿಯು;
ಅದರ ಹಾರಾಟಕ್ಕೆ ಬಾನೆ ಗಡಿಯು,
ಬರಲು ಬಿಡೆವೆಂದಿಗೂ ಅದಕೆ ತಡೆಯು!
ತಡೆವವರು ಬನ್ನಿರೋ, ಹೊಡೆವವರು ಬನ್ನಿರೋ,
ಕೆಡೆನುಡಿವ ಕೆಡೆಬಗೆವ ಕೆಡುಕು ಜನರೇ ಬನ್ನಿ!



ಕೊಟ್ಟೆವಿದೊ ವೀಳೆಯವನು;
ನಿಮ್ಮೆಲ್ಲರನು ತೊಡೆದು ನಿಮ್ಮ ಮಸಣದ ಮೇಲೆ
ಕಟ್ಟುವೆವು ನಾವು ಹೊಸ ನಾಡೊಂದನು, —ಸುಖದ
ಬೀಡೊಂದನು!

**ಕವಿ-ಕಾವ್ಯ ವಿಚಾರ**

ಎಂ. ಗೋಪಾಲಕೃಷ್ಣ ಅಡಿಗರು ಆಧುನಿಕ ಕನ್ನಡ ಸಾಹಿತ್ಯದ ಪ್ರಸಿದ್ಧ ಕವಿಗಳು. ಅವರು ಕನ್ನಡ ಕಾವ್ಯ ಸಾಹಿತ್ಯ ಪ್ರಕಾರದಲ್ಲಿ ಹೊಸ ಪರಂಪರೆಯನ್ನು ಆರಂಭಿಸಿದ ಅಗ್ರಗಣ್ಯ ಕವಿ. ಅಡಿಗರು **18-2-1918** ರಂದು ದಕ್ಷಿಣ ಕನ್ನಡ ಜಿಲ್ಲೆಯ ಮೊಗೇರಿ ಎಂಬ ಹಳ್ಳಿಯಲ್ಲಿ ಜನಿಸಿದರು. ಮೈಸೂರು ವಿಶ್ವವಿದ್ಯಾನಿಲಯದಿಂದ **1952** ರಲ್ಲಿ ಇಂಗ್ಲಿಷ್ ಎಂ.ಎ. ಪದವಿ ಗಳಿಸಿದ ಅಡಿಗರು ಮೈಸೂರಿನ ಸೇಂಟ್ ಫಿಲೋಮಿನಾ ಕಾಲೇಜಿನಲ್ಲಿ ಉಪನ್ಯಾಸಕರಾಗಿಯೂ ಬಳಿಕ ಸಾಗರದ ಲಾಲ್ ಬಹಾದ್ದೂರ್ ಕಾಲೇಜು ಹಾಗೂ ಉಡುಪಿಯ ಪೂರ್ಣಪ್ರಜ್ಞ ಕಾಲೇಜುಗಳಲ್ಲಿ ಪ್ರಿನ್ಸಿಪಾಲರಾಗಿಯೂ ಸೇವೆ ಸಲ್ಲಿಸಿದರು. ಸಿಮ್ಲಾದ ಇನ್‌ಸ್ಟಿಟ್ಯೂಟ್ ಆಫ್ ಅಡ್ವಾನ್ಸ್‌ಡ್ ಸ್ಟಡೀಸ್‌ನ ರಿಸರ್ಚ್ ಫೆಲೋ ಆಗಿದ್ದರಲ್ಲದೆ ದೆಹಲಿಯ ನ್ಯಾಷನಲ್ ಬುಕ್ ಟ್ರಸ್ಟಿನ ಡೈರೆಕ್ಟರರೂ ಆಗಿದ್ದರು. ಅವರ ವರ್ಧಮಾನ ಕವನ ಸಂಕಲನಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯೂ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯೂ ಲಭಿಸಿವೆ. ಭಾವತರಂಗ, ಕಟ್ಟುವೆವು ನಾವು, ನಡೆದು ಬಂದ ದಾರಿ, ಚಂಡೆಮದ್ದಳೆ, ಭೂಮಿಗೀತ, ವರ್ಧಮಾನ, ಸಮಗ್ರ ಗದ್ಯ, ಆಕಾಶ ದೀಪ, ಅನಾಥೆ, ಮಣ್ಣಿನವಾಸನೆ, ವಿಚಾರ ಪಥ ಮೊದಲಾದುವು ಅಡಿಗರ ಪ್ರಮುಖ ಕೃತಿಗಳು.

ಈ ಕವನವನ್ನು ಅವರ 'ಕಟ್ಟುವೆವು ನಾವು' ಎಂಬ ಕವನ ಸಂಕಲನದಿಂದ ಆಯ್ದುಕೊಳ್ಳಲಾಗಿದೆ. ಈ ಕವನವು ವರ್ಣಾಶ್ರಮ ಪದ್ಧತಿ, ಬಡವ ಬಲ್ಲಿದ, ಒಡೆಯ ಸೇವಕ, ಜಮೀನುದಾರ-ಜೀತದಾಳು, ಯಜಮಾನ-ಕಾರ್ಮಿಕ ಮುಂತಾದ ಸಮಾಜದ ಎಲ್ಲಾ ರಂಗಗಳಲ್ಲಿ ಸಹಸ್ರಾರು ವರ್ಷಗಳಿಂದ ತುಂಬಿರುವ ಶೋಷಣೆ, ಸುಲಿಗೆ, ಸಂಪ್ರದಾಯ, ರಾಕ್ಷಸನ ಹಾವಳಿ ಮೊದಲಾದುವನ್ನು ತೊಡೆದು ಸಮಾಜದಲ್ಲಿ ಸಮಬಗೆ, ಸಮ ಸುಖ ದುಃಖ, ಸಾಮರಸ್ಯಗಳು ತುಂಬಿ ತುಳುಕಾಡುವ ನಾಡನ್ನು ನಿರ್ಮಿಸಬೇಕೆಂಬ ಹಂಬಲದಿಂದ ಕೂಡಿದ ಒಂದು ಕ್ರಾಂತಿಗೀತೆಯಾಗಿದೆ.

## I. ಕಠಿಣ ಪದಗಳ ಅರ್ಥ

ಹರೆಯ =ಪ್ರಾಯ (ಸಂ); ಮಾಂತ್ರಿಕ =ಮಂತ್ರಗಾರ, ಐಂದ್ರಜಾಲಿಕ; ಮಸಳು =ಕಾಂತಿಹೀನವಾಗು, ಮಬ್ಬಾಗು; ವೀಚಿ =ಅಲೆ, ತೆರೆ; ಉತ್ತುಂಗ =ಎತ್ತರವಾದ; ಕ್ಷುಬ್ಧ =ಕದಡಿದ; ವಾಂಛಿತ =ಇಚ್ಛಿಸಿದ, ಬಯಸಿದ; ಕಣಸು =ನೋಟ, ಕಾಣ್ಕೆ; ದುರ್ಭೇದ್ಯ =ಭೇದಿಸಲಸಾಧ್ಯವಾದ; ಕಂದಕ =ಕೋಟೆಯ ಸುತ್ತಲಿರುವ ಅಗಳು; ನೆಗೆತ =ಹಾರುವಿಕೆ; ಕೊತ್ತಲ =ಕೋಟೆಯ ಮೇಲ್ಭಾಗ, ಸೈನಿಕರು ನಿಂತು ಕಾದುವ ಎತ್ತರ ಪ್ರದೇಶ; ರೂಢಿರಾಕ್ಷಸ =ಸಂಪ್ರದಾಯ ಎಂಬ ರಕ್ಕಸ; ಬಗೆ =ಮನಸ್ಸು; ಹೊಲ್ಲ =ಕೆಟ್ಟದ್ದು, ಹೀನವಾದುದು; ರಟ್ಟೆ =ಬಾಹು; ಸಂಗ್ರಾಮ =ಯುದ್ಧ ; ಅಸುರರು =ರಾಕ್ಷಸರು; ಎಡರು =ತೊಂದರೆ, ಕಷ್ಟ; ಕೂಳಕಾಳೆಗ =ಅನ್ನಕ್ಕಾಗಿ ಮಾಡುವ ಯುದ್ಧ; ನರ =ಮನುಷ್ಯ; ನರತೆ =ಮಾನವೀಯತೆ; ದಾವಾಗ್ನಿ =ಕಾಡ್ಗಿಚ್ಚು ; ತೆರವಾಗಿಸು =ಅವಕಾಶ ಕಲ್ಪಿಸು; ದಿವ =ಸ್ವರ್ಗ; ಸಾಮರಸ್ಯ =ಹೊಂದಾಣಿಕೆ; ನರುಗಂಪು =ಸುವಾಸನೆ, ಪರಿಮಳ; ಸಾಮ =ನಾಲ್ಕು ವೇದಗಳಲ್ಲಿ ಒಂದು; ಈ ಎಡೆ =ಈ ಸ್ಥಳ; ಗುಡಿ =ಬಾವುಟ, ಧ್ವಜ; ಬಾನು =ಆಕಾಶ;

## II. ಈ ಪ್ರಶ್ನೆಗಳಿಗೆ ಸಂಕ್ಷಿಪ್ತವಾಗಿ ಉತ್ತರಿಸಿ.

1. ನಾವು ಯಾವುದನ್ನು ಕಟ್ಟಲು ಹೊರಟಿದ್ದೇವೆ ಎಂದು ಕವಿ ಹೇಳಿದ್ದಾರೆ ?
2. ಹೊಸ ನಾಡನ್ನು ಕಟ್ಟುವುದು ಯಾವಾಗ ?
3. ನಮ್ಮ ಸುತ್ತಲೂ ಏನೆಲ್ಲ ಇವೆ ?
4. ವೀರ ತರುಣರು ಏನು ಮಾಡುತ್ತಾರೆ ?
5. ಹೊಸ ನಾಡನ್ನು ಕಟ್ಟುವುದು ಹೇಗೆ ?
6. ಇಂದಿನ ಸ್ಥಿತಿ ಹೇಗಿದೆ ಎಂದು ಕವಿ ಹೇಳುತ್ತಾರೆ ?
7. ನಮ್ಮ ಹೊಸ ನಾಡು ಹೇಗೆ ಬರಲಿದೆ ?



8. ನಾಡ ಗುಡಿಯು ಹೇಗಿದೆ ?

## III. ಈ ಪ್ರಶ್ನೆಗಳಿಗೆ ವಿವರವಾಗಿ ಉತ್ತರಿಸಿ.

1. ಈ ಕವನವು ಹೇಗೆ ಕುದಿರಕ್ತದವರ ಕ್ರಾಂತಿಗೀತೆಯಾಗಿದೆ ಎಂಬುದನ್ನು ವಿವರಿಸಿ.
2. ಕಟ್ಟುವೆವು ನಾವು ಕವನದ ಆಶಯವನ್ನು ಕುರಿತು ಬರೆಯಿರಿ.

## IV. ಸಂದರ್ಭ ಸಹಿತ ವಿವರಿಸಿ.

1. ಕರೆವ ಕೈಗಿಹುದಿದೋ ಕಣಸುಗಳ ಹರಕೆ.
2. ತೊಡೆತಟ್ಟಿ ಕರೆಯುವನು ಸಂಗ್ರಾಮಕೆ
3. ಅಂಜುವೆದೆ ನಮ್ಮದಲ್ಲ, ಸೋಲುಬಗೆ ವೀರನಿಗೆ ಸಲ್ಲ
4. ಹೊಟ್ಟೆಯೇ ಕೇಂದ್ರವಾಗಿದೆ ನರನ ಜೀವಿತಕ್ಕೆ
5. ತಡೆವವರು ಬನ್ನಿರೋ ಹೊಡೆವವರು ಬನ್ನಿರೋ

## V. ಭಾಷಾಭ್ಯಾಸ

**1. ಕೆಳಗಿನ ಪದಗಳನ್ನು ವಿಂಗಡಿಸಿ ಸಂಧಿಯ ಹೆಸರನ್ನು ಬರೆಯಿರಿ.**

ನಾಡೊಂದನು, ಉಕ್ಕುಕ್ಕಿ, ನಮ್ಮೆದೆ, ಕಡಲುಗಳನೀಸಿ, ಬಿಡೆವೆಂದಿಗೂ, ಕೈಗಿಹುದು, ದುರ್ಭೇದ್ಯವೆನೆ

2. ಕೆಳಗಿನವುಗಳ ವಿಗ್ರಹವಾಕ್ಯ ಬರೆದು ಸಮಾಸದ ಹೆಸರನ್ನು ಬರೆಯಿರಿ.

ಕೋಟೆಕೊತ್ತಲ, ತೋಳ್ತಟ್ಟಿ, ತೊಡೆತಟ್ಟಿ, ಹಿಂದೆಗೆ

3. ಕೆಳಗಿನವುಗಳಿಗೆ ತತ್ಸಮ ತದ್ಭವಗಳನ್ನು ಬರೆಯಿರಿ.

ಹರೆಯ, ಉತ್ಸಾಹ, ರಾಕ್ಷಸ, ವೀರ, ಮೊಗ, ಅನ್ಯಾಯ

4. ಕೆಳಗಿನವುಗಳಿಗೆ ವಿರುದ್ಧ ಪದಗಳನ್ನು ಬರೆಯಿರಿ.

ಹೊಸತು, ವೀರ, ಸಾವು, ಸೋಲು, ದುಃಖ

**VI. ಚಟುವಟಿಕೆ**

ಇತರ ಕವಿಗಳ ಕ್ರಾಂತಿಗೀತೆಗಳನ್ನು ಓದಿರಿ.

---



# 5. ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ

**- ಸಂಚಿಯ ಹೊನ್ನಮ್ಮ**

ಪೆಣ್ಣ ಪೆತ್ತವರ ಬಳಗ ಬಳೆವುದು ಬೇಗ
ಪೆಣ್ಣ ಪೆತ್ತವರು ಪೆರ್ಚುವರು
ಪೆಣ್ಣ ಪೆತ್ತುದರಿಂದೆ ಪೆಸರೆನಿಸಿತು ಮಿಗೆ
ಬಣ್ಣವೇರಿತು ಪಾಲ್ಗಡಲು 1

ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ
ಪೆಣ್ಣಲ್ಲವೆ ಪೊರೆದವಳು
ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು
ಕಣ್ಣು ಕಾಣದ ಗಾವಿಲರು 2

ಕುವರನಾದೊಡೆ ಬಂದ ಗುಣವೇನದರಿಂದ
ಕುವರಿಯಾದೊಡೆ ಕುಂದೇನು
ಇವರೀರ್ವರೊಳೇಳ್ಗೆವಡೆದವರಿಂದ
ಸವನಿಪುದಿಹಪರಸೌಖ್ಯ 3

ಕುಲಪುತ್ರನೋದಿ ತಿಳಿದು ನಡೆದಲ್ಲದೆ
ಕುಲವನುದ್ಧರಿಸಲರಿಯನು
ಕುಲಪುತ್ರಿಯೊಳ್ಗುವರನಿಗಿತ್ತ ಮಾತ್ರಕೆ
ಕುಲಕೋಟಿಯನುದ್ಧರಿಪಳು 4

ಬಸುರೊಳೊಗೆದು ಬಳೆದೇಕ ರೀತಿಯೊಳೆಲ್ಲ
ಸಿಸುಗಳಿರ್ದೊಡಮೇನು ಬಳಿಕ
ಒಸೆದಿತ್ತುದನೊಡಬಡುವಳು ಪೆಣ್ ಗಂಡು
ಪಸುಗೆಗೊಂಬನು ಬಲ್ಮೆಯೊಳು 5

ಅರಿತು ನಿಟ್ಟಿಸೆ ಗಂಡುಮಕ್ಕಳಿಂದತಿಶಯ
ದೆರಕದೊಳೆಸೆವ ಪೆಣ್ಗಳನು

ಪೊರನೋಟದಿಂದ ನೋಡದೆ ಪೋಲೆನಿಸದೆ
ಮರುಕವೆರಸಿ ಮನ್ನಿಪುದು 6

ಸುಗುಣನಾವನು ಸುಚರಿತ್ರನಾವನು ಕಣ್ಗೆ
ಸೊಗಸುವ ಸೊಬಗನಾರೆಂದು
ಬಗೆದು ಭಾವಿಸಿ ಪೆಣ್ಣನೀವುದು ವಂಶದೊ
ಳೊಗೆದೊಳ್ಗುವರನಿಗೊಲಿದು 7

ಜಡನಿಗೆ ಜಾತಿಹೀನನಿಗೆ ಚಂಚಲನಿಗೆ
ಕಡುಮೂರ್ಖನಿಗೆ ಗಾಂಪನಿಗೆ
ಬಡತನದೊಳು ಬಲು ಬವಣೆಗೊಂಬವನಿಗೆ
ಕೊಡಲಾಗದು ಕುವರಿಯನು 8

ಬಾಳಿ ಬದುಕಿ ತಣಿವಿಲ್ಲದ ತಮ್ಮಂತೆ
ಬಾಳಲೆಳಸುವ ಬಾಲಕಿಯ
ಬೀಳುಗುವರನಿಗೆ ಬೆಲೆಗೈದರೆಂಬುದ
ಕೇಳಿ ಕಿವಿಯ ಮುಚ್ಚುವುದು 9

ತನ್ನ ಮನೆಯೊಳುಂಡು ತವರುಮನೆಯ ಸಂ
ಪನ್ನವಕ್ಕೆಂಬ ಪೆಣ್ಗಳಿಗೆ
ಪೊನ್ನ ತೊಡಿಗೆ ಪೊಸದುಗುಲಂಗಳನಿತ್ತು
ಮನ್ನಿಸುವುದು ಮನವರಿತು 10

ಬಡವರಾವೆಮಗೆಲ್ಲಿ ಬರ್ಪುದೊಡವೆಯೆಂದು
ಕಡುದೈನ್ಯವಾಡಿ ಕಳೆಯದೆ
ಉಡದೆ ತೊಡದೆ ತಾವುಳಿದು ತನುಜೆಯರಿ
ಗುಡುತೊಡುವೊಡವೆ ಕೊಡುವುದು 11

ತನ್ನ ತವರುಮನೆಯವರಿತ್ತ ಪಿತ್ತಳೆ
ಪೊನ್ನೆಂದು ಬಗೆದು ಪೂಜಿಸುವ



ಕನ್ನೆಯರೊಳು ಕಡುಗೂರ್ಮೆಯನೊಡರಿಸಿ
ಪೊನ್ನು ರನ್ನದೊಳು ಪೂಜುವುದು 12

ಪುಟ್ಟಿದಂದದಿ ಬಂದು ಪೊಕ್ಕಳೆಂದಣುಗಿಯ
ನೆಟ್ಟನೆ ನಿಂದಿಸದಂತೆ
ಕಿಟ್ಟದ ಪಲಕೆಲವೊಡವೆಗಳನು ಕೈ
ಬಿಟ್ಟು ಕೊಡುವುದು ಬೇಸರದೆ 13

ಬೇಡಿ ಬೇಡಿದ ವಸ್ತುವ ಪೆಣ್ಮಗುವಿಗೆ
ನೀಡುವ ನೇಮಗಾರರಿಗೆ
ಷೋಡಶದಾನದ ಫಲ ಸುಲಭದೊಳು ಕೈ
ಗೂಡುವುದೆಂಬರುತ್ತಮರು 14

ಅನ್ನಪಾನದೊಳಾಭರಣ ವಸನದೊಳು
ಮನ್ನಣೆಯೊಳು ಮನವೊಲಿದು
ಕನ್ನೆರನ್ನೆಯರು ಪರಕೆಗೈಯಲಾ ಮನೆ
ಯುನ್ನತಿವಡೆದೊಪ್ಪುವುದು 15

ಅದರಿಂದ ಪೆಣ್ಮಕ್ಕಳನಾದರಿಪುದು
ಮುದವೇರಿಪುದು ಮುದ್ದಿಪುದು
ಮದುವೆ ಮಂಗಲದೊಳು ಮನವೊಲಿದವರಿಗೆಂ
ದೊದವಿಪುದುಚಿತ ವಸ್ತುವನು 16

## ಕವಿ-ಕಾವ್ಯ ವಿಚಾರ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಉಜ್ವಲವಾಗಿ ಬೆಳಗುವ ಕವಯಿತ್ರಿಯರಲ್ಲಿ ಸಂಚಿಯ ಹೊನ್ನಮ್ಮನಿಗೆ ಒಂದು ವಿಶಿಷ್ಟ ಸ್ಥಾನವಿದೆ. ಅವಳ ಕಾಲ ಸುಮಾರು ಕ್ರಿ.ಶ. **1680.** ಅವಳು ಮೈಸೂರು ಅರಸರಾಗಿದ್ದ ಚಿಕ್ಕದೇವರಾಜ ಒಡೆಯರ ಧರ್ಮಪತ್ನಿಯಾದ ಎಳಂದೂರು ದೇವಾಜಮ್ಮಣ್ಣಿಯವರ ಆಶ್ರಯದಲ್ಲಿ ಸಂಚಿಯ ಊಳಿಗದಲ್ಲಿದ್ದಳು. ಆದ್ದರಿಂದಲೇ ಆಕೆಗೆ ಸಂಚಿಯ ಹೊನ್ನಮ್ಮ ಎಂಬ ಹೆಸರು

ಬಂತು. ಆಕೆಯ ಹುಟ್ಟೂರು ಮೈಸೂರು ಜಿಲ್ಲೆಯ ಎಳಂದೂರು. ಅವಳ ಏಕಮಾತ್ರ ಕೃತಿ 'ಹದಿಬದೆಯ ಧರ್ಮ'. ಈ ಕೃತಿ ಸಾಂಗತ್ಯ ಛಂದಸ್ಸಿನಲ್ಲಿದೆ. ಈ ಕೃತಿ ಕನ್ನಡ ಸಾಹಿತ್ಯದ ಒಂದು ಅಪೂರ್ವ ಗ್ರಂಥ. ಗೃಹಿಣಿ ಎಂದರೆ 'ಪತಿವ್ರತೆ' ಎನಿಸಿಕೊಳ್ಳುವ ಸ್ತ್ರೀ ನಡೆದುಕೊಳ್ಳಬೇಕಾದ ವಿಧಾನವನ್ನು ಈ ಕೃತಿಯಲ್ಲಿ ತಿಳಿಸಲಾಗಿದೆ. ಹೊನ್ನಮ್ಮನ ವಿದ್ಯಾಗುರು ಅಳಸಿಂಗಚಾರ್ಯ. ಇವರು ಚಿಕ್ಕದೇವರಾಜನ ಮಂತ್ರಿಯಾಗಿದ್ದ ತಿರುಮಲಾರ್ಯನ ತಮ್ಮ. ಕನ್ನಡದ ಮೊದಲ ನಾಟಕವೆಂದು ಹೆಸರು ಪಡೆದಿರುವ 'ಮಿತ್ರವಿಂದಾ ಗೋವಿಂದ' ನಾಟಕದ ಕರ್ತೃ.

'ಹದಿಬದೆಯ ಧರ್ಮ' ಕೃತಿಯಲ್ಲಿ 9 ಸಂಧಿಗಳಿವೆ. ಈ ಪದ್ಯ ಭಾಗದಲ್ಲಿ ಕೊಟ್ಟಿರುವ ಪದ್ಯಗಳನ್ನು 5ನೇ ಸಂಧಿಯಿಂದ ಆರಿಸಲಾಗಿದೆ. ಈ ಕೃತಿಯಲ್ಲಿ ಸ್ತ್ರೀ ಜನನದಿಂದ ಹಿಡಿದು ಅವಳ ಮುಪ್ಪಿನಾವಸ್ಥೆಯವರೆಗಿನ ವಿವಿಧ ಹಂತಗಳು, ವಿಶೇಷವಾಗಿ ವಿವಾಹದ ಅನಂತರದ ಪವಿತ್ರ ಹಾಗೂ ಹೊಣೆಗಾರಿಕೆಯ ಜೀವನಕ್ಕೆ ಒತ್ತುಕೊಟ್ಟು ಪತಿವ್ರತಾ ಧರ್ಮದ ಮಹತ್ವವನ್ನು ನಿರೂಪಿಸಲಾಗಿದೆ. ಹದಿಬದೆಯ ಧರ್ಮ ಒಂದು ಶುದ್ಧ ನೀತಿ ಕಾವ್ಯ. ಹೊನ್ನಮ್ಮನ ಕಾಲಕ್ಕಾಗಲೇ 'ಹೆಣ್ಣು ಹುಟ್ಟಿದರೆ ಹುಣ್ಣು ಹುಟ್ಟಿದ ಹಾಗೆ' ಎಂಬ ಭಾವನೆ ಜನರಲ್ಲಿ ಹರಡಿತ್ತು. ವಿಚಾರ ಶೀಲಳಾದ ಹೊನ್ನಮ್ಮ ಜನ-ಮನದಲ್ಲಿ ಬೇರೂರಿದ್ದ ಈ ಭಾವನೆಯನ್ನು ಅಳಿಸಿ ಹಾಕಲು ಪ್ರಯತ್ನಿಸಿದಳು.

ಈ ಕೃತಿಯಲ್ಲಿ ಹೆಣ್ಣಿನ ಹಿರಿಮೆಗರಿಮೆಗಳನ್ನು ಆಕೆ ಎತ್ತಿ ಹೇಳಿದ್ದಾಳೆ. ಹೆಣ್ಣನ್ನು ತವರು ಮನೆಯವರು ಹೇಗೆ ಆದರದಿಂದ ಕಾಣಬೇಕು ಎಂಬುದನ್ನು ಈ ಪದ್ಯಗಳಲ್ಲಿ ವಿವರಿಸಲಾಗಿದೆ.

## I. ಕಠಿಣ ಪದಗಳ ಅರ್ಥ

ಬಳೆವುದು =ಬೆಳೆಯುವುದು; ಪೆಣ್ಣು =ಹೆಣ್ಣು ; ಪೆತ್ತವರ =ಹೆತ್ತವರ; ಪೆಸರು =ಹೆಸರು; ಪಾಲ್ಗಡಲು =ಕ್ಷೀರಸಾಗರ; ಪಡೆದ =ಹಡೆದ, ಹೆತ್ತ ; ಬೀಳುಗಳೆ =ಹೀಯಾಳಿಸು; ಗಾವಿಲ =ಹೆಡ್ಡ; ಕುಂದು =ಕೊರತೆ; ಸವನಿಪುದು =ಹೊಂದುವುದು; ಅರಿಯನು =ತಿಳಿಯನು; ಒಳ್ಳಿವರ =ಒಳ್ಳೆಯ ಗಂಡ; ಉದ್ಧರಿಪಳು =ಉದ್ಧರಿಸುವಳು; ಒಸೆ =ಪ್ರೀತಿ; ಒಡಬಡು =ಒಪ್ಪು, ಸ್ವೀಕರಿಸು; ಪಸುಗೆ =ಪಾಲು, ಹಂಚುವಿಕೆ; ಬಲ್ಮೆ =ಸಾಮರ್ಥ್ಯ, ಪೌರುಷ; ಅತಿಶಯ =ಹೆಚ್ಚಾದ; ಪೊರನೋಟ =ಹೊರನೋಟ, ಅಲಕ್ಷ್ಯದ ನೋಟ; ಮರುಕ =ಕನಿಕರ, ಅನುಕಂಪ; ಸೊಬಗ =ಸುಂದರ, ರೂಪವಂತ; ಸುಚರಿತ್ರ =ಒಳ್ಳೆಯ ನಡತೆ; ಜಡ =ಸೋಮಾರಿ; ಜಾತಿಹೀನ =ಕುಲಹೀನ; ಮೂರ್ಖ =ದುಷ್ಟ ; ಗಾಂಪ =ಹೆಡ್ಡ, ಬುದ್ಧಿಹೀನ; ಬವಣೆ=ತೊಂದರೆ, ಕಷ್ಟ ; ಬೀಳುಗುವರ =ಅಯೋಗ್ಯ; ಬೆಲೆಗೈಯು =ಬೆಲೆಕಟ್ಟು ; ಸಂಪನ್ನವಕ್ಕೆ =ಸಂಪತ್ತು ಅಭಿವೃದ್ಧಿಯಾಗಲಿ; ಪೊನ್ನತೊಡಿಗೆ =ಚಿನ್ನದ ಆಭರಣ; ದುಕುಲ =ರೇಷ್ಮೆವಸ್ತ್ರ ; ಮನ್ನಿಸು =ಗೌರವಿಸು; ಕಡುದೈನ್ಯ =ಬಹಳ ದೀನತನ; ತನುಜೆ =ಮಗಳು; ಕಡುಕೂರ್ಮೆ =ಹೆಚ್ಚಿನ ಪ್ರೀತಿ; ಪೂಜುವುದು =ಗೌರವಿಸುವುದು; ಅಣುಗಿ =ಮಗಳು; ಕಿಟ್ಟಿದ =ಕೈಗೆ ಬಂದ; ನೇಮಗಾರ =ನಿಷ್ಠಾವಂತ; ಷೋಡಶದಾನ =ಹದಿನಾರು ದಾನ; ವಸನ =ವಸ್ತ್ರ; ಮನ್ನಣೆ =ಗೌರವ; ಕನ್ನೆರನ್ನೆ =ಕನ್ಯಾಮಣಿ; ಪರಕೆ =ಹರಸುವಿಕೆ; ಮುದ =ಸಂತೋಷ;

## II. ಈ ಪ್ರಶ್ನೆಗಳಿಗೆ ಸಂಕ್ಷಿಪ್ತವಾಗಿ ಉತ್ತರಿಸಿ.

1. ಕ್ಷೀರ ಸಾಗರದ ಕೀರ್ತಿ ಹೇಗೆ ಹೆಚ್ಚಿತು ?
2. ಸ್ತ್ರೀಯನ್ನು ಯಾವ ದೃಷ್ಟಿಯಿಂದ ನೋಡಬೇಕು ?
3. ಹೆಣ್ಣನ್ನು ಎಂತಹ ವರನಿಗೆ ನೀಡಬೇಕು ?
4. ಹೆಣ್ಣನ್ನು ಎಂತಹ ವರನಿಗೆ ಕೊಡಬಾರದು ?
5. ಹೆಣ್ಣು ಕೇಳಿದ ವಸ್ತುಗಳನ್ನು ನೀಡಿದ ನಿಷ್ಠಾವಂತರಿಗೆ ಏನು ದೊರೆಯುತ್ತದೆ ?
6. ಕನ್ಯೆಯರು ಮನಃ ಪೂರ್ತಿಯಾಗಿ ಹೇಗೆ ಸತ್ಕರಿಸಿದರೆ ಮನೆ ಅಭಿವೃದ್ಧಿ ಹೊಂದುತ್ತದೆ ?

## III. ಕೆಳಗಿನ ಪ್ರಶ್ನೆಗಳಿಗೆ ವಿವರವಾಗಿ ಉತ್ತರಿಸಿ.

1. ಗಂಡು ಹೆಣ್ಣು ಎಂಬ ಭೇದಭಾವ ಪ್ರಕಟಿಸದೆ ಹೆತ್ತವರು ಹೆಣ್ಣನ್ನು ಹೇಗೆ ಕಾಣಬೇಕು ?
2. ಮಗಳನ್ನು ವರನಿಗೆ ಮದುವೆ ಮಾಡಿಕೊಡುವಾಗ ಹೆತ್ತವರು ಗಮನದಲ್ಲಿಡಬೇಕಾದ ಅಂಶಗಳಾವುವು ?
3. ಹೋದ ಮನೆಗೆ ಸ್ತ್ರೀ ತಂದುಕೊಡುವ ಸಂಪತ್ತುಗಳು ಯಾವುವು ? ಅದನ್ನು ಅವಳು ಹೇಗೆ ಸಂಪಾದಿಸುತ್ತಾಳೆ ?

4. ಹೆಣ್ಣು ಮಕ್ಕಳನ್ನು ಎಲ್ಲರೂ ಹೇಗೆ ಗೌರವಿಸಬೇಕೆಂದು ಈ ಪದ್ಯಗಳಲ್ಲಿ ನಿರೂಪಿಸಲಾಗಿದೆ ?

**IV. ಕೆಳಗಿನ ವಾಕ್ಯಗಳನ್ನು ಸಂದರ್ಭ ಸಹಿತ ವಿವರಿಸಿರಿ.**

1. ಪೆಣ್ಣ ಪೆತ್ತವರು ಪೆರ್ಚುವರು.
2. ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ.
3. ಒಸೆದಿತ್ತುದನೊಡಬಡುವಳು ಪೆಣ್.
4. ಕಣ್ಗೆ ಸೊಗಸುವ ಸೊಬಗನಾರು.
5. ಬಡವರಾದೆಮಗೆಲ್ಲಿ ಬರ್ಪುದೊಡವೆ.
6. ಪೊನ್ನುರನ್ನದೊಳು ಪೂಜುವುದು.
7. ಷೋಡಶದಾನದ ಫಲ ಸುಲಭದೊಳು ಕೈಗೂಡುವುದು.
8. ಅದರಿಂದ ಪೆಣ್ಮಕ್ಕಳನಾದರಿಪುದು.

**V. ಭಾಷಾಭ್ಯಾಸ**

**1. ಕೆಳಗಿನ ಪದಗಳಲ್ಲಿರುವ 'ಪ' ಕಾರವನ್ನು 'ಹ'ಕಾರವಾಗಿ ಮಾರ್ಪಡಿಸಿ ಹೊಸಗನ್ನಡದಲ್ಲಿ ಬರೆಯಿರಿ.**

ಪೆಣ್ಣು, ಪೆತ್ತು, ಪೆರ್ಚು, ಪೆಸರು, ಪೊರ, ಪೊನ್ನು, ಪಿತ್ತಳೆ, ಪುಟ್ಟು, ಪೊಕ್ಕು, ಪರಕೆ

**2. ಕೆಳಗಿನ ಪದಗಳನ್ನು ಉಪಯೋಗಿಸಿ ಸ್ವಂತ ವಾಕ್ಯ ರಚಿಸಿರಿ.**

ಬಳೆವುದು, ಬೀಳುಗಳೆ, ಒಡಬಡು, ಬಲ್ಮೆ, ಮರುಕ, ಮನ್ನಿಸು, ಪೂಜುವುದು, ಮುದ

**VI. ಚಟುವಟಿಕೆ**

1. ಸಾಂಗತ್ಯದಲ್ಲಿರುವ ಈ ಹಾಡುಗಳನ್ನು ರಾಗವಾಗಿ ಹಾಡಲು ಕಲಿಯಿರಿ.
2. ಈ ಪದ್ಯಭಾಗದ ಆರಂಭದ ಐದು ಪದ್ಯಗಳನ್ನು ಬಾಯಿಪಾಠ ಮಾಡಿರಿ.



# 6. ಉತ್ತರನ ಪೌರುಷ

**- ಕುಮಾರವ್ಯಾಸ**

ಅಹುದಹುದು ತಪ್ಪೇನು ಜೂಜಿನ
ಕುಹಕದಲಿ ಪಾಂಡವರ ಸೋಲಿಸಿ
ಮಹಿಯ ಕೊಂಡಂತೆನ್ನ ಕೆಣಕಿದನೇ ಸುಯೋಧನನು
ಸಹಸದಿಂದವೆ ತುಱುವ ಮರಳಿಚಿ
ತಹೆನು ಬಳಿಕಾ ಕೌರವನ ನಿ
ರ್ವಹಿಸಲೀವೆನೆ ಸೂಱೆಗೊಂಬೆನು ಹಸ್ತಿನಾಪುರವ

ಆರೊಡನೆ ಕಾದುವೆನು ಕೆಲಬರು
ಹಾರುವರು ಕೆಲರಂತಕನ ನೆರೆ
ಯೂರವರು ಕೆಲರಧಮ ಕುಲದಲಿ ಜನಿಸಿ ಬಂದವರು
ವೀರರೆಂಬವರಿವರು ಮೇಣಿ
ನ್ನಾರ ಹೆಸರುಂಟವರೊಳೆಂದು ಕು
ಮಾರ ನೆಣಗೊಬ್ಬಿನಲಿ ನುಡಿದನು ಹೆಂಗಳಿದಿರಿನಲಿ

ಅಱಿಯೆನೇ ಗಾಂಗೇಯನನು ತಾ
ನಱಿಯದವನೇ ದ್ರೋಣ ಕುಲದಲಿ
ಕೊಱತೆಯಾಗಿಹ ಕರ್ಣನೆಂಬವನೆನಗೆ ಸರಿಯಹನೆ
ಬಱಿಯ ಬಯಲಾಡಂಬರದಿ ತುಱು
ಸೆಱೆಯ ಹಿಡಿದರೆ ತಮ್ಮ ಹೆಂಡಿರ
ಸೆಱೆಯ ತಾರದೆ ಮಾಣೆನೆಂದನು ನಾರಿಯರ ಮುಂದೆ

ನುಡಿದು ಫಲವೇನಿನ್ನು ಸಾರಥಿ
ಮಡಿದ ನಿನ್ನಿನ ಬವರದಲಿ ನಾ
ಮಡುಹನಾದೆನು ಶಿವಶಿವಾಯಿಂದೆನ್ನ ಕೈ ಮನಕೆ
ಗಡಣಿಸುವ ಸಾರಥಿಯನೊಬ್ಬನ
ಪಡೆದೆನಾದರೆ ಕೌರವೇಂದ್ರನ
ಪಡೆಗೆ ಹಬ್ಬವ ಮಾಡುವೆನು ತೋಱುವೆನು ಕೈಗುಣವ

ಸಾರಥಿಯ ಶಿವ ಕೊಟ್ಟನಾದರೆ
ಮಾರಿಗುಬ್ಬಸವಾಗದೇ ಜವ
ನೂರು ತುಂಬದೆ ಹಬ್ಬವಾಗದೆ ರಣಪಿಶಾಚರಿಗೆ
ದೋರೆಗರುಳಲಿ ಶಾಕಿನಿಯರೊಡ
ಲೇರು ತುಂಬದೆ ಡೊಳ್ಳು ನೂಕದೆ
ಭೂತಭೇತಾಳರಿಗೆ ಹೋಹುದೆ ಬಱಿದೆ ರಣವೆಂದ

ಕೇಳಿದನು ಕಲಿಪಾರ್ಥನಾತನ
ಬಾಲ ಭಾಷೆಗಳೆಲ್ಲವನು ಪಾಂ
ಚಾಲೆಗೆಕ್ಕಟಿ ನುಡಿದನಾವಿನ್ನಿಹುದು ಮತವಲ್ಲ
ಕಾಲ ತುಂಬಿತು ನಮ್ಮ ರಾಜ್ಯದ
ಮೇಲೆ ನಿಲ್ಲಲು ಬೇಕು ಕೌರವ
ರಾಳು ನಮಗೋಸುಗವೆ ಬಂದುದು ಕಾಂತೆ ಕೇಳೆಂದ

ನರನ ಸಾರಥಿಯೆಂದು ನೀನು
ತ್ತರೆಗೆ ಸೂಚಿಸು ತನ್ನನೀಗಳೆ
ಕರೆಸೆನಲು ಕೈಕೊಂಡು ದ್ರೌಪದಿ ಬಂದಳೊಲವಿನಲಿ
ತರುಣಿ ಕೇಳರ್ಜುನನ ಸಾರಥಿ
ವರ ಬೃಹನ್ನಳೆ ಖಾಂಡವಾಗ್ನಿಯ
ಹೊರೆದ ಗಡ ತಾನೆಂದು ಸತಿಯುತ್ತರೆಗೆ ಹೇಳಿದಳು

ಕೇಳಿ ಹರುಷಿತೆಯಾದಳುತ್ತರೆ
ಯೋಲಗಕೆ ಬಂದಣ್ಣನಂಘ್ರಿಗೆ
ಲೋಲ ಲೋಚನೆಯೆಱಗಿ ಕೈಮುಗಿದೆಂದಳೀ ಹದನ
ಕೇಳಿದೆನು ಸಾರಥಿಯ ನೆಲೆಯನು
ಕಾಳೆಗಕೆ ನಡೆಯಣ್ಣ ದೇವ ನೃ
ಪಾಲಕರ ಜಯಿಸೆಂದೊಡುತ್ತರ ನಗುತ ಬೆಸಗೊಂಡ



ತಂಗಿ ಹೇಳೌ ತಾಯೆ ನಿನಗೀ
ಸಂಗತಿಯನಾರಱುಹಿದರು ಬಳಿ
ಕಂಘುವಣೆಯುಳ್ಳವನೆ ಸಾರಥಿತನದ ಕೈಮೆಯಲಿ
ಮಂಗಳವಲಾ ಬಳಿಕ ರಣದೊಳ
ಭಂಗನಹೆ ನಿನ್ನಾಣೆ ತನ್ನಯ
ತುಂಗ ವಿಕ್ರಮತನವನುಳುಹಿದೆ ಲೇಸು ಲೇಸೆಂದ

ಎಂದಳೀ ಸೈರಂಧ್ರಿ ಸುರಪನ
ನಂದನವ ಸುಡುವಂದು ಪಾರ್ಥನ
ಮುಂದೆ ಸಾರಥಿಯಾದ ಗಡ ನಾವಱಿಯೆವೀ ಹದನ
ಹಿಂದುಗಳೆಯದೆ ಕರೆಸು ನಮ್ಮ ಬೃ
ಹಂದಳೆಯನೆನೆ ನಗುತ ಲೇಸಾ
ಯ್ತೆಂದು ಪರಮೋತ್ಸಾಹದಲಿ ಸೈರಂಧ್ರಿಗಿಂತೆಂದ

ಸಾರಥಿಯ ಕೊಟ್ಟೆನ್ನನುಳುಹಿದೆ
ವಾರಿಜಾನನೆ ಲೇಸು ಮಾಡಿದೆ
ಕೌರವನ ತನಿಗರುಳ ತೆಗೆವೆನು ತಡವ ಮಾಡಿಸದೆ
ನಾರಿ ನೀನೇ ಹೋಗಿ ಪಾರ್ಥನ
ಸಾರಥಿಯ ತಾ ಎನಲು ನಮ್ಮನು
ವೀರ ಬಗೆಯನು ನಿಮ್ಮ ತಂಗಿಯ ಕಳುಹಿ ಕರೆಸೆನಲು

ವರ ನಿರಾಜಿಯ ನಿಱಿಯ ರಭಸದ
ಚರಣದಂದುಗೆ ದನಿಯ ಗಮನದ
ಭರದಿ ಕಿಱುಬೆಮರಿಡುತೆ ನಡೆತರುತಿರ್ದಳಿಂದುಮುಖಿ
ಬರವ ಕಂಡನು ಪಾರ್ಥನೇನು
ತ್ತರೆ ಕುಮಾರಿ ಕಠೋರಗತಿಯಲಿ
ಬರವು ಭಾರಿಯ ಕಾರ್ಯವನು ಸೂಚಿಸುವುದೆನೆ ನಗುತ

ನೆರೆದು ಬಂದರು ಹಸ್ತಿನಾಪುರ
ದರಸುಗಳು ಹೊಲನೊಲಗೆ ಶತಸಾ
ವಿರದ ತುಱುಗಳ ಹಿಡಿದರಳಿದುದು ಗೋಪಪಡೆ ಕಾದಿ
ಮರಳಿಚುವರೆಮ್ಮಣ್ಣದೇವನ
ಧುರುಕೆ ಸಾರಥಿಯಿಲ್ಲ ನೀವಾ
ನರನ ಸಾರಥಿಯೆಂದು ಕೇಳಿದೆವೆಂದಳಿಂದುಮುಖಿ

ಇನ್ನು ನೀವೇ ಬಲ್ಲಿರೆನೆ ನಡೆ
ನಿನ್ನ ಮಾತನು ಮೀರಬಲ್ಲೆನೆ
ಮುನ್ನ ಸಾರಥಿಯಹೆನು ನೋಡುವೆನೆನುತ ವಹಿಲದಲಿ
ಬೆನ್ನಲಬಲೆಯನೈದಲಾ ಸಂ
ಪನ್ನ ಬಲನೋಲಗಕೆ ಬರೆ ಹ
ರ್ಷೋನ್ನತಿಯಲುತ್ತರ ಕುಮಾರಕ ಕರೆದು ಮನ್ನಿಸಿದ

ಎಲೆ ಬೃಹನ್ನಳೆ ತೆತ್ತುದೆನಗ
ಗ್ಗಳೆಯರೊಳು ವಿಗ್ರಹವು ಸಾರಥಿ
ಯಳಿದನೆನ್ನವ ನೀನು ಸಾರಥಿಯಾಗಿ ಸಮರದಲಿ
ಉಳುಹಬೇಹುದು ನೀ ಸಮರ್ಥನು
ಫಲುಗುಣನ ಸಾರಥಿಯಲೈ ನೀ
ನೊಲಿದು ಮೆಚ್ಚಲು ಕಾದಿ ತೋಱುವೆನಹಿತ ಸೇನೆಯಲಿ

ಭರತ ವಿದ್ಯಾ ವಿಷಯದಲ್ಲಿಯ
ಪರಿಚಯವು ನಮಗಲ್ಲದೀ ಸಂ
ಗರದ ಸಾರಥಿತನವ ಮಱೆದೆವು ಹಲವು ಕಾಲದಲಿ
ಅರಿಭಟರು ಭೀಷ್ಮಾದಿಗಳು ನಿಲ
ಲರಿದು ಸಾರಥಿತನದ ಕೈ ಮನ
ಬರಡರಿಗೆ ದೊರೆಕೊಂಬುದೇ ರಣ ಸೂಱೆಯಲ್ಲೆಂದ

ಆನಿರಲು ಭೀಷ್ಮಾದಿಗಳು ನಿನ
ಗೇನ ಮಾಡಲು ಬಲ್ಲರಳುಕದೆ
ನೀನು ಸಾರಥಿಯಾಗು ನಿಮಿಷಕೆ ಗೆಲುವೆನವರುಗಳ
ತಾನದಾರೆಂದಱಿಯಲಾ ಗುರು
ಸೂನು ಕರ್ಣ ದ್ರೋಣರೆಂಬವ
ರಾನಱಿಯದವರಲ್ಲ ಸಾರಥಿಯಾಗು ಸಾಕೆಂದ

ಮಂಗಳಾರತಿಯೆತ್ತಿದರು ನಿಖಿ
ಳಾಂಗನೆಯರುತ್ತರಗೆ ನಿಜ ಸ
ರ್ವಾಂಗ ಶೃಂಗಾರದಲಿ ಹೊಳೆಯುತ ಬಂದು ರಥವೇಱಿ
ಹೊಂಗೆಲಸದಾ ಕವಚವನು ಪಾ
ರ್ಥಂಗೆ ಕೊಟ್ಟನು ಜೋಡು ಸೀಸಕ
ವಂಗದೊಳಗಳವಡಿಸಿ ರಾಜಕುಮಾರನನುವಾದ

ನರನು ತಲೆಕೆಳಗಾಗೆ ಕವಚವ
ಸರಿವುತಿರೆ ಕೈಹೊಯ್ದು ಘೊಳ್ಳೆಂ
ದರಸಿಯರು ನಗೆ ನಾಚಿದಂತಿರೆ ಪಾರ್ಥ ತಲೆವಾಗಿ
ತಿರುಗಿ ಮೇಲ್ಮೊಗವಾಗಿ ತೊಡಲು
ತ್ತರೆ ಬಳಿಕ ನಸುನಗಲು ಸಾರಥಿ
ಯಱಿಯ ತಪ್ಪೇನೆನುತಲುತ್ತರತಾನೆ ತೊಡಿಸಿದನು

ಕವಚವನು ತೊಡಲಱಿಯದವನಾ
ಹವಕೆ ಸಾರಥಿತನವ ಮಾಡುವ
ಹವಣು ತಾನೆಂತೆನುತ ನಕ್ಕರು ನಿಖಿಳ ನಾರಿಯರು
ಬವರವನು ನಮ್ಮಣ್ಣ ಗೆಲಿದಪ
ನವರ ಮಣಿ ಪರಿಧಾನವಾಭರ
ಣವನು ಸಾರಥಿ ಕೊಂಡು ಬಾ ಎಂದಳು ಸರೋಜಮುಖಿ

ನಸುನಗುತೆ ಕೈಕೊಂಡನರ್ಜುನ
ನೆಸಗಿದನು ರಥವನು ಸಮೀರನ
ಮಿಸುಕಲೀಯದೆ ಮಿಕ್ಕು ನಡೆದುವು ವಿಗಡ ವಾಜಿಗಳು
ಹೊಸ ಪರಿಯ ಸಾರಥಿಯಲಾ ನಮ
ಗಸದಳವು ಸಂಗಾತ ಬರಲೆಂ
ದುಸಿರದುಳಿದುದು ಹಿಂದೆ ಪುರದಲಿ ಚಾತುರಂಗ ಬಲ

ಎಲೆ ಪರೀಕ್ಷಿತ ತನಯ ಕೇಳಾ
ಫಲುಗುಣನು ವೇಗದಲಿ ರಥವನು
ಕೊಳುಗುಳಕೆ ತರೆ ಕಂಡನುತ್ತರ ಮುಂದೆ ದೂರದಲಿ
ತಳಿತ ಕುಂತದ ಬಾಯಿಧಾರೆಯ
ಹೊಳವುಗಳ ಹೊದರೆದ್ದ ಸಿಂಧವ
ಸೆಳೆಯ ಸೀಗುರಿಗಳ ಸುರೌದ್ರದ ಸಕಲ ಮೋಹರವ

ಜಡಿವ ಖಡ್ಗದ ಕಿಡಿಯ ಸೇನೆಯ
ಕಡುಹುಗಳ ಕೇಸುರಿಯ ಬಲದು
ಗ್ಗಡದ ರಭಸದ ರೌದ್ರ ರವ ಛಟಛಟಿತ ನಿಸ್ವನದ
ಇಡಿದ ಧೂಳಿಯ ಧೂಮರಾಶಿಯ
ಪಡೆ ವಿರಾಟನ ಮಗನ ಕಂಗಳಿ
ಗೊಡನೊಡನೆ ದಾವಾಗ್ನಿಯಂತಿರೆ ತೋಱಿತಿದಿರಿನಲಿ

ಹಸಿದ ಮಾರಿಯ ಕಟಕದಲಿ ಕುಱಿ
ನುಸುಳಿ ಬದುಕುವುದೇ ಬೃಹನ್ನಳೆ
ಎಸಗದಿರು ತೇಜಿಗಳ ತಡೆ ಚಮ್ಮಟಿಕೆಯನು ಬಿಸುಡು
ಮಿಸುಕಬಹುದೇ ಪ್ರಳಯಕಾಲನ
ಮುಸುಕನುಗಿವವರಾರು ಕೌರವ
ನಸಮಬಲನೈ ರಥವ ಮರಳಿಚು ಪುರಕೆ ನಡೆಯೆಂದ



ಏಕೆ ಸಾರಥಿ ರಥವ ಮುಂದಕೆ
ನೂಕಿ ಗಂಟಲ ಕೊಯ್ವೆ ಸುಡು
ಕಾಕಲಾ ಕಣ್ಣೊಡೆಯುತಿದೆ ಕಾಣಾ ಮಹಾಬಲವ
ನಾಕ ನಿಳಯರಿಗರಿದು ನಿನಗೆ ವಿ
ವೇಕವೆಳ್ಳನಿತಿಲ್ಲಲಾ ತೆಗೆ
ಸಾಕು ವಾಘೆಯ ಮರಳಿ ಸೆಳೆ ತೇಜಿಗಳ ತಿರುಹೆಂದ

ಎಂದೊಡರ್ಜುನ ನಗುತ ರಥವನು
ಮುಂದೆ ನಾಲ್ಕೆಂಟಡಿಯನೂಕಲು
ಕೊಂದನೀ ಸಾರಥಿಯೆನುತ ಸಂವರಿಸಿ ಮುಂಜೆರಗ
ನಿಂದು ಮೆಲ್ಲನೆ ರಥದ ಹಿಂದಕೆ
ಬಂದು ಧುಮ್ಮಿಕ್ಕಿದನು ಬದುಕಿದೆ
ನೆಂದು ನಿಟ್ಟೋಟದಲಿ ಹಾಯ್ದನು ಬಿಟ್ಟ ಮಂಡೆಯಲಿ

ನೋಡಿದನು ಕಲಿಪಾರ್ಥನೀ ಕೇ
ಡಾಡಿ ಕೆದಱಿದ ಕೇಶದಲಿ ಕೆ
ಟ್ಟೋಡುತಿರಲೆಲೆ ಪಾಪಿ ಹಾಯ್ದನು ಹಿಡಿಯಬೇಕೆನುತ
ಕೂಡೆ ಸೂಟಿಯೊಳಟ್ಟಲಿಳೆಯ
ಲ್ಲಾಡಿತಹಿಪತಿ ಕುಸಿದನತ್ತಲು
ನೋಡಿ ಕೌರವ ಸೇನೆ ಕೆಡೆದುದು ನಗೆಯ ಕಡಲೊಳಗೆ

ಇಟ್ಟಣಿಸಿ ನರ ನೂಱು ಹೆಜ್ಜೆಯೊ
ಳಟ್ಟಿ ಹಿಡಿದನಿದೇನ ಮಾಡಿದೆ
ಹುಟ್ಟಿದೆಯೊ ಹಾದರಕೆ ಬಾಹುಜ ಬೀಜವೋ ಮೇಣು
ದಿಟ್ಟತನ ಮಿಗೆ ಹೆಂಗಳಿದಿರಲಿ
ಹೊಟ್ಟುಗುಟ್ಟಿದೆ ಹಗೆಗಳಿದಿರಲಿ
ಬಿಟ್ಟುಕೊಂಡೆ ದುರಾತ್ಮ ಮುಱಿದೆ ವಿರಾಟನನ್ವಯವ

ಹಲುಗಿರಿದು ಬಾಯೊಳಗೆ ಬೆರಳಿ
ಟ್ಟಳುಕಿ ತಲೆವಾಗಿದನು ಸಾರಥಿ
ಕಳುಹಿ ಕಳೆಯೈ ನಿನ್ನ ಬಸಿರಲಿ ಮರಳಿ ಬಂದವನು
ಕೊಳಗುಳದೊಳೀಯೊಡ್ಡ ಮುಱಿವ
ಗ್ಗಳೆಯರುಂಟೇ ರಿಪುಗಳಿಂದಲೆ
ಕೊಲಿಸದಿರು ನೀಂ ಕುತ್ತಿ ಕೆಡಹು ಕಠಾರಿಯಿದೆಯೆಂದ

ಮನದೊಳೊಡಲೊಡೆವಂತೆ ನಗುತ
ರ್ಜುನನು ಗಜಱಿದನೆಲವೊ ಸಭೆಯಲಿ
ವನಜಮುಖಿಯರ ಮುಂದೆ ಸೊರಹಿದೆ ಬಾಯ್ಗೆ ಬಂದಂತೆ
ಅನುವರದೊಳೇನಾಯ್ತು ರಿಪುವಾ
ಹಿನಿಯನಿಱಿಯದೆ ನಾಡ ನರಿಯವೊ
ಲೆನಗೆ ನೀ ಹಲುಗಿರಿಯೆ ಬಿಡುವೆನೆ ಕಾದು ನಡೆಯೆಂದ

## ಕವಿ-ಕಾವ್ಯ ವಿಚಾರ

'ಕರ್ಣಾಟ ಭಾರತ ಕಥಾ ಮಂಜರಿ'ಯನ್ನು ರಚಿಸಿದ ನಾರಣಪ್ಪನು ಧಾರವಾಡ ಜಿಲ್ಲೆಯ ಗದುಗಿನ ಬಳಿಯ ಕೋಳಿವಾಡದವನು. ಇವನ ಕಾಲ ಕ್ರಿ.ಶ. **1430.** ಗದುಗಿನ ವೀರನಾರಾಯಣನ ಪರಮ ಭಕ್ತನಾದ ಇವನು ವ್ಯಾಸ ಭಾರತದ ಮೊದಲ ಹತ್ತು ಪರ್ವಗಳನ್ನು ಭಾಮಿನಿ ಷಟ್ಪದಿಯಲ್ಲಿ ಬರೆದಿದ್ದಾನೆ. ಇವನ ರೂಪಕಗಳು ಪ್ರಖ್ಯಾತವಾಗಿದ್ದು ವಿಮರ್ಶಕರು ಇವನನ್ನು 'ರೂಪಕ ಸಾಮ್ರಾಜ್ಯ ಚಕ್ರವರ್ತಿ' ಎಂದೇ ಪ್ರಶಂಸಿಸಿದ್ದಾರೆ. ಸಂಸ್ಕೃತದಲ್ಲಿ ವ್ಯಾಸ ಮಹರ್ಷಿಗಳು ರಚಿಸಿರುವ ಭಾರತವನ್ನು ಕನ್ನಡದಲ್ಲಿ ಸರ್ವರಿಗೂ ತಿಳಿಯುವಂತೆ ರಚಿಸಿರುವುದರಿಂದ ಇವನಿಗೆ 'ಕುಮಾರವ್ಯಾಸ' ಎಂಬ ಬಿರುದು ಬಂದಿದೆ. 'ಕರ್ಣಾಟ ಭಾರತ ಕಥಾ ಮಂಜರಿ'ಗೆ 'ಗದುಗಿನ ಭಾರತ' ಎಂಬ ಇನ್ನೊಂದು ಹೆಸರೂ ಇದೆ. ಈ ಪದ್ಯ ಭಾಗವನ್ನು ಕುಮಾರವ್ಯಾಸ ಭಾರತದ 'ವಿರಾಟ ಪರ್ವ' ದಿಂದ ಆರಿಸಿಕೊಳ್ಳಲಾಗಿದೆ.

ಕುಮಾರವ್ಯಾಸನು ತನ್ನ ಕಾವ್ಯದಲ್ಲಿ ತನ್ನ ಹಾಸ್ಯ ಪ್ರವೃತ್ತಿಯನ್ನು 'ಉತ್ತರನ ಪೌರುಷ' ಪ್ರಸಂಗದಲ್ಲಿ ವ್ಯಕ್ತಗೊಳಿಸಿದ್ದಾನೆ. ಉತ್ತರನೆಂದರೆ ಹೇಡಿತನಕ್ಕೊಂದು



ನಿದರ್ಶನ. 'ಉತ್ತರನ ಪೌರುಷ ಒಲೆಯ ಮುಂದೆ' ಎಂಬ ಗಾದೆಯ ಮಾತಿದೆ.

ಕೌರವರು ವಿರಾಟರಾಜನ ಗೋವುಗಳನ್ನು ಹಿಡಿದಾಗ ಗೋಪಾಲಕನೊಬ್ಬನು ಬಂದು ಉತ್ತರ ಕುಮಾರನಲ್ಲಿ ದೂರು ಹೇಳುತ್ತಾನೆ. ಆಗ ಅವನು ಅರಮನೆಯ ಸ್ತ್ರೀಯರ ನಡುವೆ ಇದ್ದುದರಿಂದ ಗೋಪಾಲಕನಿಗೆ ಇನ್ನು ಭಯಪಡಬೇಡ ಎಂದು ಹೇಳಿ ಅರಮನೆಯ ಲಲನೆಯರ ಮುಖ ನೋಡಿ ಮೀಸೆ ತಿರುವುತ್ತ ತನ್ನ ತೋರಿಕೆಯ ಪ್ರತಾಪವನ್ನು ಕೊಚ್ಚಿಕೊಳ್ಳುತ್ತಾನೆ. ಪಾಂಡವರನ್ನು ಕಾಡಿಗೆ ಅಟ್ಟಿದೆನೆಂಬ ಅಹಂಕಾರವನ್ನು ದುರ್ಯೋಧನನು ತನ್ನ ಹತ್ತಿರ ತೋರಿಸುತ್ತಾನೆಯೇ? ಸೇನೆಯಲ್ಲಿ ಕೆಲವರು ಬ್ರಾಹ್ಮಣರು, ಕೆಲವರು ನೀಚ ಕುಲದವರು. ನಾನು ಯಾರೊಡನೆ ಕದನ ನಡೆಸಲಿ ? ಎಂದು ಚಿಂತಿಸುತ್ತಾನೆ. ಆದರೂ ಗೋವುಗಳನ್ನು ಸೆರೆಹಿಡಿಯಲು ಬಂದ ಶತ್ರುಗಳ ಕೊಬ್ಬನ್ನು ಮುರಿದು ಕೌರವನ ಸೇನೆಯನ್ನು ಧೂಳೀಪಟ ಮಾಡುತ್ತೇನೆ. ನಿನ್ನೆಯ ಯುದ್ಧದಲ್ಲಿ ತನ್ನ ಸಾರಥಿ ಸತ್ತ. ಈಗ ನನಗೆ ಸರಿಯಾದ ಸಾರಥಿಯಿದ್ದಿದ್ದರೆ ಕೌರವನ ಸೇನೆಗೆ ಹಬ್ಬವನ್ನು ಮಾಡುತ್ತಿದ್ದೆ ಎಂದು ಹೆಂಗಸರ ಮುಂದೆ ಜಂಬದಿಂದ ಬೀಗುತ್ತಾನೆ. ಮುಂದೆ ಬೃಹನ್ನಳೆಯಾದ ಅರ್ಜುನನನ್ನು ಸಾರಥಿಯನ್ನಾಗಿ ಮಾಡಿಕೊಂಡು ಯುದ್ಧರಂಗಕ್ಕೆ ಬರುತ್ತಾನೆ. ಆದರೆ ಕೌರವರ ಸೇನಾ ಸಾಗರವನ್ನು ಕಂಡು ಹೆದರಿ ತಳಮಳಿಸುವ ಪದ್ಯ ಭಾಗ ಇಲ್ಲಿದೆ.

## I. ಕಠಿಣ ಪದಗಳ ಅರ್ಥ

ಕುಹಕ =ಮೋಸ, ಕಪಟ; ಮಹಿ =ಭೂಮಿ; ಕೆಣಕು =ಕೆರಳಿಸು, ರೇಗಿಸು; ಸಹಸ =ಸಾಹಸ, ಸಾಮರ್ಥ್ಯ; ತುರು =ಹಸು; ಸೂರೆ =ಲೂಟಿ, ಕೊಳ್ಳೆ; ಹಾರುವರು =ಬ್ರಾಹ್ಮಣರು; ಅಂತಕ =ಯಮ; ಅಧಮ =ನೀಚ; ನೆಣಗೊಬ್ಬು =ಅತಿಯಾದ ಸೊಕ್ಕು; ಹೆಂಗಳೆಯರು =ಹೆಂಗಸರು; ಗಾಂಗೇಯ =ಗಂಗೆಯ ಮಗ, ಭೀಷ್ಮ; ಮಾಣೆ =ಸುಮ್ಮನಿರಲಾರೆ; ಬವಱುಯುದ್ಧ; ಮಡುಹು =ಕೊಲ್ಲು; ಗಡಣಿಸುವ =ನೆರವೇರಿಸುವ, ಸಮರ್ಥ; ಜವ =ಯಮ; ಶಾಕಿನಿ =ಒಂದು ಕ್ಷುದ್ರ ದೇವತೆ; ಪಾರ್ಥ =ಅರ್ಜುನ; ಪಾಂಚಾಲೆ =ಪಾಂಚಾಲ ದೇಶದ ರಾಜಕುಮಾರಿ, ದ್ರೌಪದಿ; ಕಾಂತೆ =ಪತ್ನಿ; ಅಂಘ್ರಿ =ಪಾದ, ಚರಣ; ಲೋಚನ =ಕಣ್ಣು; ಎರಗಿ =ನಮಸ್ಕರಿಸಿ; ಹದನ =ವಿಷಯ; ಏಕ್ಕಟಿ =ಏಕಾಂತ; ಬೆಸಗೊಂಡ =ಕೇಳಿದ; ಕೈಮೆ =ಕೆಲಸ, ಕಾರ್ಯ; ಸೈರಂಧ್ರಿ =ಗಂಧವನ್ನು ಅರೆಯುವವಳು, ದ್ರೌಪದಿ; ಅಂಘವಣೆ =ಧೈರ್ಯ, ವಿಧಾನ; ಸುರಪ =ಇಂದ್ರ; ವಾರಿಜಾನನೆ =ತಾವರೆಯಂತೆ ಮುಖವುಳ್ಳವಳು, ಸ್ತ್ರೀ; ತನಿ =ಅತಿಶಯವಾದ,

ಕೊಬ್ಬಿದ; ನಿರಾಜಿ =ಜರತಾರಿ ವಸ್ತ್ರ ; ಇಂದುಮುಖಿ =ಚಂದ್ರಮುಖಿ (ಉತ್ತರೆ); ಭಾರಿಯ =ಮಹತ್ವದ, ಘನವಾದ; ಧುರ =ಕಾಳಗ, ಕದನ; ವಹಿಲ =ವೇಗ; ತೆತ್ತುದು =ಸಂಭವಿಸಿತು; ಸಮರ =ಯುದ್ಧ ; ಉಳುಹು =ಉಳಿಸು; ಫಲುಗುಣ =ಅರ್ಜುನ; ಸಂಗರ =ಯುದ್ಧ ; ಅರಿಭಟ =ಶತ್ರುಸೈನಿಕ; ಸೂನು =ಮಗ; ನಿಖಿಳ =ಎಲ್ಲಾ, ಸಕಲ; ಅಂಗನೆ =ಸ್ತ್ರೀ; ಸೀಸಕ =ಶಿರಸ್ತ್ರಾಣ; ನರ =ಅರ್ಜುನ; ಕೈಹೊಯ್ದು =ಚಪ್ಪಾಳೆತಟ್ಟಿ ; ಆಹವ =ಯುದ್ಧ; ಹವಣೆ =ಉಪಾಯ, ಹಂಚಿಕೆ; ಬವರ =ಯುದ್ಧ ; ಸಮೀರ =ಗಾಳಿ; ವಿಗಡ =ಸಾಹಸ; ವಾಜಿ =ಕುದುರೆ; ಪರೀಕ್ಷಿತ =ಅಭಿಮನ್ಯುವಿನ ಮಗ; ತನಯ =ಮಗ; ಪರೀಕ್ಷಿತ ತನಯ =ಪರೀಕ್ಷಿತನ ಮಗ (ಜನಮೇಜಯ); ಕೊಳಗುಳ =ರಣಭೂಮಿ; ಕುಂತ =ಈಟಿ; ಹೊದರು =ಗುಂಪು; ಸೀಗುರಿ =ಚಾಮರ; ಕಡುಹು =ಪರಾಕ್ರಮ; ನಿಸ್ವನ =ಧ್ವನಿ; ಧೂಮ =ಹೊಗೆ; ಕಟಕ =ಸೈನ್ಯ; ತೇಜಿ =ಕುದುರೆ; ಕಾಕಲಾ =ಹಗೆತನ; ವಾಘೆ =ಕಡಿವಾಣ; ತಿರುಹು =ತಿರುಗಿಸು; ಮುಂಜೆರಗು =ಸೆರಗಿನ ಮುಂಭಾಗ; ನಿಟ್ಟೋಟ =ನಿಡಿದಾದ ಓಟ; ಕೇಶ =ಕೂದಲು; ಅಹಿಪತಿ =ಸರ್ಪರಾಜ, ಆದಿಶೇಷ; ಹಾದರ =ವ್ಯಭಿಚಾರ; ಬಾಹುಜ =ಕ್ಷತ್ರಿಯ; ಅನ್ವಯ =ಕುಲ; ಅಗ್ಗಳಿಕೆ =ದೊಡ್ಡಸ್ಥಿಕೆ, ಸಾಮರ್ಥ್ಯ; ರಿಪು =ಶತ್ರು; ಗಜರು =ಗದರಿಸು, ಬೆದರಿಸು; ಸೊರಡು =ಗಳಹು, ಅರ್ಥಹೀನವಾದ ಮಾತು; ಅನುವರ =ಯುದ್ಧ; ವಾಹಿನಿ =ಸೈನ್ಯ, ನದಿ;

## II. ಈ ಪ್ರಶ್ನೆಗಳಿಗೆ ಸಂಕ್ಷಿಪ್ತವಾಗಿ ಉತ್ತರಿಸಿ.

1. ಪಾಂಡವರನ್ನು ಸುಯೋಧನನು ಹೇಗೆ ಸೋಲಿಸಿದ ?
2. ಹೆಂಗಸರ ನಡುವೆ ಉತ್ತರನು ಕೊಬ್ಬಿನಿಂದ ಏನೆಂದು ನುಡಿದನು ?
3. ಸಾರಥಿಯು ದೊರೆತರೆ ಶತ್ರುಸೇನೆಯನ್ನು ಹೇಗೆ ಧ್ವಂಸ ಮಾಡುವೆನೆಂದು ಉತ್ತರ ಕುಮಾರನು ಹೇಳಿದನು ?
4. ಉತ್ತರೆಯು ಅಣ್ಣನಲ್ಲಿ ಬೃಹನ್ನಳೆಯನ್ನು ಸಾರಥಿಯನ್ನಾಗಿ ಮಾಡಿಕೊಳ್ಳಲು ಹೇಗೆ ನಿವೇದಿಸಿಕೊಂಡಳು ?
5. ತನ್ನ ಯುದ್ಧ ಸಾಮರ್ಥ್ಯವನ್ನು ಉತ್ತರನು ಅರ್ಜುನನಲ್ಲಿ ಹೇಗೆ ಹೇಳಿಕೊಂಡನು ?



6. ಉತ್ತರನನ್ನು ಕಂಡು ಕುರುಸೇನೆ ಏಕೆ ನಕ್ಕಿತು?
7. ಕುರುಸೇನೆಯು ಉತ್ತರನ ಕಣ್ಣಿಗೆ ಹೇಗೆ ಕಂಡಿತು?
8. ಅರ್ಜುನನು ಯಾವ ಮಾತುಗಳಿಂದ ಉತ್ತರನಿಗೆ ಧೈರ್ಯವನ್ನು ನೀಡಿದನು?

## III. ಈ ಪ್ರಶ್ನೆಗಳಿಗೆ ವಿವರವಾಗಿ ಉತ್ತರಿಸಿ.

1. ಉತ್ತರ ಕುಮಾರನು ಹೆಂಗಸರ ಮುಂದೆ ಯಾವ ರೀತಿ ತನ್ನ ಪರಾಕ್ರಮವನ್ನು ಕೊಚ್ಚಿಕೊಳ್ಳುತ್ತಾನೆ ?
2. ಉತ್ತರನ ಸಾರಥಿಯಾಗಲು ಅರ್ಜುನ ಹೂಡಿದ ಉಪಾಯವೇನು?
3. ಸಾರಥಿಯಾದ ಅರ್ಜುನನಲ್ಲಿ ಉತ್ತರನು ತನ್ನ ಯುದ್ದ ಸಾಮರ್ಥ್ಯವನ್ನು ಏನೆಂದು ಬಣ್ಣಿಸಿಕೊಂಡ ?
4. ಅರ್ಜುನನ ರಥವು ಯುದ್ಧರಂಗಕ್ಕೆ ಹೇಗೆ ನುಗ್ಗಿತು ? ಆ ಸೇನೆಯನ್ನು ಕಂಡು ಉತ್ತರನು ಹೇಗೆ ನಡುಗಿ ಹೋದ ?
5. ಅರ್ಜುನನಿಗೂ, ಉತ್ತರ ಕುಮಾರನಿಗೂ ಯುದ್ಧರಂಗದಲ್ಲಿ ನಡೆದ ಮಾತುಕತೆಯನ್ನು ಸಂಗ್ರಹಿಸಿ ಬರೆಯಿರಿ.

## VI. ಕೆಳಗಿನವುಗಳ ಸಂದರ್ಭ ಸ್ವಾರಸ್ಯ ಬರೆಯಿರಿ.

1. ಕೆಲರಂತಕನ ನೆರೆಯೂರವರು.
2. ಕೌರವೇಂದ್ರನ ಪಡೆಗೆ ಹಬ್ಬವ ಮಾಡುವೆನು.
3. ಕೌರವನ ತನಿಗರುಳ ತೆಗೆವೆನು.
4. ಸಮೀರನ ಮಿಸುಕಲೀಯದೆ ಮಿಕ್ಕ ನಡೆದುವು ವಿಗಡ ವಾಜಿಗಳು.
5. ಹಸಿದ ಮಾರಿಯ ಕಟಕದಲಿ ಕುರಿ ನುಸುಳಿ ಬದುಕುವುದೇ
6. ನಾಡನರಿಯವೊಲೆನಗೆ ನೀ ಹಲುಗಿರಿಯೆ ಬಿಡುವೆನೆ

## V. ಭಾಷಾಭ್ಯಾಸ

1. ಕೆಳಗಿನ ಪದಗಳನ್ನು ಸ್ವಂತ ವಾಕ್ಯಗಳಲ್ಲಿ ಉಪಯೋಗಿಸಿರಿ.

ಕೆಣಕು, ನೆಣಗೊಬ್ಬು, ಎರಗು, ಕಡುಹು, ಕೈಹೊಯ್ದು, ನಿಟ್ಟೋಟ, ಅಗ್ಗಳಿಕೆ, ಗಜರು, ಸೊರಹು

2. ಕೆಳಗಿನ ಪದಗಳ ವಿಗ್ರಹ ವಾಕ್ಯ ಮಾಡಿ ಸಮಾಸದ ಹ ೆ ಸ ್ ರ ್ ನ ್ ೦ ೧ ಬರೆಯಿರಿ.

ಗಾಂಗೇಯ, ಭೂತಭೇತಾಳ, ಲೋಲಲೋಚನೆ, ಪಾರ್ಥ, ಸುರಪ, ನಿಟ್ಟೋಟ, ಇಂದುಮುಖಿ, ಮೇಲ್ಮೊಗ, ಮಂಗಳಾರತಿ, ಧೂಮರಾಶಿ, ಕೈಮುಗಿ

## VI. ಚಟುವಟಿಕೆ

1. ಕುಮಾರವ್ಯಾಸ ಭಾರತವನ್ನು ಗಮಕವಾಗಿ ಹಾಡುವುದು ಹೇಗೆಂಬುದನ್ನು ಕೇಳಿ ತಿಳಿಯಿರಿ.
2. ಈ ಭಾಗವನ್ನು ನಾಟಕ ರೂಪದಲ್ಲಿ ಬರೆದು ತರಗತಿಯಲ್ಲಿ ಅಭಿನಯಿಸಿರಿ.

---



# 7. ತಾಳುವಿಕೆಗಿಂತ ತಪವು ಇಲ್ಲ

- ವಾದಿರಾಜ

ತಾಳುವಿಕೆಗಿಂತ ತಪವು ಇಲ್ಲ
ಕೇಳಬಲ್ಲವರಿಗೆ ಹೇಳುವೆನು ಸೊಲ್ಲ

ದುಷ್ಟಮನುಜರು ಪೇಳ್ವ ನಿಷ್ಠುರದ ನುಡಿ ತಾಳು
ಕಷ್ಟ ಬಂದರೆ ತಾಳು ಕಂಗೆಡದೆ ತಾಳು
ನೆಟ್ಟ ಸಸಿ ಫಲ ಬರುವ ತನಕ ಶಾಂತಿಯ ತಾಳು
ಕಟ್ಟು ಬುತ್ತಿಯ ಮುಂದೆ ಉಣಲುಂಟು ತಾಳು

ಹಳಿದು ಹಂಗಿಸುವಂಥ ಹಗೆಯ ಮಾತನು ತಾಳು
ಸುಳಿ ನುಡಿ ಕುಹಕ ಕುಮಂತ್ರವನು ತಾಳು
ಅಳುಕದೆದೆ ಬಿರುಸು ಬಿಂಕದ ನುಡಿಯ ನೀತಾಳು
ಹಲಧರಾನುಜನನ್ನು ಹೃದಯದಲಿ ತಾಳು

ನಕ್ಕು ನುಡಿವರ ಮುಂದೆ ಮುಕ್ಕರಿಸದೆ ತಾಳು
ಅಕ್ಕಸವ ಮಾಡುವರ ಅಕ್ಕರದಿ ತಾಳು
ಉಕ್ಕೊ ಹಾಲಿಗೆ ನೀರನಿಕ್ಕು ವಂದದಿ ತಾಳು
ಪಕ್ಷೀಶ ಹಯವದನ ಶರಣೆಂದು ಬಾಳು

### ಕವಿ-ಕಾವ್ಯ ವಿಚಾರ

ವಾದಿರಾಜರು ಹೂವಿನಕೆರೆ ಗ್ರಾಮದವರು. ಅವರು ವ್ಯಾಸರಾಯರ ಶಿಷ್ಯರಾಗಿದ್ದರು. ವಿದ್ಯಾಭ್ಯಾಸದ ನಂತರ ಅವರು ಕೆಲಕಾಲ ದೇಶ ಸಂಚಾರ ಮಾಡಿ ಕೊನೆಗೆ ಸೋದಾಕ್ಷೇತ್ರದಲ್ಲಿ ನೆಲಸಿದರು. ಇವರು ಸಂಸ್ಕೃತದಲ್ಲಿ ರುಕ್ಮಿಣೀಶ ವಿಜಯ ಮುಂತಾದ ಹಲವು ಗ್ರಂಥಗಳನ್ನು ರಚಿಸಿದ್ದಾರೆ. ಕನ್ನಡದಲ್ಲಿ ವೈಕುಂಠ ವರ್ಣನ ಸ್ವಪ್ನಗದ್ಯ, ಭಾರತ ತಾತ್ಪರ್ಯ ನಿರ್ಣಯ ಟೀಕೆ ಮೊದಲಾದ ಗ್ರಂಥಗಳನ್ನು ಬರೆದಿದ್ದಾರೆ. ಕನ್ನಡದಲ್ಲಿ ಅನೇಕ ಕೀರ್ತನೆ, ಸುಳಾದಿ ಉಗಾಭೋಗಗಳನ್ನು

ರಚಿಸಿದರು. ಅವರ ಕೀರ್ತನೆಗಳ ಅಂಕಿತ ಹಯವದನ. ಕೀರ್ತನೆಯಲ್ಲಿ ದಾಸರು ತಾಳ್ಮೆಯ ಮಹತ್ವವನ್ನು ವಿವರಿಸಿದ್ದಾರೆ. ತಾಳ್ಮೆಯು ಎಲ್ಲರಿಗೂ ಎಲ್ಲ ಕಾಲಕ್ಕೂ ಅತ್ಯವಶ್ಯವಾದುದು.

## I. ಕಠಿಣ ಪದಗಳ ಅರ್ಥ

ದುಷ್ಟ =ಕೆಟ್ಟ ; ನಿಷ್ಠುರ =ಕಠಿಣ, ದಯೆಯಿಲ್ಲದ; ಸೊಲ್ಲು =ಮಾತು; ಹಗೆ =ಶತ್ರು; ಮುಕ್ಕರಿಸದೆ =ಮುಗ್ಗರಿಸದೆ; ಉಣಲು =ತಿನ್ನಲು; ಹಳಿ =ಬೈಯು, ನಿಂದಿಸು; ಹಲಧರಾನುಜ =ನೇಗಿಲನ್ನು ಹೊತ್ತವನ ಅಂದರೆ ಬಲರಾಮನ ತಮ್ಮ ಕೃಷ್ಣ ; ಅಕ್ಕಸ =ಸಿಟ್ಟು ; ಪಕ್ಷೀಶ =ನಾರಾಯಣ, ಗರುಡವಾಹನ; ಹಯವದನ =ಕುದುರೆಯ ಮುಖವುಳ್ಳವ; ಅಳುಕದೆ =ಹೆದರದೆ; ಕುಮಂತ್ರ =ಕೆಟ್ಟಮಂತ್ರ; ಸುಳಿನುಡಿ =ಕುಹಕದಮಾತು;

## II. ಈ ಪ್ರಶ್ನೆಗಳಿಗೆ ಸಂಕ್ಷಿಪ್ತವಾಗಿ ಉತ್ತರಿಸಿ.

1. ದುಷ್ಟ ಮನುಜರು ಹೇಳುವ ಮಾತನ್ನು ಹೇಗೆ ತಾಳಬೇಕು ?
2. ಕಷ್ಟ ಬಂದಾಗ ನಾವು ಏನು ಮಾಡಬೇಕು ?
3. 'ತಾಳು' ಪದಕ್ಕೆ ಇರುವ ಎರಡು ವಿಭಿನ್ನ ಅರ್ಥಗಳು ಯಾವುವು ?

## III. ಈ ಪ್ರಶ್ನೆಗಳಿಗೆ ವಿವರವಾಗಿ ಉತ್ತರಿಸಿ.

1. ಯಾವ ಯಾವ ಸಂದರ್ಭದಲ್ಲಿ ನಾವು ತಾಳ್ಮೆಯಿಂದ ಇರಬೇಕೆಂದು ದಾಸರು ಸಲಹೆ ನೀಡಿದ್ದಾರೆ ?
2. 'ತಾಳುವಿಕೆಗಿಂತ ತಪವು ಇಲ್ಲ' ಪದ್ಯದ ಸಾರಾಂಶವನ್ನು ಬರೆಯಿರಿ.

## IV. ಇವುಗಳನ್ನು ಸಂದರ್ಭ ಸಹಿತ ವಿವರಿಸಿ.

1. ಕಷ್ಟ ಬಂದರೆ ತಾಳು ಕಂಗೆಡದೆ ತಾಳು
2. ಸುಳಿನುಡಿ ಕುಹಕ ಕುಮಂತ್ರವನು ತಾಳು
3. ಉಕ್ಕೊ ಹಾಲಿಗೆ ನೀರನಿಕ್ಕುವಂದದಿ ತಾಳು



## V ಹೊಂದಿಸಿ ಬರೆಯಿರಿ.

| | |
|---|---|
| 1. ದುಷ್ಟ ಮನುಜರು ಪೇಳ್ವ | ಕಂಗೆಡದೆ ತಾಳು |
| 2. ಕಷ್ಟ ಬಂದರೆ ತಾಳು | ಮುಕ್ಕರಿಸದೆ ತಾಳು |
| 3. ನಕ್ಕು ನುಡಿವರ ಮುಂದೆ | ನೀರನಿಕ್ಕುವಂದದಿ ತಾಳು |
| 4. ಉಕ್ಕೋ ಹಾಲಿಗೆ | ಕುಮಂತ್ರವನು ತಾಳು |
| 5. ಸುಳಿನುಡಿ ಕುಹಕ | ನಿಷ್ಠುರದ ನುಡಿ ತಾಳು |

## VI. ಸರಿಯಾದ ಉತ್ತರವನ್ನು ಆರಿಸಿ ಬರೆಯಿರಿ.

1. ಹಯವದನ ಎಂಬುದು __________ ಸಮಾಸ.

   (ಬಹುವ್ರೀಹಿ ಸಮಾಸ, ಕ್ರಿಯಾ ಸಮಾಸ, ಗಮಕ ಸಮಾಸ)
2. ಹಲಧರಾನುಜ ಎಂಬುದು __________ ಸಮಾಸ

   (ಕ್ರಿಯಾಸಮಾಸ, ಬಹುವ್ರೀಹಿ ಸಮಾಸ, ಗಮಕ ಸಮಾಸ)
3. ನೀರನಿಕ್ಕು ಎಂಬುದು __________ ಸಮಾಸ.

   (ಕ್ರಿಯಾ ಸಮಾಸ, ಅಂಶಿ ಸಮಾಸ, ತತ್ಪುರುಷ ಸಮಾಸ)
4. ಪಕ್ಷೀಶ ಎಂಬುದು __________ ಸಮಾಸ.

   (ಕ್ರಿಯಾ ಸಮಾಸ, ತತ್ಪುರುಷ ಸಮಾಸ, ಬಹುವ್ರೀಹಿ ಸಮಾಸ)

## VII. ಭಾಷಾಭ್ಯಾಸ

**1. ಈ ಪದಗಳ ವಿರುದ್ಧಾರ್ಥವನ್ನು ಬರೆಯಿರಿ.**

ದುಷ್ಟ, ತಾಳ್ಮೆ, ಶಾಂತಿ, ಕುಮಂತ್ರ

**2. ಈ ಪದಗಳನ್ನು ಬಿಡಿಸಿ ಸಂಧಿಯನ್ನು ಹೆಸರಿಸಿ.**

ಹಲಧರಾನುಜ, ಪಕ್ಷೀಶ, ಉಣಲುಂಟು, ಅಳುಕದೆದೆ

3. ಈ ಪದಗಳನ್ನು ವಿಗ್ರಹ ವಾಕ್ಯ ಮಾಡಿ ಸಮಾಸವನ್ನು ಹೆಸರಿಸಿ.

ಹಲಧರಾನುಜ, ಪಕ್ಷೀಶ, ಹಯವದನ, ನೀರನಿಕ್ಕು

4. ಉಕ್ಕೊ ಹಾಲಿಗೆ ನೀರನಿಕ್ಕುವಂದದಿ ತಾಳು - ಈ ವಾಕ್ಯದಲ್ಲಿ ಬರುವ ಅಲಂಕಾರವನ್ನು ಗುರುತಿಸಿ.

## VIII. ಚಟುವಟಿಕೆ

1. 'ತಾಳಿದವನು ಬಾಳಿಯಾನು' ಎಂಬ ಬಗ್ಗೆ ನಿಮ್ಮ ತರಗತಿಯಲ್ಲಿ ಚರ್ಚೆ ನಡೆಸಿ.
2. ವಾದಿರಾಜರ ಕೃತಿಗಳನ್ನು ಓದಿರಿ.

---



# 8. ವಸಿಷ್ಠ ವಿಶ್ವಾಮಿತ್ರರ ಸಂವಾದ

- ರಾಘವಾಂಕ

ಒಡಲನಾವರಿಸಿದಂಗೋಪಾಂಗಸಂಕುಳದ
ನಡುವೆ ನಯನದ್ವಯಂಗಳು ಸಲೆ ನವಗ್ರಹದ
ನಡುವೆ ಚಂದ್ರಾದಿತ್ಯರುರ್ವಿಯಂ ಪರ್ವಿ ಪಸರಿಸಿದ ನಾನಾ ನದಿಗಳ
ನಡುವೆ ಸುರುಚಿರ ಗಂಗೆ ತುಂಗಭದ್ರೆಗಳೊಪ್ಪ
ವಡೆದು ಮಹಿಮೆಯೊಳೆಸೆವ ತೆಱದಿ ಸುರಪನ ಸಭೆಯ
ನೆಡೆಗೊಂಡ ಮುನಿಕುಲದ ನಡುವಿರ್ದರಧಿಕವಿಶ್ವಾಮಿತ್ರ ವಾಸಿಷ್ಠರು

ಅಲಸದೆ ಸಮಸ್ತಭೂಮಂಡಲವನಾಳ್ವ ರವಿ
ಕುಲಜರಪ್ಪಿಕ್ಷ್ವಾಕುವಂಶದರಸುಗಳೊಳತಿ
ಬಲರೆನಿಸಿ ಮನವಚನಕಾಯದೊಳಗೊಮ್ಮೆಯುಂ ಹುಸಿ ಹೊದ್ದದಂತೆ ನಡೆವ
ಕಲಿಗಳಾರಯ್ಯ ಹೇಳವರ ಪಾರಂಪರೆಗೆ
ಸಲೆ ಸಂದ ರಾಜಗುರು ನೀನಱಿಯದವರಿಲ್ಲ
ವೆಲೆ ಮುನಿಪ ಹೇಳೆಂದು ಹಲವುಕಣ್ಣಾದವಂ ನುಡಿದನು ವಸಿಷ್ಠಮುನಿಗೆ

ಬೆಸಗೊಂಡೊಡಿಕ್ಷ್ವಾಕುವಂಶದೊಳಗಣ ಚತು
ದರ್ಶಭುವನಪತಿಗಳೊಳಗಿಂದುತನಕಾನಱಿಯೆ
ಹುಸಿಹೊದ್ದದವರಿಲ್ಲ ಹಿಂದಣರಸುಗಳನುದ್ಧರಿಸಲೆಂದವತರಿಸಿದ
ವಸುಧಾಧಿಪತಿ ಹರಿಶ್ಚಂದ್ರನಾತನ ಸತ್ಯ
ದೆಸಕಮಂ ಪೊಗಳಲೆನ್ನಳವೆ ಫಣಿಪತಿಗರಿದು
ಶಶಿಮೌಳಿಯಾಣೆಯೆನಲಾ ವಸಿಷ್ಠಂಗೆ ಕೋಪಿಸಿದ ವಿಶ್ವಾಮಿತ್ರನು

ತೀವಿದೊಡ್ಡೋಲಗದ ನಡುವೆ ತನ್ನಂ ಮೊದಲೊ
ಳೋವಿ ನುಡಿಸದ ಕೋಪವೊಂದಾ ವಸಿಷ್ಠಮುನಿ
ಯಾವುದಂ ಪೇಳ್ದಡದನಲ್ಲೆಂಬ ಭಾಷೆಯೆರಡಖಿಳಜೀವಾವಳಿಯಲಿ
ಭಾವಿಪಡೆ ಕುಂದನಲ್ಲದೆ ಲೇಸ ಕಾಣದಿಹ
ಭಾವ ಮುಪ್ಪುರಿಗೊಂಡು ಕುಡಿವರಿದು ಕಡುಗೋಪ
ವಾವರಿಸಿ ಕೌಶಿಕಂ ನಿಂದು ನಿಲ್ ನುಡಿಯಬೇಕೆಂದು ಜಱೆದಿಂತೆಂದನು

ಬೇಸಱಿದೆ ಕೇಳ್ವ ದೇವೇಂದ್ರನುಂಟೆಂದಿಂತು
ಹೇಸದಕಟಕಟ ಸೊರಹುವರೆ ವಾಸಿಷ್ಠಯೆನ
ಲಾ ಸೊರಹುವನೆಯಾತನಧಿಕನಲ್ಲವೆ ಹೇಳು ಮುನಿದ ಮೋಱೆಯೊಳೆಂದೆನೆ
ರಾಸಿ ಹೊನ್ನುಂಟಧಿಕನಹನೆನಲು ಹೊನ್ನಮಾ
ತೀ ಸಭೆಯೊಳೇಕೆ ಸತ್ಯನೆ ಹೇಳೆನಲು ಸತ್ಯ
ಲೇಶವಂತವನಾಳ್ವ ದೇಶದೊಳು ಕೇಳ್ದಱಿಯೆನೆಂದ ವಿಶ್ವಾಮಿತ್ರನು

ಶಿವನಱಿಯಲಾತನೆಂತುಂ ಸತ್ಯನವನಾಳ್ವ
ಭುವನದೊಳಗನೃತವನ್ಯಾಯವಾಲೀಢತ್ವ
ವವಿಚಾರ ದುರ್ನೀತಿ ದುಸ್ಸಂಗ ದುಸ್ಥಿತಿ ದುರಾಚಾರವಿಲ್ಲೆಂದೆನೆ
ತವೆ ಬೇರ ಬಲ್ಲವಂಗೆಲೆದೋಱಲೇಕೆ ನಿ
ನ್ನವನೀಶನಾಳ್ವ ನಾಡೆಯ್ದೆ ಮುನಿನಾಥ ನೋ
ಡುವಡೆನ್ನ ಕಾಲಾಟದೊಳಗಣದು ಪೇಳ್ವೆನದಱನುವ ಕೇಳಿನ್ನೆಂದನು

ನುತವಿಚಾರೋನ್ನತಂ ಕಾನನಂಗಳೊಳು ಪಶು
ಪತಿ ರತಿತ್ವಂ ಗೋಕುಲದೊಳು ಸ್ವರಾಗಸಂ
ತತಿ ಶುನಕಗೋಷ್ಠಿಯೊಳು ಚತುರದ್ವಿಜೋಪಚಾರಂ ದಂತಧಾವನದೊಳು
ವಿತತಧರ್ಮಶ್ರವಣವಂತ್ಯಕಾಲದೊಳಗಾ
ಶ್ರಿತಪರ್ವತವಿಭವ ವೇಣುಗಳೊಳು ಸ್ವಸ್ಥತಾ
ಗತಿ ಮುಕ್ತರಾದವರೊಳಲ್ಲದಾ ನಾಡೊಳಿಲ್ಲೆಂದ ವಿಶ್ವಾಮಿತ್ರನು

ಕೋಣನೆರಡುಂ ಹೋರೆ ಗಿಡುವಿಂಗೆ ಮಿತ್ತೆಂಬ
ಕ್ಷೋಣಿಯಾಡುವ ಗಾದೆಯಂತೆ ವಿಶ್ವಾಮಿತ್ರ
ನೂಣೆಯವ ಹಿಡಿವ ವಾಸಿಷ್ಠಮುನಿ ಸತ್ಯವಂ ಕೊಂಡಾಡುವೆರಡಱಿಂದ
ಕ್ಷೋಣೀಶನೆನಿಸುವ ಹರಿಶ್ಚಂದ್ರಭೂಪಂಗೆ
ಪ್ರಾಣಪರಿಯಂತಲ್ಲದಪಮೃತ್ಯು ಸಾರ್ಗೆಂದು
ಕ್ಷೀಣಮಂ ತೋಱಿ ನುಡಿವಂದದಿಂ ಕೋಪದೊಳು ಜಂಬಮರ್ದನ ನುಡಿದನು



ಏನನಾಂ ಬೆಸಗೊಂಡಡೇನನಾಡುವಿರಿಳೆಯ
ಭೂನಾಥರೊಳು ಸತ್ಯರಾರೆಂದು ಬೆಸಗೊಂಡ
ಡೀ ನಾಡ ಮಾತು ಮಾಱುತ್ತರವೆ ಮುನಿಗಳಿರ ಎಂದು ಸುರಪತಿ ನುಡಿಯಲು
ಏನೆಂದಡಂ ಹರಿಶ್ಚಂದ್ರನೇ ಸತ್ಯಸಂ
ಧಾನನೆಂದಾ ವಸಿಷ್ಠಂ ನುಡಿಯಲಲ್ಲ ನಿ
ಲ್ಲಾನಱಿಯಲಾ ನೃಪನಸತ್ಯನಂತವನ ಮಾತೀ ಸಭೆಯೊಳೇಕೆಂದನು

ಇಳೆ ತಳಕ್ಕಿಳಿದು ಶಶಿ ಬಿಸಿಯಾಗಿ ಮೇರುಗಿರಿ
ಚಳಿಸಿ ರವಿ ಕಂದಿ ಜಲನಿಧಿ ಬತ್ತಿ ಶಿಖಿ ಹಿಮಂ
ದಳೆದ ದಿನದೊಳು ಸತ್ಯನಿಧಿ ಹರಿಶ್ಚಂದ್ರರಾಯನ ವಾಕ್ಯದೊಳು ಹುಸಿಗಳು
ಮೊಳೆಯವಿದು ನಿರುತವಾನಱಿಯಲಾತನ ಸತ್ಯ
ದಳವನಱಿವೊಡೆ ನೊಸಲ ಕಣ್ಣುಳ್ಳನಾಗಬೇ
ಕುಳಿದವರಿಗಳವಡದು ನೀನೇ ಪರೀಕ್ಷಿಸುವೆ ಕೇಳೆಂದನಾ ಮುನಿಪನು

ಇಂತಿವಕೆವರ್ಪಂದುತನಕವಂ ಸ್ಥಿರನೆಯಾ
ದಂತಿರ್ಕೆ ಸತ್ಯಮಾತ್ರದೊಳಿಪ್ಪುದೇಂ ಸತ್ಯ
ವಂ ತಳೆದುದಕ್ಕೆ ಸಾಧನವಾಗಿ ಬಿಡಬೇಹುದುಂಟವಂ ಬಿಡದಿರ್ದಡೆ
ಎಂತು ಹೇಳೆಂದಡವನುಸುರೆನಲು ಲೋಭವಾ
ರ್ತಂ ತೀವ್ರಭೀತಿ ನಿಷ್ಕರುಣ ಮೂರ್ಖತ್ವ ಜಾ
ಡ್ಯಂ ತನಗೆ ಬಿಡಬೇಹುದಲ್ಲೆಂಬಡಲ್ಲೆಂದು ನುಡಿಯೆಂದನಾ ಮುನಿಪನು

ಕನಕದಲಿ ಕಂಪ ಮಾಣಿಕ್ಯದಲಿ ರಸವ ಮು
ತ್ತಿನಲಿ ಮೃದುವಂ ದೀಪ್ತಿಯಲಿ ತಂಪನಮಳಚಂ
ದನದಲಿ ಬಿಸುಪ ನವ್ಯಕುಸುಮಂಗಳಲಿ ದನಿಯನಱಸುವುದು ಸಾಹಿತ್ಯವೆ
ಘನವಾದಿಯೆಂದಾಂ ಪೊಗಳ್ದೊಡದಱೊಳಾ
ತನನೀಕ್ಷಿಸುವುದಲ್ಲದೀ ಗುಣವನಱಸುವರೆ
ಮುನಿಪ ಹೇಳೆಂದಡೀ ಗುಣವಿಲ್ಲದಿರ್ದಡಂತದು ಸತ್ಯವಲ್ಲೆಂದನು

ಮುನಿವರ್ಗೆ ಬೆಂಗೊಡದ ದೆಸೆಯೊಳತಿಲೋಭಿ ದು
ರ್ಜನರ ಮಾತಂ ಕೇಳದೆಡೆಯೊಳತಿಮೂರ್ಖ ಪರ
ವನಿತೆಯರ ನೋಡುವೆಡೆಯೊಳು ಭೀತನೀಶಭಕ್ತಿಯನು ಬಯಸುವ ದೆಸೆಯೊಳು

ವಿನುತಾರ್ಥಿ ವಿಬುಧಜನದಾರ್ತಮಂ ಕೊಲುತ ಬ
ರ್ಪನಿತಱೊಳು ನಿಷ್ಕರುಣಿ ತನುಧರ್ಮಪಥದೊಳೊ
ಯ್ಯನೆ ನಡೆಯಲಾಱನದಱಿಂ ಜಾಡ್ಯಮಿದಱೊಳಲ್ಲದೆ ಬೇಱೆ ತಲೆದೋಱವು

ಎಸೆವ ಮಗನಿಲ್ಲದೊಡೆ ನರಕವಹುದೆಂದು ಚಿಂ
ತಿಸಿ ವರುಣನಲಿ ವರಂಬಡೆಯಲಾತನ ಯಾಗ
ಪಶುವ ಮಾಡುವೆನೆಂದು ಮರಳೀವೆಯಾದಡೀವೆನು ಮಗನ ನಿನಗೆಂದೆನೆ
ಶಿಶುವಾದನೆಂಬುದಾದಡೆ ಸಾಕೆನಲ್ ಕೊಡಲು
ಹುಸಿದಡವಿಗಟ್ಟಿ ಬೈಚಿಟ್ಟನೆಂಬುದನಿಂತು
ಎಸೆವ ವೇದಂಗಳೊಳು ಕೇಳಿ ಪೊಗಳುವಡರಿದು ನಿನ್ನ ಧೀವಸವೆಂದನು

ಹಿರಿದು ಹುಸಿಗಬುಧಿಪತಿ ಮುನಿದು ಮಾಡಿದ ಜಳೋ
ದರವ ಭಾವಿಸದೆ ಕಂಗೆಟ್ಟ ಜಾಡ್ಯಂ ಮಹಾ
ಧ್ವರಕೆ ಪಶುವಂ ಮಗನ ಮಾಡಲಾಱದೆ ಮೋಹದಿಂದಜೀಗರ್ತಮುನಿಯ
ವರಸುತ ಶುನಶ್ಶೇಪನಂ ತಂದು ಯಾಗವಿಧಿ
ಗರಿದು ಬೇಳಲ್ಕೆ ಮನದಂದ ಪಾತಕನು ಭೂ
ವರನನೇತಕ್ಕೆ ಹೇಸದೆ ಹೊಗಳ್ವೆಯೆಂದು ವಾಸಿಷ್ಠನಂ ಕೆಡೆನುಡಿದನು

ಹಲವು ಮಾತೇಕಾ ಹರಿಶ್ಚಂದ್ರಭೂನಾಥ
ನೊಳಗಸತ್ಯವನು ಕಾಣಿಸಲು ಬಲ್ಲರು ಧಾತ್ರಿ
ಯೊಳು ಮುನ್ನ ಹುಟ್ಟಿದವರಿಲ್ಲಿನ್ನು ಹುಟ್ಟುವರ ಕಾಣೆ ನಾನಿದ ಬಲ್ಲೆನು
ಉಳಿದವರ ಹವಣಾವುದೆಂದು ವಾಸಿಷ್ಠಮುನಿ
ಕುಲತಿಲಕನೆನಲು ವಿಶ್ವಾಮಿತ್ರ ಮನದೊಳತಿ
ಮುಳಿದು ನಿಲ್ಲಾಡದಿರು ಬಾಯಿ ಹಿರಿದುಂಟೆಂದೆನುತ್ತ ಮತ್ತಿಂತೆಂದನು

ವನಧಿಪರಿಯಂತ ಧರೆಗರಸುತನವದಱ ಮೇ
ಲನುವುಳ್ಳ ಶಿಷ್ಯನಾಗಿಹನು ನಿನಗತಿವಿಪುಳ
ಧನವನಾರಾಧಿಸುವನಂತಲ್ಲದಾತನಾರೈಕೆಯೊಳಗಿಪ್ಪೆ ನೀನು
ಎನಿತನಗ್ಗಳಿಸಿ ಬಣ್ಣಿಸಲೊಪ್ಪದಯ್ಯ ಹೇ
ಳೆನಲು ರಾಜಪ್ರತಿಗ್ರಹದ ಬಲದವನೆ ನಾ
ನೆನೆ ಮುನಿಯಬೇಡಾತ ಹುಸಿದನಾದಡೆ ನಿನ್ನನೇಗಯ್ಯಬಹುದೆಂದನು



ಶ್ರುತಿ ಮತ ಕುಲಾಚಾರ ಧರ್ಮಮಾರ್ಗಂ ಮಹಾ
ವ್ರತವನುಷ್ಠಾನ ಗುರುವಾಜ್ಞೆ ಲಿಂಗಾರ್ಚನೋ
ನ್ನತತಪಂ ಬ್ರಹ್ಮಕರ್ಮಂ ಬೆಳೆದ ಪುಣ್ಯವೊಳಗಾದವಂ ತೊಱೆದು ಕಳೆದು
ಸತಿಯನುಳಿದತಿದಿಗಂಬರನಾಗಿ ಮುಕ್ತಕೇ
ಶಿತನಾಗಿ ನರಕಪಾಲದೊಳು ಸುರೆಯೆಱೆದು ಕುಡಿ
ಯುತ ತೆಂಕಮುಖವಾಗಿ ಹೋಹೆಂ ಹರಿಶ್ಚಂದ್ರ ಮಱೆದು ಹುಸಿಯಂ ನುಡಿದಡೆ

ಧರೆ ಗಗನವಡಸಿ ಕಾದುವಡೆಡೆಯಲಿಹ ಚರಾ
ಚರವೆಲ್ಲಿ ಹೊಗಲಿ ಮುನಿದಖಿಳಮಂ ಸುಟ್ಟೊಸೆದು
ಮರಳಿ ಹುಟ್ಟಿಸಬಲ್ಲ ಮುನಿಗಳಿಬ್ಬರ ಶಾಂತಿ ಸವೆದ ಕದನದ ಮುಖದಲಿ
ಇರಬಾರದೇಳಬಾರದು  ನುಡಿಯಬಾರದಂ
ತಿರಬಾರದಹುದೆನಲುಬಾರದಲ್ಲೆನಬಾರ
ದೆರಡಱ  ನಿರೋಧದಿಂದೊಡ್ಡೋಲಗಂ ಚಿಂತೆ ಮುಸುಕಿ ಸೈವೆಱಗಾದುದು

ಒಂದಕ್ಕೆ ಹಿತನುಡಿಯೆ ಪಕ್ಷವೆಂದೆರಡುವಂ
ಹಿಂದುಗಳೆದಿರಲುಪೇಕ್ಷಿತನೆಂದು ಜಱೆದೊಡೆ
ಮ್ಮಿಂದಧಿಕನೇ ಎಂದು ಹೊಗಳ್ದೊಡುಪಚಾರವೆಂದೆತ್ತಿದೊಡೆ ಧೂರ್ತನೆಂದು
ನೊಂದು ಶಾಪವನೀಯದಿರರೆಂದು ಸುರಪನಾ
ನಂದರಸವಱತು ಬೆಱಗಿನ ಮೊಗದೊಳಿರಲು ನಾ
ರಂದ ಧಟ್ಟಿಸುತೆದ್ದು ಕೊಡು ವಸಿಷ್ಠಂಗೆ ಭಾಷೆಯನು ಕೌಶಿಕ ಎಂದನು

ಧರೆಯೊಳು ಚತುರ್ಯುಗಂಗಳು ಮರಳಿ ಮರಳಿ ಸಾ
ವಿರ ಬಾರಿ ಬಂದಡಜಗೊಂದು ದಿನವಾ ದಿನದ
ಪರಿ ದಿನಂ ಮೂವತ್ತು ಬರಲೇಕಮಾಸವಾ ಮಾಸ ಹನ್ನೆರಡಾಗಲು
ವರುಷವಾ ವರುಷ ಶತವೆಂಬುದೀ ಸುರಪತಿಗೆ
ಪರಮಾಯುವೀತನೀರೇಳ್ಬವಂ ಬಪ್ಪನ್ನೆ
ವರ ದೇವಲೋಕಕ್ಕೆ ಬಾರೆಂ ಪ್ರತಿಜ್ಞೆಯೆನಗೆಂದ ವಿಶ್ವಾಮಿತ್ರನು

## ಕವಿ-ಕಾವ್ಯ ವಿಚಾರ

ರಾಘವಾಂಕನು ಸುಮಾರು ಕ್ರಿ.ಶ. 1230 ರಲ್ಲಿದ್ದನೆಂದು ಕವಿ ಚರಿತೆಕಾರರು ಅಭಿಪ್ರಾಯ ಪಟ್ಟಿದ್ದಾರೆ. ಇವನ ತಂದೆ ಮಹಾದೇವ ಭಟ್ಟ, ತಾಯಿ ರುದ್ರಾಣಿ. ಹರಿಹರನು ರಾಘವಾಂಕನ ಸೋದರ ಮಾವ ಹಾಗೂ ಗುರು. ರಾಘವಾಂಕನು ಹಂಪೆಯ ವಿರೂಪಾಕ್ಷ ಸ್ವಾಮಿಯ ಪರಮ ಭಕ್ತ. ಇವನು ಹರಿಶ್ಚಂದ್ರ ಕಾವ್ಯ, ಸೋಮನಾಥ ಚರಿತೆ, ಸಿದ್ಧರಾಮ ಚರಿತೆ, ವೀರೇಶರ ಚರಿತೆ, ಶರಭ ಚಾರಿತ್ರ ಹಾಗೂ ಹರಿಹರ ಮಹತ್ವ ಎಂಬ ಕಾವ್ಯಗಳನ್ನು ಬರೆದಿರುವುದಾಗಿ ತಿಳಿದುಬರುತ್ತದೆ. ಆದರೆ ಶರಭ ಚಾರಿತ್ರ ಹಾಗೂ ಹರಿಹರ ಮಹತ್ವಗಳು ಉಪಲಬ್ದವಾಗಿಲ್ಲ. ಇವನಿಗೆ ಕವಿ ಶರಭ ಭೇರುಡ, ಉಭಯ ಕವಿ, ಕಮಲ ರವಿ, ಷಟ್ಪದಿ ಬ್ರಹ್ಮ ಮುಂತಾದ ಬಿರುದುಗಳಿವೆ. ಇವನು ತನ್ನ ಕಾವ್ಯಗಳನ್ನು ಸಮಗ್ರವಾಗಿ ಷಟ್ಪದಿಯಲ್ಲಿಯೇ ಬರೆದಿದ್ದಾನೆ. ಕನ್ನಡದಲ್ಲಿ ಮೊತ್ತಮೊದಲು ಷಟ್ಪದಿಯಲ್ಲಿ ಪೂರ್ಣ ಕಾವ್ಯ ಬರೆದಿರುವುದರಿಂದ ಇವನನ್ನು 'ಷಟ್ಪದಿ ಬ್ರಹ್ಮ' ಎಂದು ಕರೆಯುತ್ತಾರೆ. ಈ ಪದ್ಯ ಭಾಗವನ್ನು ರಾಘವಾಂಕನ 'ಹರಿಶ್ಚಂದ್ರ ಕಾವ್ಯ'ದಿಂದ ಆರಿಸಲಾಗಿದೆ.

## ಕಥಾ ಸಂದರ್ಭ

ಇಕ್ಷ್ವಾಕು ವಂಶದ ರಾಜನಾದ ಸತ್ಯವ್ರತ (ತ್ರಿಶಂಕು) ಹಾಗೂ ಸತ್ಯರತಾರ ಮಗನೇ ಹರಿಶ್ಚಂದ್ರ. ಇವನ ಪತ್ನಿ ಚಂದ್ರಮತಿ, ಮಗ ರೋಹಿತ. ತಂದೆಯ ತರುವಾಯ ಅಯೋಧ್ಯೆಯನ್ನು ಬಹಳ ಯೋಗ್ಯ ರೀತಿಯಿಂದ ಹರಿಶ್ಚಂದ್ರನು ಆಳಿದನು. ಇವನ ನಾಡಿನಲ್ಲಿ ದುರ್ಭಿಕ್ಷ, ವ್ಯಾಧಿ, ಅಕಾಲ ಮರಣ, ಕಳ್ಳತನ, ಭಯ ಇವು ಯಾವುವೂ ಇರಲಿಲ್ಲ. ಮುನಿಶ್ರೇಷ್ಠರಾದ ವಸಿಷ್ಠರ ಅನುಗ್ರಹದೊಂದಿಗೆ ಹರಿಶ್ಚಂದ್ರನ ರಾಜ್ಯಭಾರ ನಡೆಯುತ್ತಿತ್ತು. ಹೀಗಿರಲು ಒಂದು ಬಾರಿ ಇಂದ್ರನ ಒಡ್ಡೋಲಗದಲ್ಲಿ ಭೂಮಿಯಲ್ಲಿ ಸತ್ಯ ಪರಿಪಾಲನೆಯಿಂದ ಆಳುತ್ತಿರುವ ರಾಜನಾರೆಂಬ ಪ್ರಶ್ನೆ ಏಳಲು ವಸಿಷ್ಠರು ಹರಿಶ್ಚಂದ್ರನ ಹೆಸರನ್ನು ಪ್ರಸ್ತಾಪಿಸುವರು. ಮುನಿಗಳ ಈ ಉತ್ತರಕ್ಕೆ ಕೋಪಿಸಿಕೊಂಡ ವಿಶ್ವಾಮಿತ್ರನು ಹರಿಶ್ಚಂದ್ರನಿಂದ ಹೀನಾಯವಾದ ಕಾರ್ಯಗಳನ್ನು ನಡೆಸಿ ಅವನು ಅಧಮ ರಾಜನೆಂದು ಲೋಕಕ್ಕೆ ತಿಳಿಯಪಡಿಸುವೆ ಎಂದು ಶಪಥ ಮಾಡುತ್ತಾನೆ. ಈ ಪ್ರತಿಜ್ಞೆಯ ಹಿನ್ನೆಲೆಯಲ್ಲಿ ಇಂದ್ರನ ಒಡ್ಡೋಲಗದಲ್ಲಿ ನಡೆಯುವ ವಸಿಷ್ಠ, ವಿಶ್ವಾಮಿತ್ರರ ಸಂವಾದ ಸನ್ನಿವೇಶವೇ ಈ ಪದ್ಯ ಭಾಗದ ಸಾರ. ಮುಂದೆ ನಿರಪರಾಧಿ ಹರಿಶ್ಚಂದ್ರನು ವಿಶ್ವಾಮಿತ್ರನ



ಅನಿರೀಕ್ಷಿತ ಕೋಟಲೆಗಳಿಗೆ ಗುರಿಯಾಗುತ್ತಾನೆ. ಕೊನೆಗೆ ಹರಿಶ್ಚಂದ್ರನ ಸತ್ಯ ಪರಿಪಾಲನೆಗೆ ಸೋತ ವಿಶ್ವಾಮಿತ್ರನು ಅವನನ್ನು ಮೆಚ್ಚಿ ತಮ್ಮ ತಪಃ ಫಲವನ್ನು ಧಾರೆಯೆರೆದು ಕೊಡುತ್ತಾನೆ. ಹರಿಶ್ಚಂದ್ರನ ಸತ್ಯ ಸಂಧತೆ, ಕಷ್ಟ ಸಹಿಷ್ಣುತೆ, ನಿಷ್ಠೆ ಲೋಕಮಾನ್ಯವಾದುವು.

## ಹರಿಶ್ಚಂದ್ರನ ಪೂರ್ವ ವೃತ್ತಾಂತ

ಮಹಾರಾಜ ಹರಿಶ್ಚಂದ್ರನಿಗೆ ಮದುವೆಯಾಗಿ ಬಹುಕಾಲವಾದರೂ ಮಕ್ಕಳಾಗದ ಕಾರಣ ಕುಲಗುರುಗಳಾದ ವಸಿಷ್ಠರಿಗೆ ನಮಸ್ಕರಿಸಿ ತನ್ನ ಮನದ ಚಿಂತೆಯನ್ನು ತೋಡಿಕೊಂಡನು. ಆಗ ವಸಿಷ್ಠನು ಸಂತಾನವನ್ನು ಅನುಗ್ರಹಿಸುವ ದೇವತೆಗಳಲ್ಲಿ ವರುಣನಿಗಿಂತ ದೊಡ್ಡವರಾರೂ ಇಲ್ಲ. ವರುಣ ದೇವನನ್ನು ಪೂಜಿಸು. ನಿನಗೆ ಇಷ್ಟಾರ್ಥ ಸಿದ್ಧಿಸುವುದೆಂದನು. ಅದರಂತೆ ವರುಣನನ್ನು ಪ್ರಾರ್ಥಿಸಿ ತನಗೆ ಪುತ್ರನಾದರೆ ವರುಣನಿಗೇ ಮಗನನ್ನು ಬಲಿಕೊಡುವುದಾಗಿ ಹರಕೆ ಮಾಡಿಕೊಂಡನು. ಮುಂದೆ ಹರಿಶ್ಚಂದ್ರನಿಗೆ ಮಗ ಹುಟ್ಟಿ ಅವನಿಗೆ ರೋಹಿತನೆಂಬ ನಾಮಕರಣವೂ ನಡೆಯಿತು. ಕೂಡಲೇ ವರುಣನು ರಾಜನ ಬಳಿಗೆ ಬಂದು ಮಾತುಕೊಟ್ಟಂತೆ ಮಗನನ್ನು ಯಾಗ ನಡೆಸಿ ಬಲಿಕೊಡು ಎಂದು ಕೇಳಲು ವಿದ್ಯಾಪಾರಂಗತನಾದ ಮೇಲಷ್ಟೇ ಬಲಿಕೊಡಲು ಮಗನು ಯೋಗ್ಯನಾಗುವನೆಂದು ಕಾರಣವನ್ನು ನೀಡಿದನು. ಅದಕ್ಕೆ ಸಮ್ಮತಿಸಿದ ವರುಣನು ರೋಹಿತನು ಯುವರಾಜನಾಗುವಷ್ಟರಲ್ಲಿ ಹೇಳಿದ ಮಾತಿನಂತೆ ಬಲಿಕೊಡೆಂದು ಹರಿಶ್ಚಂದ್ರನಲ್ಲಿ ಹೇಳಿದನು. ಅದಕ್ಕೊಪ್ಪಿದ ಹರಿಶ್ಚಂದ್ರನು ಮಗನನ್ನು ಬಲಿ ಕೊಡುವುದಾಗಿ ಯಾಗವನ್ನು ಆರಂಭಿಸಿದನು. ತನ್ನನ್ನು ವರುಣನಿಗೆ ಬಲಿಕೊಡುವ ವೃತ್ತಾಂತವನ್ನು ತಿಳಿದ ರೋಹಿತನು ಅಲ್ಲಿಂದ ಪರಾರಿಯಾಗಿ ಒಂದು ವರ್ಷದವರೆಗೂ ಕಾಡಿನಲ್ಲಿಯೇ ಸಂಚರಿಸಿದನು. ಕೋಪಗೊಂಡ ವರುಣನು ಹರಿಶ್ಚಂದ್ರನಿಗೆ ಜಲೋದರ ರೋಗ ಬರುವಂತೆ ಶಪಿಸಿದನು.

ಈ ಸಮಾಚಾರವನ್ನು ತಿಳಿದ ರೋಹಿತನು ಅಯೋಧ್ಯೆಗೆ ತೆರಳುವಷ್ಟರಲ್ಲಿ ಇಂದ್ರನು ಬ್ರಾಹ್ಮಣ ವೇಷದಿಂದ ಬಂದು ಅಯೋಧ್ಯೆಗೆ ಹೋಗದಂತೆ ಹಲವು ಬಾರಿ ತಡೆದನು. ಐದು ವರ್ಷಗಳವರೆಗೆ ಅಯೋಧ್ಯೆಗೆ ಹಿಂತಿರುಗದಂತೆ ಮಾಡಿದನು. ಆರನೆಯ ವರ್ಷವೂ ಆತನು ಕಾಡಿನಲ್ಲಿಯೇ ಅಲೆಯುತ್ತಿದ್ದಾಗ ಅಜೀಗರ್ತನೆಂಬ ಋಷಿಯನ್ನು ಕಂಡು ಅವನ ಮೂರು ಮಕ್ಕಳಲ್ಲಿ ಒಬ್ಬನನ್ನು ತನಗೆ ಮಾರಬೇಕೆಂದೂ

ಅದಕ್ಕೆ ಪ್ರತಿಯಾಗಿ ನೂರು ಹಸುಗಳನ್ನು ತಾನು ಕೊಡುವೆನೆಂದೂ ಹೇಳಿದನು. ಅದಕ್ಕೆ ಒಪ್ಪಿದ ಅಜೀಗರ್ತನು ಮಧ್ಯಮ ಪುತ್ರ ಶುನಶ್ಯೇಪನನ್ನು ನೂರು ಹಸುಗಳಿಗೆ ಆತನಿಗೆ ಮಾರಿದನು. ಮುಂದೆ ಹರಿಶ್ಚಂದ್ರನು ರಾಜಸೂಯ ಯಾಗವನ್ನು ಆರಂಭಿಸಿ ಮಧ್ಯದಲ್ಲಿ ಅಭಿಷೇಚನೀಯವೆಂಬ ಸೋಮಯಾಗದಲ್ಲಿ ಶುನಶ್ಯೇಪನನ್ನು ಯಜ್ಞಪಶುವನ್ನಾಗಿ ಮಾಡಲು ನಿಶ್ಚಯಿಸಿದನು. ಶುನಶ್ಯೇಪನನ್ನು ಯಜ್ಞಪಶುವನ್ನಾಗಿ ಯೂಪಸ್ಥಂಪಕ್ಕೆ ಕಟ್ಟಲು ಯಾರೂ ಮುಂದೆ ಬಾರದಿರಲು ತಂದೆಯಾದ ಅಜೀಗರ್ತನೇ ಮತ್ತೆ ನೂರು ಹಸುಗಳನ್ನು ಪಡೆದು ತನ್ನ ಮಗನನ್ನು ಕೊಲ್ಲಲು ಮುಂದಾದನು. ಆದರೆ ಬದುಕುವ ಆಸೆಯಿಂದ ಶುನಶ್ಯೇಪನು ಬ್ರಹ್ಮನನ್ನು ಸ್ಮರಿಸಿದಾಗ ಅಗ್ನಿಯೇ ದೇವತೆಗಳಿಗೆ ಹತ್ತಿರದವನು ಅವನನ್ನೇ ಪ್ರಾರ್ಥಿಸಿಕೋ ಎನ್ನಲು ಶುನಶ್ಯೇಪನು ಅಗ್ನಿಯನ್ನು ಪ್ರಾರ್ಥಿಸಿದನು. ಅಗ್ನಿಯು ನೀನು ಸೂರ್ಯನನ್ನು ಬೇಡಿಕೋ ಎಂದೂ, ಸೂರ್ಯನು ಆಗಮಿಸಿ ವರುಣನನ್ನು ಬೇಡಿಕೋ ಎಂದೂ, ವರುಣನು ಮತ್ತೆ ಅಗ್ನಿದೇವನನ್ನು ಬೇಡಿಕೋ ಎಂದೂ ಹೇಳುತ್ತಾರೆ. ಶುನಶ್ಯೇಪನು ಮತ್ತೆ ಅಗ್ನಿಯನ್ನೇ ಬೇಡಿದನು. ಹೀಗೆ ದೇವತೆಗಳನ್ನು ಪ್ರಾರ್ಥಿಸಿಕೊಳ್ಳುತ್ತಿರಲು ಅವನ ಕಟ್ಟುಗಳು ಕ್ರಮೇಣ ಬಿಚ್ಚಿಹೋದವು. ಹರಿಶ್ಚಂದ್ರನ ಜಲೋದರ ರೋಗವೂ ಕಡಮೆಯಾಯಿತು. ಮುಂದೆ ಶುನಶ್ಯೇಪನೇ ಉಳಿದ ಯಾಗವನ್ನು ಮುಗಿಸಿ ಅವಭೃಥ ಸ್ನಾನವನ್ನು ಮಾಡಿದಾಗ ಶುನಶ್ಯೇಪ ಯಾರ ಮಗ ಎಂಬ ಪ್ರಶ್ನೆಯುದಿಸಿತು. ಕೂಡಲೇ ಶುನಶ್ಯೇಪ ವಿಶ್ವಾಮಿತ್ರನೇ ತನ್ನ ತಂದೆ ಎಂದು ಅಂಗೀಕರಿಸಿ ಅವನ ತೊಡೆಯ ಮೇಲೆ ಕುಳಿತನು. ತಂದೆಯಾದ ಅಜೀಗರ್ತನು ತನ್ನ ಮಗನನ್ನು ತನಗೆ ನೀಡೆಂದು ಕೇಳಿದಾಗ ವಿಶ್ವಾಮಿತ್ರನು ದೇವತೆಗಳೇ ಅವನನ್ನು ತನಗೆ ಕೊಟ್ಟಿದ್ದರಿಂದ ಅವನನ್ನು ಕೊಡಲು ನಿರಾಕರಿಸಿದನು. ಶುನಶ್ಯೇಪನೂ ತಂದೆಯೊಡನೆ ಹೋಗಲು ಒಪ್ಪಲಿಲ್ಲ. ಮಾತ್ರವಲ್ಲದೆ ಅವನು ತಂದೆಗೆ ''ನನ್ನನ್ನು ಕೊಲ್ಲಲು ನೀನು ಖಡ್ಗವನ್ನೇ ಹಿಡಿದು ಬಂದೆ. ನನ್ನನ್ನು ನೆಪ ಮಾಡಿ ನೂರಾರು ಹಸುಗಳನ್ನು ಪಡೆದೆ. ಅದು ಬಹಳ ಶೋಚನೀಯ ವಿಚಾರ'' ಎಂದು ಹೇಳಿದಾಗ ತಂದೆಯು ''ನಿನ್ನ ವಿಷಯದಲ್ಲಿ ಮಾಡಿದ ಪಾಪ ಈಗಾಗಲೇ ನಮ್ಮನ್ನು ಕಾಡುತ್ತಿದೆ. ನಾನು ಪಡೆದ ಹಸುಗಳನ್ನು ನಿನಗೆ ಹಿಂತಿರುಗಿಸಿ ಎಸಗಿದ ಪಾಪವನ್ನು ನಿವಾರಣೆ ಮಾಡಿಕೊಳ್ಳುವೆ'' ಎಂದು ಕೇಳಿಕೊಂಡನು. ಈ ಯಾವ ಮಾತುಗಳೂ ಶುನಶ್ಯೇಪನ ನಿರ್ಧಾರವನ್ನು ಬದಲಿಸಲಿಲ್ಲ. ''ಯಾವ ಮನುಷ್ಯ ಧರ್ಮಶಾಸ್ತ್ರದ ಹೆದರಿಕೆಯಿಲ್ಲದೆ ಪಾಪ ಕಾರ್ಯ ಮಾಡುವನೋ ಅವನು ಅಭ್ಯಾಸ ಬಲದಿಂದ ಮುಂದೆ ಪದೇ ಪದೇ ಪಾಪ



ಕೆಲಸ ಮಾಡುತ್ತಾನೆ'' ಎಂದು ಶುನಶ್ಯೇಪನು ಹೇಳಿದಾಗ ವಿಶ್ವಾಮಿತ್ರನು ಅವನ ಮಾತನ್ನು ಅನುಮೋದಿಸಿ ತನ್ನ ಮಗನಾಗಿ ಒಪ್ಪಿಕೊಂಡನು. ತನ್ನ ನೂರು ಪುತ್ರರನ್ನು ಕರೆದು ಶುನಶ್ಯೇಪನನ್ನು ತನ್ನ ಜ್ಯೇಷ್ಠ ಪುತ್ರನನ್ನಾಗಿ ಅಂಗೀಕರಿಸಬೇಕೆಂದು ಹೇಳಿದನು. ಅದನ್ನು ಒಪ್ಪದ 50 ಮಂದಿ ಹಿರಿಯ ಮಕ್ಕಳನ್ನು ನೀವು ಚಾಂಡಾಲರಾಗಿರೆಂದು ಶಪಿಸಿ, ಒಪ್ಪಿದ 50 ಮಂದಿ ಕಿರಿಯ ಮಕ್ಕಳಿಗೆ ಬೇಕಾದ ವರವನ್ನು ಅನುಗ್ರಹಿಸಿದನು. ಬಳಿಕ ಶುನಶ್ಯೇಪನ ಯಾಗ ನಡೆದ ಮೇಲೆ ಹರಿಶ್ಚಂದ್ರನು ರಾಜಸೂಯ ಯಾಗವನ್ನು ಮಾಡಿದನು. ಮುಂದೆ ಹರಿಶ್ಚಂದ್ರನು ಸತ್ಯಸಂಧನಾಗಿ ಅಯೋಧ್ಯೆಯನ್ನು ಆಳಿದನೆಂದೂ, ಬಳಿಕ ವಿಶ್ವಾಮಿತ್ರ, ವಸಿಷ್ಠರ ತೀವ್ರ ಸಂವಾದ ನಡೆದು ವಿಶ್ವಾಮಿತ್ರನ ಮೋಸದ ಬಲೆಗೆ ಸಿಕ್ಕಿ ಹರಿಶ್ಚಂದ್ರನು ನರಳಿದನೆಂದೂ ಪುರಾಣೇತಿಹಾಸಗಳು ಸಾರುತ್ತವೆ.

## I. ಕಠಿಣ ಪದಗಳ ಅರ್ಥ

ಒಡಲು =ಶರೀರ; ಸಂಕುಳ =ಸಮೂಹ, ಗುಂಪು; ನಯನ =ಕಣ್ಣು; ಸುರುಚಿರ =ಕಾಂತಿಯುಳ್ಳ, ಬಹಳ ಸುಂದರವಾದ; ಒಪ್ಪವಡೆದು =ಸೊಗಸಾಗಿ; ಸುರಪ =ಇಂದ್ರ; ಅಲಸದೆ =ಆಲಸ್ಯವಿಲ್ಲದೆ, ಸೋಮಾರಿಯಾಗದೆ; ಇಕ್ಷ್ವಾಕು =ಸೂರ್ಯ ವಂಶದ ಮೂಲ ದೊರೆಯ ಹೆಸರು; ಮನವಚನ ಕಾಯ =ಮನಸ್ಸು ಮಾತು ದೇಹ; ಹಲವು ಕಣ್ಣಾದವ =ಇಂದ್ರ; ವಸುಧೆ =ಭೂಮಿ; ಹುಸಿ =ಸುಳ್ಳು; ಚತುರ್ದಶ ಭುವನ ಪತಿ =ಹದಿನಾಲ್ಕು ಲೋಕಗಳ ಒಡೆಯ; ಫಣಿ =ಹಾವು; ಶಶಿಮೌಳಿ =ಚಂದ್ರನನ್ನು ತಲೆಯಲ್ಲಿ ಧರಿಸಿದವ, ಶಿವ; ಅಖಿಳ =ಸಮಗ್ರ; ಓವಿ =ಪ್ರೀತಿಸಿ; ಕುಂದು =ಕುಗ್ಗು; ಮುಪ್ಪುರಿ =ಮೂರು ಹುರಿಗಳು, ಬಲವಾದ, ದೃಢವಾದ; ಕುಡಿವರಿದು =ಚಿಗುರಿ; ಕಡುಗೋಪ =ಅಧಿಕ ಕೋಪ, ಹೆಚ್ಚಾದ ಕೋಪ; ಕೌಶಿಕ =ಕುಶಿಕ ವಂಶದವ, ವಿಶ್ವಾಮಿತ್ರ; ಜರೆ =ನಿಂದಿಸು, ಕೆಣಕು; ಸೊರಹು =ಗಳಹು, ಅತಿಯಾಗಿ ಮಾತನಾಡು; ಭುವನ =ಲೋಕ; ಅನೃತ =ಸುಳ್ಳು; ಆಲೀಢತ್ವ =ಆವರಿಸುವಿಕೆ; ತವೆ =ಚೆನ್ನಾಗಿ; ಕಾನನ =ಕಾಡು; ನುತ =ಕೊಂಡಾಡಿದ; ಅವನೀಶ =ಭೂಮಿಯ ಒಡೆಯ, ಅರಸ; ದ್ವಿಜ =ಬ್ರಾಹ್ಮಣ; ವಿತತ =ಶ್ರೇಷ್ಠವಾದ; ವಿಭವ =ಉತ್ಸಾಹ, ವೈಭವ; ವೇಣು =ಬಿದಿರು; ಶುನಕ =ನಾಯಿ; ಮಿತ್ತು =ಮೃತ್ಯು; ದಂತಧಾವನ =ಹಲ್ಲುಜ್ಜುವಿಕೆ; ಕ್ಷೋಣಿ =ಭೂಮಿ; ಹೋರು =ಹೋರಾಡು, ಜಗಳವಾಡು; ಬೆಸಸು =ಹೇಳು; ಇಳೆ =ಭೂಮಿ; ಊಣೆಯ =ಕುಂದುಕೊರತೆ; ಶಿಖಿ =ಬೆಂಕಿ; ಭೂನಾಥ =ರಾಜ; ಸುರಪತಿ

=ಇಂದ್ರ; ನಿರುತ =ಸತ್ಯ, ನಿಜ; ಶಶಿ =ಚಂದ್ರ; ಮೊಳೆ =ಚಿಗುರು, ಮೂಡು; ನೊಸಲು =ಹಣೆ; ಜಾಡ್ಯಂ =ಜಡತೆ, ಸೋಮಾರಿತನ; ಕನಕ =ಚಿನ್ನ; ಭೀತ =ಹೆದರಿದ; ವಿನುತಾರ್ಥಿ =ಹೊಗಳಿಕೆಗೆ ಆಸೆ ಪಡುವ; ಬೈಚಿಡು =ಅಡಗಿಸು; ಪಾತಕ =ಪಾಪ, ದೋಷ; ಧಾತ್ರಿ =ಭೂಮಿ; ಹವಣೆ =ಉಪಾಯ; ಮುಳಿ =ಕೋಪಗೊಳ್ಳು; ಧರೆ =ಭೂಮಿ; ಧೀ =ಬುದ್ಧಿ ; ಅಧ್ವರ =ಯಾಗ; ಬೇಳು =ಯಜ್ಞ ಮಾಡು, ಹೋಮಕ್ಕೆ ಅರ್ಪಿಸು; ವನಧಿ =ಸಾಗರ; ಅಗ್ಗಳಿಸಿ =ಅತಿಶಯವಾಗಿ; ಶ್ರುತಿ =ವೇದ; ಮುಕ್ತಕೇಶಿತ =ತಲೆ ಬೋಳಿಸಿದವ; ಸುರೆ =ಮದ್ಯ; ತೆಂಕು =ದಕ್ಷಿಣ; ಚರಾಚರ =ಚಲಿಸುವ ಹಾಗೂ ಚಲಿಸದ; ಉಪೇಕ್ಷಿತ =ಕಡೆಗಣಿಸಲ್ಪಟ್ಟವ; ಜರೆ =ನಿಂದಿಸು; ಧೂರ್ತ =ವಂಚಕ; ಅಜ =ಬ್ರಹ್ಮ ; ಈರೇಳು =ಹದಿನಾಲ್ಕು; ಭವ =ಹುಟ್ಟು ; ನಿರೋಧ =ತಡೆ; ಸೈವೆರಗು =ಅತ್ಯಾಶ್ಚರ್ಯ;

## II. ಈ ಪ್ರಶ್ನೆಗಳಿಗೆ ಸಂಕ್ಷಿಪ್ತವಾಗಿ ಉತ್ತರಿಸಿ.

1. ವಿಶ್ವಾಮಿತ್ರ ವಸಿಷ್ಠರು ಇಂದ್ರನ ಒಡ್ಡೋಲಗದಲ್ಲಿ ಹೇಗೆ ಕಂಗೊಳಿಸುತ್ತಿದ್ದರು ?
2. ಇಂದ್ರನು ವಸಿಷ್ಠನಿಗೆ ಏನೆಂದು ಆಜ್ಞಾಪಿಸಿದನು ? ಅದಕ್ಕೆ ವಸಿಷ್ಠನ ಉತ್ತರವೇನು ?
3. ವಸಿಷ್ಠನ ಉತ್ತರವನ್ನು ಕೇಳಿ ವಿಶ್ವಾಮಿತ್ರನು ಏಕೆ ಕೋಪಿಸಿಕೊಂಡನು ?
4. ಸುರಪತಿಯು ವಿಶ್ವಾಮಿತ್ರ ವಸಿಷ್ಠರನ್ನು ಸಮಾಧಾನ ಪಡಿಸಲು ಏನೆಂದು ನುಡಿದನು ?
5. ಯಾವ ಸ್ಥಿತಿಯಲ್ಲಿ ಹರಿಶ್ಚಂದ್ರನು ಸುಳ್ಳು ನುಡಿಯಬಹುದೆಂದು ವಸಿಷ್ಠನು ವಾದಿಸುತ್ತಾನೆ ?
6. ವಿಶ್ವಾಮಿತ್ರನ ಅಭಿಪ್ರಾಯದಂತೆ ವಸಿಷ್ಠನು ಹರಿಶ್ಚಂದ್ರನೇ ಸತ್ಯವಂತನೆಂದು ಹೇಳಲು ಕಾರಣವೇನು ?
7. ವಸಿಷ್ಠನು ಮಾಡಿದ ಪ್ರತಿಜ್ಞೆಯನ್ನು ಸಂಕ್ಷಿಪ್ತವಾಗಿ ಬರೆಯಿರಿ.
8. ವಿಶ್ವಾಮಿತ್ರನ ಶಪಥವನ್ನು ನಿಮ್ಮ ಮಾತಿನಲ್ಲಿ ಬರೆಯಿರಿ.



## III. ಈ ಪ್ರಶ್ನೆಗಳಿಗೆ ವಿವರವಾಗಿ ಉತ್ತರಿಸಿ.

1. ವಸಿಷ್ಠನು ಹರಿಶ್ಚಂದ್ರನೇ ಸತ್ಯವಂತನೆಂದು ಹೇಳಲು ಕಾರಣವಾದ ಹಿನ್ನೆಲೆಯನ್ನು ವಿವರಿಸಿರಿ.
2. ಹರಿಶ್ಚಂದ್ರನು ಸತ್ಯಸಂಧನಲ್ಲವೆಂಬುದಕ್ಕೆ ಹಿನ್ನೆಲೆಯಾಗಿ ವಿಶ್ವಾಮಿತ್ರನು ಹೇಳುವ ಪೂರ್ವ ವೃತ್ತಾಂತವೇನು ?
3. ವಿಶ್ವಾಮಿತ್ರ ವಸಿಷ್ಠರ ಸಂವಾದದ ಮುಖ್ಯಾಂಶಗಳನ್ನು ಸಂಗ್ರಹಿಸಿ ಬರೆಯಿರಿ.
4. ವಸಿಷ್ಠ ವಿಶ್ವಾಮಿತ್ರರ ಪ್ರತಿಜ್ಞೆಗಳನ್ನು ವಿವರವಾಗಿ ನೀಡಿರಿ.

## IV. ಕೆಳಗಿನ ವಾಕ್ಯಗಳ ಸಂದರ್ಭ ಸ್ವಾರಸ್ಯ ಬರೆಯಿರಿ.

1. ಅಂಗೋಪಾಂಗ ಸಂಕುಳದ ನಡುವೆ ನಯನ ದ್ವಯಂಗಳು.
2. ಮನ ವಚನ ಕಾಯದೊಳಗೊಮ್ಮೆಯುಂ ಹುಸಿ ಹೊದ್ದದಂತೆ ನಡೆವ ಕಲಿಗಳಾರಯ್ಯ
3. ಸ್ವರಾಗ ಸಂತತಿ ಶುನಕ ಗೋಷ್ಠಿಯೊಳು
4. ಕೋಣನೆರಡುಂ ಹೋರೆ ಗಿಡುವಿಂಗೆ ಮಿತ್ತು
5. ಎಸೆವ ಮಗನಿಲ್ಲದೊಡೆ ನರಕವಹುದು
6. ನರಕ ಪಾಲದೊಳು ಸುರೆಯೆರೆದು ಕುಡಿಯುತ ತೆಂಕ ಮುಖವಾಗಿ ಹೋಹೆಂ
7. ಧರೆ ಗಗನ ವಡಸಿ ಕಾಡುವಡೆಡೆಯಲಿಹ ಚರಾಚರವೆಲ್ಲಿ ಹೊಗಲಿ
8. ಆ ದಿನದ ಪರಿ ದಿನಂ ಮೂವತ್ತು ಬರಲೇಕ ಮಾಸವು

## V. ಭಾಷಾಭ್ಯಾಸ

**1. ಕೆಳಗಿನ ಪದಗಳನ್ನು ಉಪಯೋಗಿಸಿ ವಾಕ್ಯ ರಚಿಸಿರಿ.**

ಸಂಕುಳ, ಸುರುಚಿರ, ಮುಪ್ಪುರಿ, ಸೊರಹು, ಬೆಸಸು, ಭೀತ, ಹವಣೆ,

ಅಗ್ಗಳಿಸಿ, ಚರಾಚರ, ಉಪೇಕ್ಷಿತ

**2. ಕೆಳಗಿನ ಪದಗಳನ್ನು ವಿಂಗಡಿಸಿ ಸಂಧಿಯ ಹೆಸರನ್ನು ತಿಳಿಸಿರಿ.**

ಅಂಗೋಪಾಂಗ, ವಸುಧಾಧಿಪತಿ, ಕೋಪವೊಂದು, ಕಡುಗೋಪ, ಹೇಳೆನಲು, ದ್ವಿಜೋಪಚಾರ, ನಿಲ್ಲಾಡದಿರು, ಲಿಂಗಾರ್ಚನೆ, ಕುಲಾಚಾರ, ಪರಮಾಯು, ಚಂದ್ರಾದಿತ್ಯ, ವಿಚಾರೋನ್ನತ, ಕ್ಷೋಣೀಶ

**3. ಕೆಳಗಿನ ಪದಗಳ ವಿಗ್ರಹವಾಕ್ಯ ಬರೆದು ಸಮಾಸವನ್ನು ಹೆಸರಿಸಿ.**

ಮುಪ್ಪುರಿ, ಶಶಿಮೌಳಿ, ಫಣಿಪತಿ, ಜಂಬಮರ್ದನ

**4. ಕೆಳಗಿನ ಪದಗಳ ತತ್ಸಮ-ತದ್ಭವಗಳನ್ನು ಬರೆಯಿರಿ.**

ಚಂದ್ರ, ರಾಜ, ಶಶಿ, ಗೋಷ್ಠಿ, ದೀಪ್ತಿ, ಗ್ರಹ, ಮಯಿಮೆ, ಮಿಳ್ತು ಮೃದು, ದನಿ, ಶಿಸು, ಪ್ರತಿ, ಬೊಮ್ಮ, ಮೊಗ

## VI. ಚಟುವಟಿಕೆ

1. ರಾಘವಾಂಕನ ಹರಿಶ್ಚಂದ್ರ ಕಾವ್ಯವನ್ನು ಪೂರ್ತಿಯಾಗಿ ಓದಿರಿ.
2. ವಸಿಷ್ಠ ವಿಶ್ವಾಮಿತ್ರರ ಸಂವಾದವನ್ನು ನಾಟಕ ರೂಪದಲ್ಲಿ ಬರೆದು ಅಭಿನಯಿಸಿರಿ.

---



# 9. ಬೇಡರ ಕಣ್ಣಪ್ಪನ ರಗಳೆ

**- ಹರಿಹರ**

ತಪ್ಪದೆ ಶಿವಭಕ್ತಿಗೆ ಕ
ಣ್ಣಪ್ಪನನೀ ಧರೆಗೆ ಪೊಸತೆನಿಪ್ಪನನೀಶಂ ।
ಗಪ್ಪನನೊಪ್ಪಿರೆ ಮೆಱೆದಂ
ದರ್ಪಕ ದರ್ಪ ಪ್ರಹಾರಿ ಹಂಪೆಯದೇವಂ ॥

ಶ್ರೀ ಸದಾಶಿವನ ಭಕ್ತಿಗೆ ತವರ್ಮನೆಯಪ್ಪ
ದೇಶಮೊಪ್ಪಿರ್ದುದು ಧರಾತಳಕೆ ಸುಖಮಪ್ಪ
ಚೋಳ ಮಂಡಲವದಱೊಳೆಸೆವೊಂದು ಪಟ್ಟಣಂ
ಕೇಳುತಿರುಕಾಳತ್ತಿ ಎಂದೆನಿಪ ಪಟ್ಟಣಂ
ಅಲ್ಲಿಪ್ಪನೋರ್ವ ಶಬರಾಧಿನಾಥಂ ನೋಡೆ
ಎಲ್ಲಾ ಪುಳಿಂದರ್ಗೆ ನಾಯಕಂ ತಾ ನೋಡೆ
ಪೆಸರೆಸೆವ ಕಣ್ಣಪ್ಪನೆಂಬುದಾತಂಗೆ
ವಸುಧೆಯೊಳಗುಳ್ಳ ಬೇಂಟೆಗಳನಱಿವಾತಂಗೆ
ಕಾರಣಿಕನೆಂದಱಿಯಬಾರದಾತನ ವೇಷ
ಆರಯ್ಯೆ ಕಾರ್ಮುಗಿಲ ಮೞೆಯ ಸೂರ್ಯನ ವೇಷ

ಇಂತಿರ್ದು ಬೇಟೆಗೆಂದನುವಾಗಿ ಪೊಱಮಟ್ಟು
ಸಂತಸದಿ ಬಪ್ಪ ಬೇಡರ ಪಡೆಯೊಳಳವಟ್ಟು
ಜುಂಜುದಲೆ ಕೆಂಗಣ್ಣು ಗುಂಜಾಭರಣವೆಸೆಯೆ
ರಂಜಿಸಲು ತೊಟ್ಟ ಎದೆಗುಪ್ಪಸಂ ತಾಂ ಮೆಱೆಯೆ
ತಲೆಯುರದ ಕರದ ಕವಡಿಕೆಯ ದಂಡೆಗಳೆಸೆಯೆ
ನಲಿದು ಬಿಗಿದುಟ್ಟು ತೊಗಲುಡಿಗೆಯಲಗುಗಳೆಸೆಯೆ
ಮೊಗದೊಳೊಪ್ಪುವ ವಿಭೂತಿಯು ತುಂಬಿ ನೊಸಲೆಸೆಯೆ
ನೆಗಹಿ ಕಟ್ಟಿದ ನೆತ್ತಿಗನ್ನಡಿ ಕರಂ ಹೊಳೆಯೆ
ಹಿಡಿದ ಬಿಲ್ಲೊಳೆಡಗಯ್ಯೊಳೊಪ್ಪಿ ತೋಱುತ್ತಮಿರೆ
ನಿಡಿದಾಗಿ ಬೆನ್ನೊಳಗೆ ಬತ್ತಳಿಕೆಯೊಪ್ಪುತಿರೆ

ಕೂರಂಬುಗಳ ಪೊಗರು ಪಂಚಾಕ್ಷರಿಯನುಗುಳೆ
ಆರುತ್ತ ಪೊಱಮಟ್ಟನಲ್ಲಿ ಬಿಲ್ಲರ್ಪೊಗಳೆ
ಬಂದು ತರುಗಿರಿ ಗುಲ್ಮಲತೆಯೊಳಿಡಿದಡವಿಯೊಳು
ನಿಂದು ಬೇಡರ ತೋಹು ಸೋಹುಗಳ ಸಂಧಿಯೊಳು
ಪರಿದು ತಿರುಕಾಳತ್ತಿ ಮಲೆಯ ತಪ್ಪಲೊಳೆಲ್ಲ
ನೆರೆನೆರೆದು ನೋಳ್ಪ ಕಾರಣಿಕ ಮೃಗಮುಮನೆಲ್ಲ
ಕಂಡು ನೀಡದಿಯಿಟ್ಟು ಕುನಿದು ಕುಬುಜಿಸಿ ಕುಗ್ಗಿ
ದಂಡೆ ನೋಟಂ ಶರಂ ಸಂಧಾನದೊಳು ಮಗ್ಗಿ

ಇಂತು ಮೃಗಸಂಕುಳದ ಬೇಂಟೆಗಳನಾಡುತಂ
ಇಂತು ಶಬರಾವೇಶದಿಂದ ಕುಣಿದಾಡುತಂ
ಇರುತಿರುತ್ತೊಂದು ದೆವಸಂ ಬೇಂಟೆಗೆಂದಲ್ಲಿ
ಚರಿತದಿಂ ಕಣ್ಣಂದನೆದ್ದು ಬರುತಿಪ್ಪಲ್ಲಿ
ಬಲದ ಕಣ್ ಪುಬ್ಬು ಮೆಯ್ವೆಚ್ಚಿ ಕೆತ್ತುತ್ತಮಿರೆ
ನಲಿನಲಿದು ಬೇಂಟೆ ಲೇಸಪ್ಪುದೆಂದೆನುತಮಿರೆ
ಇತ್ತ ತಿರುಕಾಳತ್ತಿ ಮಲೆಯೊಳಿರ್ದೀಶ್ವರಂ
ಚಿತ್ತದೊಳು ನೆನೆದ ಮಾಯಾಮೃಗವ ಶಂಕರಂ
ತೋಱಿ ಸುಳಿದೆಮ್ಮತ್ತ ಕೊಂಡು ಬಾ ಎಂದೆನಲು
ಮೀಱಿ ಗಳಗಳನಿಳಿದು ಬಂದುದಾ ಬೆಟ್ಟದೊಳು
ಬಂದು ದೂರದೊಳು ಕಾಬಳತೆಯೊಳು ಸುಳಿಸುಳಿದು
ನಿಂದು ನಡೆನಡೆದು ಸುಳಿದಾಡುತಂ ಹೊಳೆಹೊಳೆದು
ತೋಱೆ ಬೆಂಬತ್ತಿದಂ ಮೃಗದ ಬೆಂಬಳಿವಿಡಿದು
ಮೀಱೆಯಡರ್ದೇಱುತ್ತೆ ಇಳಿವುತ್ತೆ ನಡೆನಡೆದು

ಪೊಕ್ಕಲ್ಲಿ ಪೊಕ್ಕು ಪರಿದಲ್ಲಿ ಬೆನ್ನಂ ಪಿಡಿದು
ಮಿಕ್ಕಲ್ಲಿ ಮಿಕ್ಕ ನೆಗೆದಲ್ಲಿಯೊಡನೇ ನೆಗೆದು
ಮನಮುಮಂ ಕಣ್ಣುಮಂ ಮೃಗದ ಹೋಬಳಿಗಿತ್ತು
ತನುವುಮಂ ತವಕಮಂ ಪಿಡಿದೆಸುವ ಬಗೆಗಿತ್ತು
ಕೈಳಾಸ ಶಿಖರ ಸೋಪಾನವನಡರುವಂತೆ



ಕಾಳಾತ್ತಿ ಮಲೆಯನಾ ಮೃಗದೊಡನಡರುವಂತೆ
ಇಂತು ಬರುತಿರೆ ಕೊಂಡು ಬಂದುದಾ ಮೃಗವಲ್ಲಿ
ಕಂತುಹರನಿಪ್ಪ ಶಿವನಾಲಯದ ಮುಂದಲ್ಲಿ
ಮಾಯವಾದುದು ಮೃಗಂ ನೋಡನೋಡಲು ಸುಳಿದು
ಆಯೆಡೆಯೊಳೆಲ್ಲಿಯುಂ ಅಱಸಿಕಾಣದೆ ಸುಳಿದು
ಶಿವನಿಳಯದತ್ತಲೆಯ್ತಂದನಾ ಕಣ್ಣಂದ
ನವ ಚಿತದೊಳುರವಣಿಸಿ ತೆಱೆತೆಱೆಕದವನೆಂದ
ಎನ್ನವನೆ ತೆಱೆ ಕದವನೆನ್ನಾಳ್ದ ತೆಱೆಯೆನಲು
ಪನ್ನಗಧರಂ ಕದಂ ದೆಱೆಯೆ ತಾಂ ಭೋಂಕೆನಲು
ನೋಡು ಮಹದೇವನೇ ಕೇಳು ನೀನೆನ್ನವನೆ
ನೋಡುವೆಂ ನಿನ್ನ ನನ್ನಿಗಳನಿಂದೆನ್ನವನೆ
ಹೋದ ಮೃಗಮಂ ಕಂಡೊಡೆನಗೆ ನೀನೊಳ್ಳಿದಂ
ಆದಲ್ಲಿ ಭಾಗೆಯಂ ವಂಚಿಸೆಂ ಕೊಳ್ಳದಂ
ನೋಡುವೆನಿದಕ್ಕೇನೆನುತ್ತೆ ಮೃಗಮಂ ತೋಱೆ
ನೋಡಿ ಕಂಡಾಹಾ ಎನುತ್ತೆ ನಂಬುಗೆಯೇಱೆ

ಅಯ್ಯಯ್ಯ ಇಂತಪ್ಪ ನನ್ನಿಯಂ ಕಂಡೆನೇ
ಕಯ್ಯ ಮೇಲೇ ತೋಱುವೊಡೆಯನಂ ಪಡೆದೆನೇ
ಎಂದು ಕೊಂಡಾಡುತಂ ಕಂಡ ಹುಲ್ಲೆಯನೆಚ್ಚು
ತಂದಂಬು ಸಹಿತವಿದೆದೇವ ಹುಸಿಯೆನು ನಚ್ಚು
ನಿನ್ನ ಮುಂದಿಟ್ಟು ಸರಿಯಾಗಿ ಹಚ್ಚವೆ ನೋಡ
ಎನ್ನವನೆ ಎನ್ನಲ್ಲಿ ಮಾಯವಿಲ್ಲಂ ನೋಡ
ಎನುತಲ್ಲಿ ಸ್ನೇಹದಿಂ ಬಿಚ್ಚುತಂ ಸರಿಮಾಡಿ
ನಿನಗೆ ಮನವೊಲಿದುದಂ ಕೊಳುವುದೆನುತಂ ನೋಡಿ
ತಪ್ಪದೆನ್ನಾಣೆ ಸರಿ ನಿನ್ನಾಣೆ ಸರಿಯೆಂದು
ಒಪ್ಪಿಸಿ ಕೊಡುತ್ತಲ್ಲಿ ನುಡಿದಂ ಮನಂ ಸಂದು
ನಿನ್ನ ಭಾಗವನಾರ ಕಯ್ಯೊಳು ಕೊಡೆಂ ಕೊಡೆಂ
ಇನ್ನಾನೆ ಕಾಸಿ ಲೇಸಂ ಮಾಡುವೆಂ ಬಿಡೆಂ
ಎಂದೊಂದು ಚೆನ್ನ ಸುಂಟಗೆ ಗೋಲನಳವಡಿಸಿ

ತಂದು ಹೊಸಕಿಚ್ಚಂ ಹೊಸೆದು ಖಂಡವಂ ಬಿಡಿಸಿ
ಕೆಂಪುಳ್ಳ ನುಂಪುಳ್ಳ ಸೊಂಪುಳ್ಳ ಖಂಡಮಂ
ಇಂಪುಳ್ಳ ತಂಪುಳ್ಳ ಹೆಂಪುಳ್ಳ ಖಂಡಮಂ
ಕಾಸುತಂ ತೆಗೆತೆಗೆದು ಪ್ರತಿಪಾಕಮಂ ಮಾಡಿ
ಲೇಸಪ್ಪ ಮೃದುವಪ್ಪ ತೆಳುಗಂಡಮಂ ನೋಡಿ
ನಾಲಗೆಯೊಳಾಯ್ದಾಯ್ದು ಕೊಂಡವಂ ಬೇಱಿರಿಸಿ
ಮೇಲಪ್ಪ ಮುತ್ತುಗದ ಪತ್ತಳೆಯ ಬಾಸಣಿಸಿ
ಕೊಂಡು ಬಂದೆನ್ನವನೆ ಉಣ್ಣೆನುತೆ ಪಚ್ಚಡಿಸಿ
ಅಂಡಲೆವುತೆನ್ನವನೆ ಸವಿನೋಡೆನುತ್ತಿರಿಸಿ
ಎನಲಲ್ಲಿ ಶಂಕರಂ ಕೈಕೊಂಡ ಮಾಳ್ಕೆಯಿಂ
ತನ ತನಗೆ ಭೂತಕ್ಕೆ ಕೊಟ್ಟುನೊಲಿದರ್ತಿಯಿಂ
ಆತುರ ಪ್ರೇಮಮಂ ತಾನೆಯಾರೋಗಿಪಂ
ಭೂತಸಂಕುಲಕೆ ಮಾಂಸಮನಿತ್ತು ರಾಗಿಪಂ
ಭಕ್ತನ ಮನಕ್ಕೆ ತಾನುಂಡಂತೆ ಮಾಡುತಂ
ಭಕ್ತಿಯಿಂದವೆ ತಣಿದು ತೇಗಿ ತೂಗಾಡುತಂ
ಇಂತು ಶಿವನಾರೋಗಿಸಲು ಕಂಡು ಕಣ್ಣಂದ
ನಂತಾಗಳೇ ನೋಡಿ ಬಾಡುತ್ತವಿಂತೆಂದ

ನಿದ್ದೆಗೆಯ್ ತಂದೆ ಇನ್ನಾವ ದುಗುಡಂ ಬೇಡ
ಇದ್ದಪೆಂ ಕಾಹಾಗಿಯೊಂದುಂ ಭಯಂ ಬೇಡ
ಎಂದು ಶಿವನಂ ನಿದ್ರೆಗೆಯ್ಸಿ ಮೆಲ್ಲನೆ ಬಂದು
ನಿಂದು ನಿಂದುಲಿವ ಪಕ್ಷಿಗಳನೆಬ್ಬಿಸುತಂದು

ಇಂತು ಬೆಳಗಪ್ಪನ್ನೆಗಂ ಜಾಗರಂ ಮಾಡಿ
ಕಂತು ಮದಹರನುಪ್ಪವಡಿಸೆ ನಲವಿಂ ನೋಡಿ
ಹಸಿದಯ್ಯ ನಿದ್ರೆ ತಿಳಿದುದೆಯಯ್ಯ ಎನ್ನವನೆ
ಹೊಸ ಮಾಂಸಮಂ ತರಲು ಪೋಪೆನೇ ಚೆನ್ನವನೆ
ಕಡುಬೇಗದಿಂ ಬಂದಪೆಂ ನೋಡು ನಿನ್ನಾಣೆ
ತಡೆಯೆನಾನೊಂದೆಡೆಯೊಳುನಿಲ್ಲೆ ನಿನ್ನಾಣೆ



ಎಂತಕ್ಕೆ ಬಂದು ಕಣ್ಮರೆಯಾಗೆ ಕಣ್ಣಂದ
ನಂತಾಗಲೆ ಕಂದಿ ಕುಂದಿಮಿಗೆ ಕಣ್ಣಂದ-
ನಱಸುತ್ತಲಿರ್ದನತ್ತಲು ಮೃಗವನೆಸಲೆಂದು
ಪೊಱಮಟ್ಟುಬಂದನಿತ್ತಲು ಪಾರ್ವನೊಲಿದಂದು
ಪೂಸಿದ ವಿಭೂತಿ ರುದ್ರಾಕ್ಷೆ ಧೋವತಿಯೆಸೆಯೆ
ಬಾಸಣಿಸಿದಗ್ಘವಣೆ ಕಯ್ಯ ಕರಡಗೆಸೆಯೆಸೆಯೆ
ಮೆಲ್ಲಮೆಲ್ಲನೆ ಬೆಟ್ಟವೇಱುತಂ ನಡೆತಂದು
ಅಲ್ಲಿ ದೇವಾಲಯದ ಬಾಗಿಲಿಗೆ ಬರಲಂದು
ಗವಲೆತ್ತಿ ಕವಿಯೆ ಕರಣಂ ಕರಂ ಕೌರೇಳೆ
ಶಿವ ಶಿವ ಇದೆಲ್ಲಿಯದ್ಭುತ ವೆನುತೆ ಪೊಲಸೇಳೆ
ತಿರುಗಿ ಬಂದಗ್ಘಣೆಯನೊಂದು ಠಾವಿನೊಳಿರಿಸಿ
ಕರಡಗೆಯನಿಳುಹಿ ಹೇಸುತ್ತುಗುಳಿ ಕೊಕ್ಕರಿಸಿ

ಇಂತು ಮಾಡಿಸುವರೇ ಶುದ್ಧಾತ್ಮ ಶಿವ ಎನುತೆ
ಇಂತು ಸ್ವೈರಿಸುವರೇ ನಿರ್ಮಳ ಪ್ರಭುವೆನುತೆ
ಮಜ್ಜನಕ್ಕೆಱೆದನಾ ಕಾಳಸ್ತಿಯರಸಂಗೆ
ಸಜ್ಜನ ಸ್ನೇಹ ರಸಭರಿತ ಪರಮಾತ್ಮಂಗೆ
ಬೆಲ್ಲವತ್ತಂ ಗರಗದೆಲೆ ದೊಡ್ಡಿ ಪತ್ತೆಯಂ
ಪಲ್ಲವಿಸುವುತ್ತರಣೆಯಂ ಬಿಳಿಯ ಗಱುಕೆಯಂ
ತಂದೊಟ್ಟಿದಂ ರುದ್ರ ಸೂಕ್ತಮಂ ಪೇಳುತಂ
ನಿಂದಲ್ಲಿ ಪಲವುಂ ಜಪಂಗಳಂ ಮಾಡುತಂ
ಧೂಪಾರತಿಯನೆತ್ತಿ ನೈವೇದ್ಯಮಂ ಕೊಟ್ಟು
ಕಾಪಾಲಿ ಶರಣೆನುತ್ತಂ ಬಂದು ಪೊಡಮಟ್ಟು
ಪೊಗಿಸದಿರು ಕಂಡಯ್ಯ ಪಶುಕರ್ಮಕಾಱನಂ
ಪುಗಿಸದಿರು ಹೇಸಿಕೆಯ ಮಾಡುವ ಕಿರಾತನಂ
ಎಂದೆನುತೆ ಪೊಱಮಟ್ಟು ಬಲವಂದು ಪಟ್ಟಿರ್ದು
ಚಂದ್ರಶೇಖರ ಕರುಣಿಸೆಂದೆನುತೆ ನಿಂದಿರ್ದು
ಸಂಕಲೆಗಳಂ ಹೂಡಿ ಬಿಯ್ಯ ಗಂಗಳನಿಕ್ಕಿ

ಶಂಕರಾ ಪೊಗಿಸದಿರುವಿನ್ನವನನೆನುತುಕ್ಕಿ
ಪೋದನತ್ತಲು ಶಿವಬ್ರಾಹ್ಮಣಂ ತತ್ಪುರಕೆ
ಆದುದಿತ್ತಲು ಬೇಡನಾಟವಿಂದಾ ವನಕೆ

ಅಷ್ಟಾಂಗಪುಷ್ಟವಾಗಿರ್ದ ಮೃಗವ ಕಂಡು
ಅಷ್ಟವೇಷ್ಟಿತನಾಗಿ ಎಚ್ಚಂ ಮನಂಗೊಂಡು
ನೆಲಕೆ ಬೀಳದ ಮುನ್ನಲೆಯ್ತಂದು ಪಿಡಿದೆತ್ತಿ
ನೆಲನಿಂದ ಸೋಂಕೆ ಹೇಸುವನೊಡೆಯನೆನುತೆತ್ತಿ
ಕಲುವಾಳೆಯೆಲೆಗೊಯ್ದು ಬೆಳೆದ ಹಸಲೆಯ ಮೇಲೆ
ಚೆಲುವನಾಗಿರಿಸಿ ಮುಚ್ಚಿದನೊಂದಱಿಂ ಮೇಲೆ
ಗಾಳಿತಾಗಿದೊಡೊಲ್ಲನೆನ್ನವಂ ಸುಖಿಯೆನುತೆ
ಬಾಳಚೂತದ ಕೆಳಗೆ ತಂದಲ್ಲಿ ಪಸರಿಸುತೆ
ಮುತ್ತುಕದ ತಳ್ತೆಲೆಗಳಂ ಛಂದದಿಂ ಹಾಸಿ
ಬಿತ್ತರಿಸಿ ನವಖಂಡವಂ ಮಾಡುತಂ ಕಾಸಿ
ಉಲುಹಾದೊಡಂತಂತೆ ಮುಚ್ಚುಮಱೆಮಾಡುತಂ
ನಲಿನಲಿದು ಕಾಸಿ ಪದ ಪಾಕಮಂ ನೋಡುತಂ
ಇಂಪುಳ್ಳವಂ ಜಿಹ್ವೆಯಿಂದಱಿದು ಶೋಧಿಸುತೆ
ಕಂಪುಳ್ಳವಂ ಘ್ರಾಣದಿಂದಱಿದು ಶೋಧಿಸುತೆ

ಒಂದು ಕಯ್ಯೊಳು ಮೀಸಲೋಗರಮುಮಂ ಪಿಡಿದು
ಒಂದು ಕಯ್ಯೊಳು ಬಿಲ್ಲನಂಬನಳವಡೆ ಪಿಡಿದು
ಮೊಗದಗ್ಘವಣಿ ಶಿರದ ಕರಡಿಗೆಯ ಹೂವೊಪ್ಪೆ
ಮೃಗದ ಮಾಂಸದ ನೆವದಿ ನೇಹದೋಗರವೊಪ್ಪೆ
ಬರುತೆನ್ನವಂ ಪಸಿದನಿರಲಾಱನೆನ್ನವಂ
ಪಿರಿದು ತಳುವಿದೆನೆಂದು ಕೋಪಿಸುವನೆನ್ನವಂ
ಎಂದು ನೇಹದ ಚಿಂತೆಯಿಂ ಚಿಂತಿಸುತೆ ಬರಲು
ಮುಂದೆ ದೇವಾಲಯದ ಬಾಗಿಲುಗಳಿಕ್ಕಿರಲು
ಎನ್ನವನೆ ತೆಱೆ ಕದವನೆಂದು ನುಡಿದನಲ್ಲಿಂದ
ಮುನ್ನವೆ ಢಣಢಣನೆ ತೆಱೆಯೆ ಚೆಚ್ಚರದಿಂದ



ತೆಱೆಯೆ ಬಂದೊಳಪೊಕ್ಕು ಒರ್ಬನಿರ್ದೈ ತಂದೆ
ಅಱಸುತ್ತಲೆನ್ನೆನುಮ್ಮಳಿಸುತಿರ್ದೈ ತಂದೆ
ಎನುತ ಪಾದುಕ ಪದದಿ ಪೂಜೆಯಂ ಪರಿಹರಿಸಿ
ಅನುನಯದಿ ಮೊಗದಗ್ಘವಣಿ ಮೆಱೆದು ಸಿಂಗರಸಿ
ಮುಡಿಯೊಳಿರ್ದರಲೊಳೊಯ್ಯನೆ ಪೂಜೆಯಂ ಮಾಡಿ
ಕಡುನೇಹದಿಂದ ಹಸಿದಯ್ಯ ಎನುತಂ ನೋಡಿ
ನೇಹದೋಗರಮುಮಂ ತಂದಾಗ ಮುಂದಿರಿಸಿ
ಓಹೋಹೋ ಹೊತ್ತು ಹೋಯಿತ್ತೆನುತಲಾದರಿಸಿ
ಅಱಿದೆ ಅಱಿದೆಂ ನಾಚಿಯಿದ್ದಪ್ಪೆ ನೀನೆಂದು
ಅಱಿದಂತೆ ಹಿಂದು ಮುಂದಾಗಿ ನೋಡುವೆನೆಂದು
ಇರಲೀಶನೆಂದಿನಂದದಲುಂಡ ಮಾಳ್ಕೆಯಿಂ
ಪರಿಹರಿಸಿ ಭೂತಕ್ಕೆ ಕೊಟ್ಟನೊಲಿದರ್ತಿಯಿಂ
ಆರೋಗಿಸಲ್ಕಂಡು ನೋಡಿ ಹರುಷಂದಳೆದು
ಹಾರಯಿಸಿದಳವೇಱುತೆಲೆಯನತ್ತೆತ್ತೆಳೆದು
ದಿಟ್ಟಿಯಾದಪುದೆಂದು ನೋಡಿ ಛೂ ಛೂ ಎಂದು
ಕಟ್ಟಕ್ಕರಿಂದ ನೇಹದ ಕಾಹನಿಟ್ಟಂದು
ಲಿಂಗ ಪ್ರಸಾದಮಂ ಕೈಕೊಂಡು ಸವಿಸವಿದು
ಹಿಂಗದಾ ಸವಿಗೆ ಹಾರೈಸುತಂ ಮನಮೊಸೆದು

ಬಾಗುತಂ ಕೈಚಪ್ಪಳಿಕ್ಕುತಂ ಬೀಗುತಂ
ತೂಗುತಂ ತೊನೆವುತೊಂದೇ ಕಾಲಲಾಡುತಂ
ಉಬುಬೆಂದು ಬೊಬ್ಬಿಟ್ಟು ಕೂಯೆಂದು ಕೂಗಿಟ್ಟು
ಅಬುಬೆಂದು ನಿಂದಾರ್ದು ನಾಲ್ದೆಸೆಗೆ ಕೊಣಕಿಟ್ಟು

ಮತ್ತೆ ಮತ್ತೆದ್ದಾಡಿ ಒಲೆದಾಡಿ ಮಲೆದಾಡಿ
ಚಿತ್ತವೆಂತಿರ್ದುದಂತಭವನೊಳಗೋಲಾಡಿ
ಕರಡಿಯಂತಿರೆ ಕುಪ್ಪಿಕುಪ್ಪಿ ಕೆಲಕೆಲದಾಡಿ
ಉರವಣಿಸಿ ಹುಲ್ಲೆಗೊಂತಿಕ್ಕಿ ನೆಗೆನಗೆದಾಡಿ
ಬಾಯಿಂದೆ ಕೊಂಬುಮಾವುರಿ ಕಹಳೆಗಳನೂದಿ

ಬಾಯಿಂದೆ ಕರಡೆಯಂ ಬಾರಿಸುತೆ ಕೊಳಲೂದಿ
ಇಂತು ಬೆಳಗೆಪ್ಪನ್ನೆಗಂ ಜಾಗರಂ ಮಾಡಿ
ಕಂತುಮದಹರನ ಕಡು ಮೋಹದೊಳಗೋಲಾಡಿ
ಬೆರಕೆಯಿಲ್ಲದ ಬಚ್ಚಬಱಿಯ ಭಕ್ತಿಯೊಳಾಡಿ
ನೆರವಿಲ್ಲದೇಕಾಂತ ಶಾಂತಭಕ್ತಿಯೊಳಾಡಿ
ನಡೆತಂದು ಶಂಕರನನಮರ್ದಪ್ಪಿಕೊಂಡಂದು
ಒಡೆಯನೇ ಬೇಂಟೆಯಾಡಲು ಪೋಪನೇ ಎಂದು
ನಿನ್ನಿನಂತಲ್ಲ ತಳುವೆಂ ತಳುವೆನನ್ನೆವನೆ
ನಿನ್ನಾಣೆಯಾಣೆ ಬೇಗದಿ ಬಪ್ಪೆನೆನ್ನವನೆ
ಹೋದನೆಂತಕ್ಕೆ ಬೇಂಟೆಗೆ ತಾನೆ ಕಣ್ಣಂದ
ನಾದರಂ ಮಿಗೆ ಹೋದನತ್ತಲಾ ಕಣ್ಣಂದ
ಇತ್ತಲು ಶಿವಬ್ರಾಹ್ಮಣಂ ಮುನ್ನಿನಂದದಿಂ
ಹೊತ್ತು ಕೊಡನಗವಣೆ ಹೂ ಪತ್ರೆಯೊಪ್ಪದಿಂ
ಮೆಱೆಯೆ ದೇವಾಲಯದ ಬಾಗಿಲಿಗೆ ಬರವರಲು
ಹೊಱಗೆ ಮುನ್ನಿಂದ ನಾಲ್ಮಡಿ ಕುಸುರಿದಱಿದಿರಲು
ಕಂಡೊಳಗೆ ಹೋಗದೆ ಹೇಸುತ್ತೆ ಸಿಡಿಮಿಡಿಗೊಂಡು
ಬೆಂಡಾಗಿ ಬೇಳಾಗಿ ನೋಡಿ ಕೋಳ್ಗುದಿಗೊಂಡು
ಹೊತ್ತಗ್ಘವಣೆವೆರಸಿ ಬೆಱಗಾಗಿ ನಿಂದಲ್ಲಿ
ಎತ್ತ ಹೋದ್ಯೆತಂದೆ ಹೇಳು ನೀವಿಲ್ಲಿಲ್ಲಿ
ಇಂತು ಮಾಡಿಸುವರೆ ಕಾಳತ್ತಿಯರಸನೇ

ಇಂತಪ್ಪನಾಚಾರವಳ್ತಿಯೇನರಸನೇ
ಸಾರ್ಯೆಸಿ ಮಿಂದು ಮತ್ತಗ್ಘವಣೆಯಂ ಕೊಂಡು
ದೂರಿಸುತೆ ಚಿತ್ತದೊಳು ಚಿಂತೆಯಂ ಕೈಕೊಂಡು
ಬಂದು ಮಜ್ಜನಕೆಱೆದು ದೇವಂಗೆ ಕೋಪಿಸುತೆ
ಎಂದುವಿಂತೀ ದುರಾಚಾರವಿಲ್ಲೆಂದೆನುತೆ
ಪತ್ರೆಯಿಂ ಪುಷ್ಪದಿಂ ಪೂಜೆಯಂ ಮಾಡುತಂ
ಚಿತ್ತಜಹರಂಗೆ ಧೂಪಾರತಿಯನೆತ್ತುತಂ



ಆರೋಗಿಸಲು ಕೊಟ್ಟು ಕದವನೊಂದಿಸುತಿಕ್ಕಿ
ಮಾರಾರಿ ಮೆಚ್ಚಲವನಂ ಕೊಲುವೆನೆನುತಿಕ್ಕಿ
ಪೊಱಮಟ್ಟು ಪೋದನತ್ತಲು ಪಾರ್ವನೊಲಿದಂದು
ತೆಱನಱಿದು ಶಬರನಂ ಮರ್ದಿಸುವೆ ತಾನೆಂದು
ಇತ್ತಲಾ ಪಾರ್ವತಿ ಶಿವಂಗೆ ಬಿನ್ನೈಸಿದಳು
ದೇವ ನಮ್ಮಯ ಮಾಟ ತಿಳಿಯದೆನಗೀಶ್ವರಾ
ಭಾವಿಪೊಡೆ ಬೇಱೊಂದು ಪರಿನೋಡು ಶಂಕರಾ
ಬೇಡನ ಚರಿತ್ರಮುಂ ಧರಣೆಗೆ ವಿರುದ್ಧವಿದು
ನೋಡೆ ನಿಮ್ಮಡಿಗಳಿಗೆ ಮಿಗೆ ಸೈರಿಸಿರ್ದಪುದು
ಮುಕ್ಕಳಿಸಿದುದಕದಿಂ ಮಜ್ಜನಕೆಱೆದರುಂಟೆ
ಅಕ್ಕಕ್ಕು ಮುಡಿದಹೂವಿಂ ಪೂಜಿಸದರುಂಟೆ
ಬಱಿಮಾಂಸವಲ್ಲದಱ ಮೇಲೆಂಜಲಂತದಂ
ಕರೆಕಂತ ನೀವೊಲಿಯಲೇನೆಂಬೆನಿಂತಿದಂ
ಕಾಲಿಂದ ಪೂಜೆಯಂ ಶಿವಶಿವಾಎನಲ್ಲಮ್ಮೆ
ಈ ಲೋಕದೊಳಗಿಲ್ಲ ನೀನೊಲಿದೊಡೆನಲಮ್ಮೆ
ಇಂತಪ್ಪ ಬೇಡಂಗೆ ಮುಯ್ಯಾನುವರೆ ಶಿವಾ
ಮುಂತೆ ಇದಿರಾಗಿ ಕದವಂ ತೆಱೆವರೇಭವಾ

ಪೂಜಿಸುವ ಪಾರ್ವಂಗೆ ಬಾಯ್ಮಿಡುಕದಿರ್ದಪಿರಿ
ಓಜೆಗೆಪ್ಪೀ ಲುಬ್ಧಕಂಗೆ ಕರುಣೆಸಿದಪಿರಿ

ಎನೆ ವಿರೂಪಾಕ್ಷನಾ ಮಾತಿಂಗೆ ನಸುನಗುತೆ
ನಿನಗೆ ಪೇಳ್ದಪೆನಗಜೆ ತಿಳಿಯ ಕೇಳೆಂದೆನುತೆ
ಪಾರ್ವನಗ್ಘವಣೆ ತಿಳಿಮನ ಕದಡು ಎಲೆಗೌರಿ
ಪಾರ್ವನರ್ಚನೆಯಿನಿದು ಮನವತಿ ವಿಷಂ ಗೌರಿ
ಅವನಿಟ್ಟ ಭಸಿತವವನಂ ಮುಟ್ಟದೆಲೆ ಗಿರಿಜೆ
ಅವನ ರುದ್ರಾಕ್ಷೆಯವನಂ ಪೊರ್ದದೆಲೆ ಗಿರಿಜೆ
ಬಾಯಮಂತ್ರಂ ಮನದ ಕ್ಷುದ್ರತಂತ್ರವು ಸೂಸೆ
ಕಾಯವೇಷಂ ಮನದ ಭವಿತನವದೇಂ ಲೇಸೆ

ಎನ್ನನರ್ಚಿಸಿ ಪೆಱರ್ಗೆ ಕಯ್ಯಾನುವರೆ ದೇವಿ
ಎನ್ನಂ ಹೊಗಳಿ ಭವಿಗಳಂ ಹೊಗಳ್ವರೇ ದೇವಿ
ಸತ್ಯವಿಲ್ಲದ ಪೂಜೆ ಸಸಿನವಪ್ಪುದೆ ಗೌರಿ
ಸತ್ಯವಿಲ್ಲದ ಹಾಡು ಸೊಗಸಪ್ಪುದೇ ಗೌರಿ

ಎನ್ನ ಭಕ್ತಂಗೆ ಬಱಿ ಬೋಧೆಯುಂಟೇ ಗೌರಿ
ಎನ್ನಭಕ್ತಂಗೆ ಯುಪಚಾರವುಂಟೇ ಗೌರಿ

ಅವನ ಕಯ್ಯೊಳು ಹೊಲಸು ಮನದೊಳಮೃತಂ ಗೌರಿ
ಅವನ ಮೊಗದೊಳು ಜಲಂ ಮನದೊಳಗ್ಘಣಿ ಗೌರಿ
ಅವನ ಮಂಡೆಯ ಹೂವು ಮನದ ಪರಿಮಳವೆನಗೆ
ಅವನ ಕಾಲಾಟವತಿ ನೇಹದರ್ಚನೆ ನನಗೆ
ಎನ್ನವನೆ ಎಂಬ ಸಲುಗೆಯ ನುಡಿಯೆ ಮಂತ್ರವದು
ಎನ್ನನೇ ಕೂರ್ತು ಮಾಡುವುದು ಶಿವತಂತ್ರದು
ತೋಱಿದಪೆನೊಚ್ಚಿ ಸೈರಿಸು ಎನ್ನಭಕ್ತನಂ
ತೋಱಿದಪೆನೀಗಳೇ ನೀಂ ಪೊಗಳ್ವ ಪಾರ್ವನಂ

ಶಿವಲಿಂಗದೊಳಗೆರಡು ಕಣ್ಗಳಾಕಾರಮಂ
ಶಿವನಿರಿಸಿದಂ ಪರೀಕ್ಷಿಸಲೆಂದು ಚಿತ್ತಮಂ
ಅಲ್ಲಿವೊಂದೊಡೆದಂತೆ ನೆತ್ತರೊಸರುತ್ತಿರಲು
ಮೆಲ್ಲಮೆಲ್ಲನೆ ಶಿವಬ್ರಾಹ್ಮಣಂ ನಡೆತರಲು
ಕಾಣುತೆ ನಮಃ ಶಿವಾಯ ಇಂತಿದದ್ಭುತವೆಂದು
ಮಾಣದಂಜುತ್ತುಂ ಭಯಾನಕಕ್ಕಂ ನೊಂದು
ಅರಸಿಂಗೆ ತೋಱಿತೋ ದೇಶಕಳಿವಪ್ಪುದೋ
ಹರನೆಬಲ್ಲಂ ಮಹೋತ್ಪಾತವೇನಪ್ಪುದೋ
ಎಂದು ವಿಪ್ರಂ ನೋಡಲಮ್ಮದೆ ಮನಂಗುಂದಿ
ಬಂದು ಪಟ್ಟಣಕೆ ಪೇಳ್ದಂ ಕೌತುಕದೊಳೊಂದಿ
ಇತ್ತಲಾ ಪುರಜನಂ ಪೋಗಿ ತಮ್ಮೂರೊಳಗೆ
ಮತ್ತೆ ಮತ್ತತಿಭಯಂಗೊಳುತಮಿರೆ ಮನದೊಳಗೆ
ಇತ್ತಲಾ ಕಣ್ಣಂದನೊಲಿದು ಬೇಂಟೆಯನಾಡಿ



ಹೊತ್ತ ಹೂ ಮೊಗದಗ್ಘಣಿವೋಗರಂಗೂಡಿ
ನಡೆತರುತೆ ಪೊತ್ತು ಪೋಯ್ತೆನ್ನವಂ ಪಸಿದನೋ
ಕಡುಬೇಗದಿಂ ಬಾರನೆಂದು ಕೋಪಿಸುವನೋ
ಬರಬರಲ್ಕೆಡಭುಜ ಕಣ್ಣುಪುರ್ಬುಂ ಕೆತ್ತೆ
ಬರಬರಲು ಬಲದ ಭುಜ ಕಣ್ಣು ಪುರ್ಬುಂ ಕೆತ್ತೆ
ಚಿಂತಿಸುತೆ ದೂರಿಸುತಲೆಂತಪ್ಪುದೋ ಎನುತೆ
ಅಂತಸ್ಥದೊಳು ಬೆದಬೆದಂ ಬೇವುತಂ ಬರುತೆ
ಬರೆ ಮುಂದೆ ಶಿವಲಿಂಗದೊಂದು ಕಣ್ಣೊಡೆದಿರಲು
ಪರಿದಿಳಿವ ನೆತ್ತರೋರಂತೆ ಒಸರುತ್ತಿರಲು
ಕೆಟ್ಟೆನಾಂ ಕೆಟ್ಟೆನಾ ಬೆಂದೆನಾಂ ಬೆಂದೆನಾಂ
ದಿಟ್ಟಿಯಿಂತೇಕಾಯ್ತು ಉರಿದೆನಾಂ ಉರಿದೆನಾಂ
ಎನ್ನೊಡೆಯನೇ ಸೈರಿಸಲ್ಕಾಪೆನೇ ಇದಕೆ
ಮುನ್ನವೇ ಮುಂದುದೋಱಿತ್ತು ಪಾಪಿಯ ಮನಕೆ
ಎನ್ನೊಡೆಯ ಕಣ್ಣೊಡೆಯೆ ನೋಡುತಿರಲಾರ್ಪನೇ
ಎನ್ನವನ ಸಾರಿರದೆ ಅಗಲಿಯಾಂ ಕೆಟ್ಟೆನೇ

ಎಂದಲ್ಲಿ ರಂಗಮಂಟಪದೊಳಗೆ ಪೊರಳುತಂ
ಮುಂದುಗೆಟ್ಟಱಿವುಗೆಟ್ಟಲ್ಲಲ್ಲಿ ಯೊಱಲುತಂ
ಎಂತಕ್ಕೆ ಸಂತಯ್ಸಿಕೊಂಡು ಮೆಲ್ಲನೆ ಬಂದು
ಮುಂತೆ ಕುಳ್ಳಿರ್ದು ಮಱುಗುತ್ತವಳಲುತ್ತಂದು
ಮೃಗವೊರಸಿ ಕೊಳಲೊತ್ತಿಕೋಡ ಮೊನೆ ನಟ್ಟುದೋ
ಅಗಲ್ದಪಾಪಿಯನೆನ್ನನಿಂತಿಱಿದು ಸುಟ್ಟುದೋ
ಎಂದುಟ್ಟ ಸೀರೆಯಿಂದೂದುತ್ತೆ ಒರಸುತ್ತೆ
ಕೆಂದಳಿರುಗಳೊಳೊತ್ತಿ ನೋಡುತ್ತೆ ಬಾಡುತ್ತೆ
ಹಾ ಕಂಡೆ ನಾನೊಂದುಪಾಯಮನಿದಕ್ಕೆಂದು
ಈ ಕಣ್ಗೆ ಎನ್ನ ಕಣ್ಣೆತ್ತು ನೋಡುವೆನೆಂದು
ಬೋಳೆಯಂಬಂ ತೆಗೆದು ಮನದಂದು ಶಂಕಿಸದೆ
ಕಾಳತ್ತಿಯರಸನೇ ನೋಡೆಂದು ಚಿಂತಿಸದೆ

ಶಂಕಿಸದೆ ಹೆಡ್ಡೈಸದರವರಿಸದಂದೆತ್ತಿ
ಭೋಂಕೆನಲು ಮಿಂಟಿ ಒಡೆದಿರ್ದ ಕಣ್ಗೊಳಗೊತ್ತಿ
ನೋಡೆ ತೊಳತೊಳಗಿ ತಳತಳಿಸಿ ಬೆಳಬೆಳಗುತಿರೆ
ನೋಡಿ ಕಣ್ಣಿಂದನಾನಂದಮಯನಾಗುತಿರೆ
ತೊಟ್ಟೆನಲ್ಕಲ್ಲಿ ಮತ್ತೊಂದು ಬಲಗಣ್ಣೊಸರೆ
ಕಟ್ಟಾಳ್ ನಿರೀಕ್ಷಿತೆ ಕಲಿಯಾಗಿ ತಾನರರೆ
ಇನ್ನಂಜೆನಿನ್ನಂಜೆನಿನ್ನೊಂದು ಕಣ್ಣುಂಟು
ಎನ್ನವನೆ ಎನ್ನವನೆ ಬಳಿಕೆನಗೆ ನೀನುಂಟು
ಉಂಗುಟದೊಳೊತ್ತಿ ಕಣ್ಗುಱುಹ ಮಾಡುತ್ತಲ್ಲಿ
ಸಂಗಣಿಪ ತನ್ನ ಮತ್ತೊಂದು ಕಣ್ದೆಗೆದಲ್ಲಿ
ತಂದುಂಗುಟದ ಕುಱುಹಿನಲ್ಲಿ ನೆಱೆಕಣ್ಗೊಳಿಸೆ
ಇಂದುಧರನಿನ್ನಿರಲ್ ಬಾರದೆಂದಂಕುರಿಸೆ
ಶಿವಲಿಂಗದಿಂ ಶಿವನ ಹಸ್ತ ಉದ್ಭವಿಸುತಿರೆ
ಶಿವನಲ್ಲಿ ಕಣ್ಣಪ್ಪನೆಸೆವ ಕೈವಿಡಿವುತಿರೆ
ಹೂ ಮಳೆಗಳೆಱಗೆ ದುಂದುಭಿ ಕುಳಂಗಳು ಮೊಳಗೆ
ಕಾಮಹರ ಪಂಚವದನಂ ದಶಭುಜಂ ತೊಳಗೆ
ನಂದೀಶ ವೀರಭದ್ರಾದಿ ಗಣಸಮಿತಿ ಬರೆ
ಇಂದ್ರಾದಿ  ದೇವರ್ಕಳೆಲ್ಲರೆಯ್ತರುತಮಿರೆ
ಕಂಡಾ ಗಿರಿಜೆ ಎನ್ನ ಭಕ್ತ ಕಣ್ಣಪ್ಪನಂ
ಕಂಡಾ ಗಿರಿಜೆ ಎನ್ನ ನೇಹದಸುವಪ್ಪನಂ
ಇಂತಪ್ಪ ಭಕ್ತನಂ ಕಂಡುದಿಲ್ಲಾ ದೇವಿ
ಇಂತಪ್ಪ ಭಕ್ತಿಯಂ ಕಂಡುದಿಲ್ಲಾ ದೇವಿ

ಎನಗೆ ಕಣ್ಣುಂ ನೀನೆ ಎನಗೆ ಪುಣ್ಯಂ ನೀನೆ
ಎನಗೆ ಪುತ್ರಂ ನೀನೆ ಎನಗೆ ಮಿತ್ರಂ ನೀನೆ
ನಡೆ ವಿಮಾನವನೇಱಿಕೊಳ್ಳು ಕಣ್ಣಂದ ಎನೆ
ನುಡಿದು ಬಿನ್ನಯ್ಸಿದಂ ಸುರರೆಲ್ಲ ಚೋದ್ಯಮೆನೆ
ದೇವ ಬೆಸಸಲುವೇಳ್ಕು ತನುವೆರಸಿ ಬಪ್ಪೆನೇ



ಭಾವಿಪೊಡೆ ಈ ದೇಹವೆರಸಿ ಬರಲಾರ್ಪೆನೇ
ಎನಲೊಂದು ದೇಹಮುಂ ಕರಮೆಱೆವುತಿಕ್ಕೆಂದು
ಮನಮೊಸೆದುವೊಂದು ನಿರ್ಮಳ ಕಾಯಮಂತಂದು
ಕಣ್ಣಪ್ಪನಂ ಪೊಗಿಸಿ ಸರ್ವಸಂಭ್ರಮವೆರಸಿ
ಕಣ್ಣೆತ್ತನಂ ವಿಮಾನದೊಳು ನಲವಿಂದಿರಿಸಿ
ನೆಗೆದನೀಶ್ವರನಂದು ಕೈಲಾಸಪುರದತ್ತ
ಬಗೆಯೊಳಾನಂದ ಪುಳಕಂಗಳಂ ಧರಿಸುತ್ತ

ದೇವಗಣ ಸಂಕುಲದೊಳಪ್ರತಿಮನೊಪ್ಪಿದಂ
ದೇವಗಣ ನಿವಹದೊಳಗಿಂದುಧರನೊಪ್ಪಿದಂ
ಸಮರದೊಳಗಂಧಾಸುರಾಹಾರಿಯೊಪ್ಪಿದಂ
ಅಮಮ ಹಂಪೆಯ ವಿರೂಪಾಕ್ಷನಿಂತೊಪ್ಪಿದಂ
ಮೂಱುಂ ಕಣ್ಣುಂಟದಱಿಂ
ಬೋಱಿತ್ತಲು ನಿನಗೆ ಭಕ್ತಿನಯನವನಿತ್ತಂ
ಮಾಱೋದೆಂ ಕಣ್ಣಪ್ಪಗೆ
ನೀಱನೆ ಕರುಣಿಪುದು ಹಂಪೆಯ ವಿರೂಪಾಕ್ಷಾ.

## ಕವಿ-ಕಾವ್ಯ ವಿಚಾರ

ಹರಿಹರನು ಕನ್ನಡದ ಒಬ್ಬ ಶ್ರೇಷ್ಠ ಕವಿ ಹಾಗೂ ಪರಮಶಿವಭಕ್ತ. ಹಂಪೆಯ ವಿರೂಪಾಕ್ಷನೇ ಇವನ ಇಷ್ಟ ದೈವ. ಇವನು ಸುಮಾರು 12-13ನೆಯ ಶತಮಾನದಲ್ಲಿ ಇದ್ದಿರಬಹುದೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ರಾಘವಾಂಕನ ಸೋದರಮಾವನಾದ ಹರಿಹರನು ಹೊಯ್ಸಳ ನರಸಿಂಹ ಬಲ್ಲಾಳನಲ್ಲಿ ಕರಣಿಕನಾಗಿ ಸೇವೆ ಸಲ್ಲಿಸುತ್ತಿದ್ದನು. ಬಾಲ್ಯದಿಂದಲೂ ಶಿವಭಕ್ತನೆನಿಸಿಕೊಂಡ ಹರಿಹರನು ಸುಮಾರು 120ಕ್ಕೂ ಹೆಚ್ಚು ರಗಳೆಗಳನ್ನು ರಚಿಸಿದ್ದಾನೆ. ಇವನ ಪುರಾತನ ರಗಳೆಗಳು ತಮಿಳುನಾಡಿನ ಅರುವತ್ತು ಮೂರು ನಾಯನ್ಮಾರರ ಚರಿತ್ರೆಗಳನ್ನು ಒಳಗೊಂಡಿದೆ. ರಗಳೆ ಎಂಬುದು ಒಂದು ಛಂದಸ್ಸು. ಇದು ಕಥನ ಕಲೆಗೆ ಚೆನ್ನಾಗಿ ಹೊಂದಿಕೊಳ್ಳುತ್ತದೆ.

ಹರಿಹರನು ಗಿರಿಜಾಕಲ್ಯಾಣ, ಪಂಪಾಶತಕ, ರಕ್ಷಾಶತಕ, ಮುಡಿಗೆಯ ಅಷ್ಟಕ ಮುಂತಾದ ಕೃತಿಗಳನ್ನು ರಚಿಸಿದ್ದಾನೆ. ಈ ರಗಳೆಯಲ್ಲಿ ಬೇಡರ ಕಣ್ಣಪ್ಪನ ಭಕ್ತಿಯ ಪರಾಕಾಷ್ಠೆಯನ್ನು ಕಾಣಬಹುದು.

## I. ಕಠಿಣ ಪದಗಳ ಅರ್ಥ

ತಿರುಕಾಳತ್ತಿ = ಶ್ರೀ ಕಾಳಹಸ್ತಿ ಎಂಬ ಊರು; ವಸುಧೆ =ಭೂಮಿ; ಕಾರ್ಮುಗಿಲು =ಕಪ್ಪುಮೋಡ; ಬೇಂಟೆ =ಬೇಟೆ; ಜಂಜುದಲೆ =ಸಿಕ್ಕುಗಟ್ಟಿದ ತಲೆ; ತೊಗಲುಡಿಗೆ =ಚರ್ಮದಿಂದ ಮಾಡಿದ ಉಡುಪು; ಕೂರಂಬು =ಚೂಪಾದ ಬಾಣ, ಹರಿತವಾದ ಬಾಣ; ಪಂಚಾಕ್ಷರಿಯನುಗುಳೆ =ಶಿವನಾಮವನ್ನು ಹೇಳುತ್ತಾ ಇರಲು; ಕಣ್ ಪುರ್ಬು =ಕಣ್ಣಿನ ಹುಬ್ಬು; ಕೆತ್ತುತ್ತಮಿರೆ =ಮಿಡಿಯುತ್ತಿರಲಾಗಿ; ಲೇಸಪ್ಪುದು =ಒಳ್ಳೆಯದಾಗುವುದು; ಕಂತುಹರ =ಮನ್ಮಥನನ್ನು ಕೊಂದ ಶಿವ ; ಪನ್ನಗಧರ =ಹಾವನ್ನು ಧರಿಸಿರುವವನು, ಶಿವ; ಇನ್ನಾನೆ =ಇನ್ನು ನಾನೆ; ಕುನಿದು =ಬಗ್ಗಿ; ಅಂಡಲೆವುದು =ಅಲೆದಾಡುವುದು; ಕಾಹು =ಕಾಪು, ರಕ್ಷಣೆ; ಕಿರಾತ =ಬೇಡ; ಸಂಕಲೆ =ಶೃಂಖಲೆ, ಬೇಡಿ; ಮುತ್ತುಕದ ತಳ್ತೆಲೆ =ಮುತ್ತುಗದ ಚಿಗುರೆಲೆ; ಕಾಬಳತೆ =ಕಣ್ಣಿಗೆ ಕಾಣುವಷ್ಟು ಅಳತೆ; ನೇಹ=ಸ್ನೇಹ; ದಿಟ್ಟಿ =ದೃಷ್ಟಿ; ನಾಲ್ದೆಸೆ =ನಾಲ್ಕು ದಿಕ್ಕು; ಬೆರಕೆಯಿಲ್ಲದ =ನಿಶ್ಕಲ್ಮಷವಾದ; ಶಬರ =ಬೇಡ; ಲುಬ್ಧಕ =ಬೇಡ; ಇನ್ನಂಜೆ =ಇನ್ನು ಭಯಪಡುವುದಿಲ್ಲ; ಉಂಗುಟ =ಉಂಗುಷ್ಟ; ಇಂದುಧರ =ಚಂದ್ರನನ್ನು ಧರಿಸಿದವ, ಶಿವ; ಚೋದ್ಯ =ಆಶ್ಚರ್ಯ; ಸುರರು =ದೇವತೆಗಳು; ನಿವಹ =ಸಮೂಹ; ಚಿತ್ತಜ =ಮನ್ಮಥ;

## II. ಈ ಪ್ರಶ್ನೆಗಳಿಗೆ ಸಂಕ್ಷಿಪ್ತವಾಗಿ ಉತ್ತರಿಸಿ

1. ಬೇಡರಕಣ್ಣಪ್ಪನು ಹೇಗೆ ಬೇಟೆಯನ್ನಾಡಿದನು ?
2. ಮೃಗವು ಮಾಯವಾದಾಗ ಬೇಡನು ಶಿವನನ್ನು ಏನೆಂದು ಕೇಳಿಕೊಂಡನು ?



3. ಬೇಡನು ಮೃಗವನ್ನು ಕೊಂದು ಹೇಗೆ ಶಿವನಿಗೆ ನೈವೇದ್ಯ ಮಾಡಿದನು ?
4. ಗಿರಿಜೆಯು ಬೇಡನ ಬಗ್ಗೆ ಶಿವನಲ್ಲಿ ಏನೆಂದಳು ?
5. ಶಿವಲಿಂಗದ ಕಣ್ಣಿನಲ್ಲಿ ನೆತ್ತರು ಸುರಿದಾಗ ಕಣ್ಣಪ್ಪನು ಏನು ಮಾಡಿದನು ?

## III. ಈ ಪ್ರಶ್ನೆಗಳಿಗೆ ವಿವರವಾಗಿ ಉತ್ತರಿಸಿ

1. ಬೇಡರ ಕಣ್ಣಪ್ಪನ ಪೂಜಾ ವೈಭವವನ್ನು ವಿವರಿಸಿ.
2. ಬೇಡರ ಕಣ್ಣಪ್ಪನ ಭಕ್ತಿಯ ಪರಾಕಾಷ್ಠೆಯನ್ನು ವಿವರಿಸಿ.

## IV. ಈ ವಾಕ್ಯಗಳನ್ನು ಸಂದರ್ಭಸಹಿತ ವಿವರಿಸಿ.

1. ಅಕ್ಕಕ್ಕು ಮುಡಿದ ಹೂವಿಂ ಪೂಜಿಸಿದರುಂಟೆ
2. ಮುಕ್ಕುಳಿಸಿದುದಕದಿಂ ಮಜ್ಜನಕೆಱೆದರುಂಟೆ
3. ಅವನ ಕೈಯೊಳು ಹೊಲಸು ಮನದೊಳಮೃತಂ

## V. ಭಾಷಾಭ್ಯಾಸ

**1. ಈ ಪದಗಳ ತತ್ಸಮ ತದ್ಭವಗಳನ್ನು ಬರೆಯಿರಿ.**

ಶೃಂಖಲೆ, ದಿಟ್ಟಿ, ಉಂಗುಷ್ಠ, ನೇಹ

**2. ಈ ಪದಗಳನ್ನು ಬಿಡಿಸಿ ಸಂಧಿಗಳನ್ನು ಹೆಸರಿಸಿ.**

ಎದೆಗುಪ್ಪಸ, ಶುದ್ಧಾತ್ಮ, ಧೂಪಾರತಿ, ಮಹೋತ್ಪಾತ

3. ಈ ಪದಗಳ ವಿಗ್ರಹ ವಾಕ್ಯ ಮಾಡಿ ಸಮಾಸವನ್ನು ಹೆಸರಿಸಿ.

ಪಂಚಾಕ್ಷರಿ, ಕಾರ್ಮುಗಿಲು, ಧೂಪಾರತಿ, ದೇವಾಲಯ

## VI. ಚಟುವಟಿಕೆ

1. ಬೇಡರ ಕಣ್ಣಪ್ಪನ ಕಥೆಯನ್ನು ನಾಟಕ ರೂಪದಲ್ಲಿ ಪ್ರದರ್ಶಿಸಿ.
2. ಹರಿಹರನ ಇತರ ಕೃತಿಗಳನ್ನು ಓದಿರಿ.



# 10. ಮಹಾಶ್ವೇತೆಯ ವೃತ್ತಾಂತ

- ನಾಗವರ್ಮ

ನಿನಗೇಂ ಪೇಟ್ದಪೆನಾಂ ಮಹಾತ್ಮರೆನಿಸಿರ್ದಾ ತಂದೆಗಂ ತಾಯ್ಗಮೊ-
ರ್ವನೆ ನಿರ್ಭಾಗ್ಯನಿವಾಸೆಯೆಂ ನಿಖಿಲ ಪಾಪಾಕಾರೆಯೆಂ ದುಃಖಭಾ-
ಜನೆಯೆಂ ಪುಟ್ಟಿದೆನೆನ್ನನೀಕ್ಷಿಸಲೊಡಂ ತಾತಂ ಮಹಾಶ್ವೇತೆಯೆಂ
ದನುರಾಗಂಬೆರಸಿಟ್ಟನೆನ್ನ ಪೆಸರಂ ಗಂಧರ್ವಚಕ್ರೇಶ್ವರಂ

ವ॥ ಆಗಳೊರ್ಮೆ ವಸಂತದೊಳುಳ್ಳಲರ್ದ ನವನಳಿನ ಕುಮುದ ಕುವಲಯ ಕಲ್ಹಾರಂಗಳಿಂ ಕಣ್ಗೊಳಿಪಚ್ಛೋದಸರಸಿಗೆ ಜನನಿವೆರಸು ಮಜ್ಜನಕ್ಕೆಂದು ನಡೆತಂದು ನೋಟ್ಪಲ್ಲಿ ಮುಂದೆ ಮುನಿಕುಮಾರನೊರ್ವನೆಯ್ತರುತಿರೆ-

ಕರತಳವೊಂದಱೊಳ್ ಮಣಿಕಮಂಡಲು ನಾಳಸಮೇತಮಪ್ಪ ಕೇ
ಸರ ಫಲದಂತಿರ್ದುದು ಮನೋಜವಿನಾಶದಿನಟ್ವ ತನ್ಮನೋ
ಹರಿಯ ಪೊದಳ್ದ ಕಣ್ಬನಿಗಳಂತಮಲಸ್ಫಟಿಕಾಕ್ಷಮಾಲೆ ಸುಂ
ದರತರಮಾದುದೊಂದು ಕರಪಲ್ಲವದೊಳ್ ಮುನಿಪಾಗ್ರಗಣ್ಯನಾ

ತನಗನುರೂಪಮೆಂಬಿನೆಗಮೊರ್ವ ಕುಮಾರ ತಪಸ್ವಿ ದೇವತಾ
ರ್ಚನೆಗೆ ವನಕ್ಕೆ ಬಂದು ಪೊಸಪೂಗಳನಟ್ತಿಯೊಳಾಯ್ದು ಕೊಯ್ದು ಬೆ-
ನ್ನನೆ ಬರಲೀ ವನಾಂತರ ಸರೋವರದಲ್ಲಿಗೆ ಮೀಯಲೆಂದು ಮೆ-
ಲ್ಲನೆ ಬರುತಿರ್ದ ತನ್ಮುನಿಕುಮಾರನನಾಂ ಬಿಡೆ ನೋಡಿದೆಂ ನೃಪಾ

ನವಯೌವನದೊಳ್ ಗುಣದೋ-
ಷವಿಚಾರಮನಿಂತು ಮಾಡಲೀಯದ ಭಾವೋ-
ದ್ಭವನಿಂ ಪರವಶೆಯಾದೆಂ
ನವಕುಸುಮಾಸವದೆ ಸೊರ್ಕಿದಳಿನಿಯ ತೆಱದಿಂ

ಪಲಬರ್ ಕಾಂತೆಯರೊಲ್ದು ಪೋದರೊಳರೆಂತುಂ ಕಾಂತರೊಳ್ ಬೇಟವ-
ಗ್ಗಲಿಸಲ್ ಕಾಣದೆ ಲಜ್ಜೆಗೆಟ್ಟರೊಳರಿಂತೀ ಲೋಕದೊಳ್ ರೂಪುಗಾ-
ಣಲೊಡಂ ತೊಟ್ಟನೆ ಲಜ್ಜೆಗೆಟ್ಟಱಿವುಗೆಟ್ಟೆನ್ನಂತೆ ಕಣ್ಗೆಟ್ಟು ಪೇ-
ೞೊಲವಿಂದಿಂತೆರ್ದೆಗೆಟ್ಟರಾರೆನುತುಮತ್ಯೌತ್ಸುಕ್ಯಮಂ ತಾಳ್ದಿದೆಂ

ಪೆಸರೇನಾರ್ಗೀತನೀ ಜವ್ವನಿಗ ತವಸಿ ತೊಟ್ಟಿರ್ಪ ಕರ್ಣಾವತಂಸಂ
ಪೊಸತೀ ಲೋಕಕ್ಕಿದಾವಂಘ್ರಿಪದ ಪೊಳೆವ ಪೂಗೊಂಚಲಿಂದಾದುದೋ ನೀಂ
ಬೆಸಸಲ್ವೇೞ್ಕಿಂತಿದಂ ಕೌತುಕಮನೆನಗೆನುತ್ತುಂ ನಮಸ್ಕಾರಪೂರ್ವಂ
ಬೆಸಗೊಂಡೆಂ ತನ್ಮುನೀಂದ್ರಾನುಚರ ಮುನಿಯನಾನೆಂದತಿಪ್ರೀತಿಯಿಂದಂ

ವ॥ ಅಂತು ಬೆಸಗೊಳೆ

ಬೆಸಗೊಳ್ವುದಱಿಂದಿದನು-
ದ್ದೆಸಮಾವುದು ತರುಣಿ ನಿನಗೆ ಕೌತುಕಮೆನೆ ಕೇ-
ಳುಸಿರ್ದಪೆನೆಂದಾ ಮುನಿಪಂ
ನಸುನಗುತುಂ ಪೇೞಲಾಗಳುದ್ಯತನಾದಂ

ವ॥ ಅದೆಂತೆನೆ ಶ್ವೇತಕೇತು ಮಹಾಮುನಿಗಂ ಲಕ್ಷ್ಮಿಗಂ ಕುಮಾರಂ ಪುಂಡರೀಕನೆಂಬೊನೀತಂಗೆ ಶೈಶವಂ ಪತ್ತುವಿಡಲೊಡಮಖಿಳ ವಿದ್ಯಾ ಕಲಾಪದೊಳ್ ಪರಿಣತನಂ ಮಾಡಿ ಯತಿತ್ವಮಂ ಕಯ್ಕೊಳಿಸೆ ತದನುಷ್ಠಾನಪರಾಯಣನಾದ ಮಹಾನುಭಾವನೀತಂಗೀ ವ್ರತವಿರುದ್ಧಮಪ್ಪ ಕುಸುಮಮಂಜರಿಯೆಂತು ಬಂದುದೆಂಬೆಯಪ್ಪೊಡೆ

ಇಂದು ಚತುರ್ದಶಿಯಪ್ಪುದ-
ಱಿಂದಂ ಕೈಲಾಸವಾಸಿಯಂ ಕಾಣಲ್ಕಾ-
ನಂದದೆ ದಿವದಿಂದಿರ್ಬರು-
ಮೊಂದಾಗಿ ಬರುತ್ತುಮಿರ್ಪುದುಂ ತತ್ಕ್ಷಣದೊಳ್

ವ॥ ವನದೇವತೆಯೊರ್ವಳ್ ಬಂದು ಪೊಡವಟ್ಟು ಭುವನತ್ರಯಾಭಿರಾಮಮಪ್ಪ ನಿನ್ನ ಸೌಕುಮಾರ್ಯಕ್ಕೆ ತಕ್ಕಲಂಕಾರಮೀ ದಿವ್ಯಕುಸುಮಮಂಜರಿಯನವತಂಸಂ ಮಾಡಿ ಪಾರಿಜಾತಜನ್ಮಮಂ ಸಫಲಂ ಮಾೞ್ಪುದೆಂದು ಬಿನ್ನವಿಸೆ ನಿಜ



ರೂಪಸ್ತುತಿಗೆ ಲಜ್ಜಿಸಿ ಕೇಳದಂತೆ ಪೋಗೆ ಮತ್ತಂ ಬೆನ್ನನೆ ಪತ್ತಿ ಬರುತಿರ್ಪುದು ಮಾಂ ಕಂಡು ಕಾರುಣ್ಯದಿಂದೀ ಕಾಂತೆಗೆ ಸಂತೋಷಂ ಮಾಡಿಮೆನಲಿದೇಕೆ ಬೇಡವೇಡೆನೆಯುಂ ಕಿವಿಯೊಳ್ ತೊಡರ್ಚಿ ಪೋದಳೀ ಕುಸುಮಮಂಜರಿಯನೆಂದು ಸಹಚರಮುನಿ ಪೇೞೆ ಪುಂಡರೀಕಂ ದರಹಸಿತಾಧರಕಪೋಲತಲನಾಗಿ

ಎಳಸುತ್ತಿರ್ದಪೆ ಪುಷ್ಪಮಂಜರಿಗೆ ಕೊಳ್ಳೀ ಸುತ್ತಿದೇಕೆಂದು ಸಂ-
ಚಲಿಸುತ್ತುಂ ನಿಜಕರ್ಣದಿಂ ತೆಗೆದು ಸೋಲ್ತೆಂ ಕೂಡು ನೀನೆನ್ನೊಳೆಂ-
ದಳಿಮಾಲಾರವದಿಂದೆ ಪೇೞ್ವ ತೆಱದಿಂ ಮತ್ಕರ್ಣದೊಳ್ ತಾರಕೋ-
ಜ್ಜ್ವಲಮಂ ರಂಜಿಪ ಪುಷ್ಪಮಂಜರಿಯನತ್ಯೌತ್ಸುಕ್ಯದಿಂದಿಕ್ಕಿದಂ

ಇಂ ಪೇೞ್ವುದೇನನನ್ನ ಕ-
ದಂಪಿನ ನಸುಸೋಂಕಿನೊಂದು ಸುಖದಿಂದಾದಂ
ಕಂಪಿಸುತಿರೆ ಕರತಳದಿಂ-
ದಂ ಪೋದತ್ತಕ್ಷಮಾಲೆ ನಾಣ್ಬೆರಸಾಗಳ್

ವ॥ ಅಂತು ಪೋದೊಡಮಱೆಯದಿರಲಾನಾ ಅಕ್ಷಾವಳಿಯಂ ನೆಲಕೆ ಬೀೞ್ವಿನಂ ಪಿಡಿದು ತೊಳಗುವ ಹಾರಮಂ ತಳೆವಂತೆ ಕೊರಲೊಳ್ ತಳೆದು ಸುಖಮಂ ತಳೆಯಲಿಂತಾ ವ್ಯತಿಕರದೊಳೆನ್ನಂ ಛತ್ರಧಾರಿಣಿ ನೋಡಿ

ತಡೆದಿರಲಾರದಿಂತು ಮೊಗಮಜ್ಜನಮಂ ನೆಱೆ ಮಾಡಿ ದೇವಿಯರ್
ನಡೆಗೊಳಲಿರ್ದಪರ್ ಮನೆಗೆ ಮಜ್ಜನಕೀಗಳೆ ರಾಜಪುತ್ರಿ ನೀಂ
ನಡೆವುದೆನುತ್ತುಮಿಚ್ಛೆಯಣಮಿಲ್ಲದೊಡಂ ತೆಗೆದಳ್ ಕರಂ ಮನಂ-
ಕಿಡೆ ಪೊಸೆತಪ್ಪದೊಂದು ಪಿಡಿಗಂಕುಶಮಿಟ್ಟು ಮರಳ್ಚುವಂದದಿಂ

## ಕವಿ-ಕಾವ್ಯ ಪರಿಚಯ

ಈ ಕಾವ್ಯ ಭಾಗವನ್ನು ಮೊದಲನೆಯ ನಾಗವರ್ಮನ 'ಕರ್ಣಾಟಕ ಕಾದಂಬರಿ' ಎಂಬ ಚಂಪೂ ಕಾವ್ಯದಿಂದ ಆರಿಸಲಾಗಿದೆ. ಛಂದೋಂಬುಧಿ ಎಂಬ ಛಂದೋಗ್ರಂಥದ ಕರ್ತೃವೂ ಈತನೇ ಎಂಬುದಾಗಿ ತಿಳಿಯಲಾಗಿದೆ. ಈತನ ಕಾಲ

ಸುಮಾರು ಕ್ರಿ.ಶ. 990. ಸಂಸ್ಕೃತ ಭಾಷೆಯಲ್ಲಿ ಗದ್ಯಕಾವ್ಯವಾಗಿ ರಚಿತವಾಗಿರುವ ಬಾಣ ಕವಿಯ ಕಾದಂಬರಿಯನ್ನು ನಾಗವರ್ಮನು ಕನ್ನಡದಲ್ಲಿ ಚಂಪೂರೂಪಕ್ಕೆ ಪರಿವರ್ತಿಸಿದ್ದಾನೆ. ಗದ್ಯದಲ್ಲಿರುವ ಕೃತಿಯನ್ನು ಚಂಪೂ ರೂಪಕ್ಕೆ ಪರಿವರ್ತಿಸಿರುವುದೂ ಪುರಾಣೇತಿಹಾಸಗಳಲ್ಲಿ ಪ್ರಸಿದ್ಧವಾದ ಕಥಾವಸ್ತುವನ್ನು ಬಿಟ್ಟು ಕಾಲ್ಪನಿಕ ವಸ್ತುವಿನ ಕಥೆಯನ್ನು ರಮ್ಯವಾದ ಕಾವ್ಯವಾಗಿ ರಚಿಸಿರುವುದೂ ಇಲ್ಲಿಯ ವಿಶೇಷ. ಈ ಭಾಗದಲ್ಲಿ ಮಹಾಶ್ವೇತೆ ಮುನಿಕುಮಾರನಾದ ಪುಂಡರೀಕನನ್ನು ಮೊದಲ ಸಲ ಕಂಡಾಗ ಅವರು ಪರಸ್ಪರರಲ್ಲಿ ಮೋಹಗೊಂಡುದನ್ನೂ ತತ್ಪರಿಣಾಮವಾಗಿ ನಡೆದ ಒಂದು ಸ್ವಾರಸ್ಯಕರ ಘಟನೆಯನ್ನೂ ನಿರೂಪಿಸಲಾಗಿದೆ.

## I. ಕಠಿಣ ಪದಗಳ ಅರ್ಥ

1. ಪೇಳ್=ಹೇಳು; ನಿರ್ಭಾಗ್ಯನಿವಾಸೆ =ದುರದೃಷ್ಟವಂತೆ; ದುಃಖಭಾಜನೆ =ದುಃಖಪಾತ್ರಳು ; ಈಕ್ಷಿಸು =ನೋಡು ; ಅನುರಾಗ =ಪ್ರೀತಿ; ಗಂಧರ್ವಚಕ್ರೇಶ್ವರ =ಗಂಧರ್ವರಾಜ;

ವ ॥ ಅಲರ್ದ =ಅರಳಿದ; ಕಣ್ಗೊಳಿಸು =ಶೋಭಿಸು; ಸರಸಿ =ಸರೋವರ; ಎಯ್ತರು =ಬರು; ನಳಿನ =ತಾವರೆ; ಕುಮುದ =ನೈದಿಲೆ; ಕುವಲಯ =ನೀಲಕಮಲ, ಬೆಳ್ದಾವರೆ; ಕಲ್ಹಾರ =ಒಂದು ಬಗೆಯ ನೈದಿಲೆ;

2. ಕರತಳ =ಅಂಗೈ; ಕೇಸರಫಲ =ಬಕುಳಫಲ; ನಾಳ =ತಾವರೆ ದಂಟು; ಮನೋಜ =ಮನ್ಮಥ; ಪೊದಟ್ಟಿ =ಹೊರಹೊಮ್ಮಿದ; ಅಮಲ =ಪರಿಶುದ್ಧವಾದ; ಅಕ್ಷಮಾಲೆ =ಜಪಸರ; ಕರಪಲ್ಲವ =ಚಿಗುರಿನಂತಿರುವ ಕೈ;

3. ಅನುರೂಪ =ಸಮಾನ, ಯೋಗ್ಯ; ಕುಮಾರತಪಸ್ವಿ =ತರುಣಮುನಿ; ಅರ್ತಿ =ಪ್ರೀತಿ; ಬಿಡೆನೋಡು =ಬಿಡದೆ ನೋಡು, ಒಂದೇ ಸಮನೆ ನೋಡು;

4. ಮಾಡಲೀಯದ =ಮಾಡಲು ಅವಕಾಶ ಕೊಡದ; ಭಾವೋದ್ಭವ =ಮನ್ಮಥ; ಅಳಿ =ದುಂಬಿ; ಅಳಿನಿ =ಹೆಣ್ಣುದುಂಬಿ;

5. ಪಲಬರ್ =ಹಲವರು; ಒಲ್ದುಪೋದರ್ =ಪ್ರೀತಿಸಿ ಹೋದವರು; ಕಾಂತೆಯರು =ಸ್ತ್ರೀಯರು; ಬೇಟ =ಪ್ರಣಯ; ಅಗ್ಗಲಿಸು =ಹೆಚ್ಚಾಗು; ತೊಟ್ಟನೆ =ಇದ್ದಕ್ಕಿದ್ದಂತೆ; ಕಣ್ಗೆಟ್ಟು =ದಿಕ್ಕೆಟ್ಟು ; ಔತ್ಸುಕ್ಯ =ಕುತೂಹಲ, ಉತ್ಸಾಹ;

6. ಆರ್ಗೀತನ್ =ಈತನು ಯಾರು ; ತೊಟ್ಟಿರ್ಪ =ಧರಿಸಿರುವ; ಕರ್ಣಾವತಂಸಂ =ಕಿವಿಯ ಆಭರಣ; ಅನುಚರ =ಸಹಾಯಕ, ಸೇವಕ;

7. ಉದ್ದೆಸ =ಉದ್ದೇಶ; ಉಸಿರ್ದಪೆ =ಹೇಳುತ್ತೇನೆ; ಉದ್ಯತನಾಗು =ತೊಡಗು;

ವ॥ ಶೈಶವ =ಎಳಮೆ, ಶಿಶುತನ; ಪತ್ತುವಿಡಲು =ಕಳೆಯಲು; ಪರಿಣತ =ನುರಿತ, ನಿಪುಣ; ಯತಿತ್ವ =ಬ್ರಹ್ಮಚರ್ಯ, ಸನ್ಯಾಸಿತ್ವ; ಕುಸುಮಮಂಜರಿ =ಹೂಗೊಂಚಲು;

8. ಕೈಲಾಸವಾಸಿ =ಕೈಲಾಸಪತಿಯಾದ ಪರಮೇಶ್ವರ; ದಿವ =ಸ್ವರ್ಗಲೋಕ;

ವ॥ ಪೊಡವಡು =ನಮಸ್ಕರಿಸು; ಅಭಿರಾಮ =ಸುಂದರ, ರಮಣೀಯ; ಭುವನತ್ರಯ =ಮೂರು ಲೋಕ; ನಿಜರೂಪಸ್ತುತಿ =ತನ್ನ ಸೌಂದರ್ಯದ ಹೊಗಳಿಕೆ; ಲಜ್ಜೆ =ನಾಚಿಕೆ; ಬೆನ್ನನೆಪತ್ತಿಬರು =ಬೆನ್ನಹಿಂದೆಯೇ ಬರು, ಹಿಂಬಾಲಿಸು; ಕಾರುಣ್ಯ =ದಯೆ; ತೊಡರ್ಚು =ತೊಡಿಸು, ಮುಡಿಸು; ಸಹಚರ =ಒಡನಾಡಿ; ಅಧರ =ತುಟಿ; ಕಪೋಲ =ಕೆನ್ನೆ; ದರಹಸಿತ =ನಸುನಗೆ, ಮಂದಸ್ಮಿತ;

9. ಎಳಸು =ಬಯಸು; ನಿಜಕರ್ಣ =ತನ್ನ ಕಿವಿ; ರವ =ಧ್ವನಿ; ತಾರಕೋಜ್ವಲ =ನಕ್ಷತ್ರದಂತೆ ಹೊಳೆಯುವ; ರಂಜಿಪ =ಪ್ರಕಾಶಮಾನವಾದ;

10. ಇಂ ಪೇಳ್ವುದೇನ್ =ಇನ್ನು ಹೇಳುವುದೇನು; ಕದಂಪು =ಕೆನ್ನೆ; ನಸುಸೋಂಕು =ಅಲ್ಪಸ್ಪರ್ಶ; ಪೋದತ್ತು =ಹೋಯಿತು (ಬಿದ್ದಿತು); ನಾಣ್ಚು =ನಾಚಿಕೆಪಡು;

ವ॥ ಅಕ್ಷಾವಳಿ =ಜಪಸರ; ತಳೆ =ಹೊಂದು, ಧರಿಸು; ವ್ಯತಿಕರ =ಸಂದರ್ಭ; ಛತ್ರಧಾರಿಣಿ =ಕೊಡೆ ಹಿಡಿಯುವ ಊಳಿಗದವಳು;

11. ತಡೆದಿರಲಾಗದು =ವಿಳಂಬ ಮಾಡಲಾಗದು; ಪಿಡಿ =ಹೆಣ್ಣಾನೆ; ಅಣಂ =ಸ್ವಲ್ಪವೂ; ಮರಳ್ಚು =ಹಿಂತಿರುಗಿಸು;

## II. ಈ ಪ್ರಶ್ನೆಗಳಿಗೆ ಸಂಕ್ಷಿಪ್ತವಾಗಿ ಉತ್ತರಿಸಿ.

1. ಮಹಾಶ್ವೇತೆಗೆ ಆ ಹೆಸರನ್ನು ಇಟ್ಟವರು ಯಾರು ?
2. ಮಹಾಶ್ವೇತೆಯ ಬಾಲ್ಯದ ಕುರಿತು ಬರೆಯಿರಿ.
3. ಅಚ್ಛೋದ ಸರೋವರವು ಹೇಗೆ ಶೋಭಿಸುತ್ತಿತ್ತು ?
4. ಮಹಾಶ್ವೇತೆ ಸರೋವರಕ್ಕೆ ಹೋದಾಗ ಅಲ್ಲಿಗೆ ಯಾರು ಬಂದರು ?
5. ಮುನಿಕುಮಾರನ ಕೈಗಳಲ್ಲಿ ಏನಿದ್ದುವು ?
6. ಮುನಿಕುಮಾರನ ಹಿಂದೆ ಬರುತ್ತಿದ್ದವನು ಯಾರು ? ಅವನು ಏನು ಮಾಡುತ್ತಿದ್ದನು ?
7. ಮುನಿಕುಮಾರನನ್ನು ನೋಡಿ ಮಹಾಶ್ವೇತೆ ಹೇಗೆ ಪರವಶಳಾದಳು ?
8. ಮಹಾಶ್ವೇತೆ ತನ್ನಲ್ಲಿ ತಾನೇ ಆಶ್ಚರ್ಯಪಡಲು ಕಾರಣವೇನು ?
9. ಮಹಾಶ್ವೇತೆ ಮುನಿಕುಮಾರನ ಜೊತೆಯಲ್ಲಿದ್ದ ಋಷಿಕುಮಾರನನ್ನು ಏನೆಂದು ಪ್ರಶ್ನಿಸಿದಳು ?
10. ಆ ಮುನಿಕುಮಾರನು ಮಹಾಶ್ವೇತೆಗೆ ನೀಡಿದ ಉತ್ತರವೇನು ?
11. ಪುಂಡರೀಕನು ಮಹಾಶ್ವೇತೆಗೆ ಏನು ಹೇಳಿದನು ?
12. ಜಪಸರ ಕೆಳಕ್ಕೆ ಬಿದ್ದಾಗ ಮಹಾಶ್ವೇತೆ ಏನು ಮಾಡಿದಳು ?

## III. ಈ ಪ್ರಶ್ನೆಗಳಿಗೆ ವಿವರವಾಗಿ ಉತ್ತರಿಸಿ.

1. ಮಹಾಶ್ವೇತೆ ತನ್ನ ವೃತ್ತಾಂತವನ್ನು ರಾಜಕುಮಾರನಲ್ಲಿ ಹೇಗೆ ನಿವೇದಿಸಿಕೊಂಡಳು ?



2. ಮಹಾಶ್ವೇತೆ ತಾಯಿಯೊಂದಿಗೆ ಸ್ನಾನಕ್ಕಾಗಿ ಅಚ್ಛೋದ ಸರೋವರಕ್ಕೆ ಹೋದಾಗ ನಡೆದ ಘಟನೆಯೇನು ?
3. ಪುಂಡರೀಕನ ವೃತ್ತಾಂತವನ್ನು ಮುನಿಕುಮಾರನು ವಿವರಿಸಿದ ಬಗೆ ಹೇಗೆ ?

## IV. ಕೆಳಗಿನವುಗಳನ್ನು ಸಂದರ್ಭ ಸಹಿತ ವಿವರಿಸಿ.

1. ನವಕುಸುಮಾಸವದೆ ಸೊರ್ಕಿದಳಿನಿಯ ತೆಱದಿಂ
2. ಎನ್ನಂತೆ ಕಣ್ಗೆಟ್ಟು ಪೇರೊಲವಿಂದಿಂತೆರ್ದೆ ಗೆಟ್ಟರಾರ್
3. ಸೋಲ್ತೆಂ ಕೂಡು ನೀನೆನ್ನೊಳ್

## V. ಭಾಷಾಭ್ಯಾಸ

**1. ಕೆಳಗಿನ ಪದಗಳನ್ನು ಬಿಡಿಸಿ ಸಂಧಿಯ ಹೆಸರನ್ನು ಬರೆಯಿರಿ.**

ಪಾಪಾಕಾರೆ, ತನ್ಮನೋಹರಿ, ಸ್ಫಟಿಕಾಕ್ಷಮಾಲೆ, ತನಗನುರೂಪ, ದೇವತಾರ್ಚನೆ, ಎರ್ದೆಗೆಟ್ಟು, ಪೇಟಲಾಗಳು, ಪೋದತ್ತಕ್ಷಮಾಲೆ

**2. ಕೆಳಗಿನವುಗಳ ವಿಗ್ರಹವಾಕ್ಯ ಬರೆದು ಸಮಾಸದ ಹೆಸರನ್ನು ಬರೆಯಿರಿ.**

ಕಣ್ಬನಿ, ಕರಪಲ್ಲವ, ಪೇರೊಲವಿಂದ

**3. ಕೆಳಗಿನವುಗಳ ವಿರುದ್ಧ ಪದಗಳನ್ನು ಬರೆಯಿರಿ.**

ನಿರ್ಭಾಗ್ಯ, ಸಫಲ, ಸುಖ

**4. ಕೆಳಗಿನವುಗಳ ತತ್ಸಮ ತದ್ಭವಗಳನ್ನು ಬರೆಯಿರಿ.**

ವನ, ವಿದ್ಯಾ, ಮೊಗ, ಕುಮಾರ, ಯೌವನ, ಮಹಾ, ಸುಖ, ಇಚ್ಚೆ

## VI. ಚಟುವಟಿಕೆ

ನಾಗವರ್ಮನ ಕರ್ಣಾಟಕ ಕಾದಂಬರಿಯನ್ನು ಪೂರ್ತಿಯಾಗಿ ಓದಿರಿ.

# ಉಪ ಪಥ್ಯ

## ಎರಡು ಸಣ್ಣ ಕಥೆಗಳು

## 1. ನಾಗರ ಬೆತ್ತ

**- ಸೇಡಿಯಾಪು ಕೃಷ್ಣಭಟ್ಟ**

ನಾನಾಗ ಸಣ್ಣ ಹುಡುಗ, ಪ್ರಾಯ ಹನ್ನೊಂದೋ, ಹನ್ನೆರಡೋ; ನಮ್ಮ ಸೋದರತ್ತೆಯ ಮನೆಗೆ ಹೋಗಿದ್ದೆ. ಅವರ ಗಂಡ-ನನ್ನ ಮಾವ-ತಕ್ಕಮಟ್ಟಿನ ಹಣಗಾರ. ಹಣಗಾರಿಕೆಗಿಂತಲೂ ಕಾರಭಾರ ಹೆಚ್ಚು. ಊರ ಗದ್ದೆ ತೋಟಗಳಲ್ಲದೆ ಒಂದು ಕಾಪಿತೋಟ, ಇನ್ನೊಂದು ಏಲಕ್ಕಿ ಮಲೆ. ಅವರ ವಾಸ ಊರಲ್ಲಿ ಆರು ತಿಂಗಳು, ಗಟ್ಟದಲ್ಲಿ ಆರು ತಿಂಗಳು-ವಿಕ್ರಮಾದಿತ್ಯನ ಹಾಗೆ. ಅವರಿಗೆ ನನ್ನ ಮೇಲೆ ತುಂಬಾ ಪ್ರೀತಿ; ನನಗೆ ಅವರಲ್ಲಿ ಬಹಳ ಸಲುಗೆ. ಸಲುಗೆ ಎಷ್ಟೆಂದರೆ - ಒಮ್ಮೊಮ್ಮೆ ಅವರು ಕುಳಿತಿದ್ದರೆ ಬಳಿಗೆ ಹೋಗಿ ಒಂದು ಕೈಯನ್ನು ಅವರ ತೊಡೆಗೊತ್ತಿ ಇನ್ನೊಂದು ಕೈಯಲ್ಲಿ ಅವರ ಕೊಂಬು ಮೀಸೆಯನ್ನು ಹುರಿಮಾಡಿ ಸುರುಳುತ್ತಿದ್ದೆ. ಆ ಬಾರಿ ನಾನು ಅವರ ಮನೆಗೆ ಹೋಗಿ ಒಂದೆರಡು ದಿನಗಳಲ್ಲಿಯೇ ಅತ್ತೆ ಮಾವಂದಿರಿಬ್ಬರೂ ಗಟ್ಟಕ್ಕೆ ಹೊರಡಬೇಕಾಗಿತ್ತು. ಬಂದ ಮೂರು ದಿನಗಳಲ್ಲಿಯೇ ಹಿಂತಿರುಗಿ ಹೋಗಬೇಕಾಯಿತಲ್ಲಾ ಎಂದು ನನಗೆ ಭಾರೀ ಶೂನ್ಯ; ಅವರಿಗೂ ಬೇಸರ. ಆಗ ಮಾವ, ‘‘ಕೃಷ್ಣಾ ನೀನು ಗಟ್ಟಕ್ಕೆ ಬರುತ್ತೀಯೋ?’’ ಎಂದು ಕೇಳಿದರು. ಪಕ್ಕನೆ ಮನಸ್ಸಿನಲ್ಲಿ ಕಣ್ಣು ತೆರೆದಂತಾಯಿತು; ‘ಹುಂ’ ಎಂದೆ. ‘‘ಅವನ ತಾಯಿ, ಅಜ್ಜ, ಎಲ್ಲ ಏನು ಹೇಳುತ್ತಾರೋ?’’ ಎಂದರು ಅತ್ತೆ. (ಬಾಲ್ಯದಲ್ಲಿಯೇ ನಾನು ತಂದೆಯನ್ನು ಕಳೆದುಕೊಂಡು ನಮ್ಮಜ್ಜನ ಮನೆಯಲ್ಲಿದ್ದೆ.) ‘‘ಛೇ! ನಾನು ಕರೆದುಕೊಂಡುಹೋದರೆ ಏನೂ ಹೇಳಲಿಕ್ಕಿಲ್ಲ. ಬರಲಿ, ಪಾಪ! ನಾನು ಅವರ ಮನೆಗೆ ಹೇಳಿ ಕಳುಹಿಸುತ್ತೇನೆ’’, ಎಂದು ಮಾವ ಹೇಳಿದೊಡನೆ ಅತ್ತೆಯ ಮಾತಿನಿಂದ ಒಸರತೊಡಗಿದ್ದ ಕಣ್ಣೀರು ಸುಖಜಲವಾಗಿ ಕಣ್ಣು ತುಂಬಿತು. ನಕ್ಕು ನಾಚಿಕೊಂಡು ಮುಖ ತಿರುಗಿಸಿ ಕುಣಿಯುತ್ತಾ ಹಾರುತ್ತಾ ತೋಟಕ್ಕೆ ಓಡಿ ಹೋದೆ.

ಅದೇ ದಿನ ರಾತ್ರಿ ಪ್ರಯಾಣ, ಬಿಳಿಯ ಜೋಡೆತ್ತಿನ ದೊಡ್ಡ ಗಾಡಿಯಲ್ಲಿ,

ಮರುದಿನ ಹಗಲು ಉಪ್ಪಿನಂಗಡಿಯಲ್ಲಿ ಮಜಲು; ಬೈಗಿನಲ್ಲಿ ಪುನಃ ಪ್ರಯಾಣಾರಂಭ. ಮೂರನೆಯ ದಿನ ಶಿರಾಡಿಯಲ್ಲಿ ಕಳೆಯಿತು. ನಾಲ್ಕನೆಯ ದಿನ ಸಕಲೇಶಪುರದ ಬಳಿಯ ಕಾಪಿತೋಟಕ್ಕೆ ಗಾಡಿ ಮುಟ್ಟಿತು. ಹೋಗಿ ಎರಡು ದಿನ ನಾನು ಮಾವನ ಬಂಗಲೆ ಬಿಟ್ಟು ಹೊರಗೆ ಕಾಲೇ ಇಡಲಿಲ್ಲ. ನಿದ್ದೆ ಮಾಡುವುದೇ ಕೆಲಸ. ಅನಂತರ ಮೆಲ್ಲಗೆ ಕಾಪಿತೋಟದ ಅಂದಚಂದಗಳನ್ನು ನೋಡುತ್ತಾ ಸುತ್ತಮುತ್ತಲಿನ ಪ್ರಕೃತಿಯ ಪರಿಚಯ ಮಾಡಿಕೊಳ್ಳತೊಡಗಿದೆ. ಗಟ್ಟಕ್ಕೆ ಬಂದುದು ನನಗೆ ಅತ್ಯಂತ ಸಂತೋಷಕರವಾಯಿತೆಂದು ಬೇರೆ ಹೇಳುವುದು ಬೇಡ. ಆ ಹೂಬಿಸಿಲಿನ -ಅಲ್ಲ, ಹೂನೆಳಲಿನ ಕಾಪಿತೋಟ! ತೊಳೆದು 'ಮಾಲೀಸು' ಮಾಡಿದ ಹಸುರು ಬಣ್ಣದ ಕುರಿ ಮಂದೆಯಂತಿದ್ದ ಮುದ್ದು ಮುದ್ದು ಕಾಪಿಗಿಡಗಳು. ಒಂದೆಡೆ ಕಿತ್ತಳೆಯ ರಾಜ್ಯ; ಮತ್ತೊಂದೆಡೆ ಪೇರಳೆಯ ಸಾಮ್ರಾಜ್ಯ! ವಿಚಿತ್ರವಾದ ಕಾಡುಹೂಗಳ, ಕಾಪಿಹೂಗಳ ಕಂಪು. ಕನಸಿನಲ್ಲಿಯೂ ಕಾಣದ ತರತರದ ಹಕ್ಕಿಗಳ ವಿವಿಧ ಮಧುರಧ್ವನಿ. ಅಲ್ಲಲ್ಲಿ ಗಂಭೀರವಾದ ಪ್ರತಿಧ್ವನಿ. ಮಹಾರಾಜನ ತಲೆಯ ಮುತ್ತಿನ ತುರಾಯಿಯಂತೆ, ಸಜೀವವಾದ ಬೆಳ್ಳಿಯ ಕೊಳವಿಯಂತೆ, ಹಾರುವ ಇಳಿಯುವ ಮಲೆನೀರ ನಿರ್ಝರ! ಅದರ ನಾದದ ಜತೆಗೆ ಜೀರುದುಂಬಿಯ 'ಝೇಂಕಾರ'. ಈ ನವೀನ-ಪುರಾತನ ಪ್ರಪಂಚದಲ್ಲಿ ಸದಾ ಹಾರುವ ಬಣ್ಣದ ಚಿಟ್ಟೆಗಳೊಡನೆ ನಾನೂ ಒಂದು ಆಗಿದ್ದೆ.

ಆ ಸುಂದರ ಸನ್ನಿವೇಶದ ಸುಖಕ್ಕೆ ಸೋದರತ್ತೆಯ ಉಪಚಾರದ ಬೆಂಬಲ. ಗಟ್ಟದ ಜೇನು, ತುಪ್ಪದ ರೊಟ್ಟಿ, ಹಾಲಿನ ಕಾಪಿ, ಕೋಸಿನ ಪಲ್ಯ, ಬಟಾಟೆ ಹುಳಿ, ಏಲಕ್ಕಿ ಹಾಕಿದ ಲಿಂಬೆಹಣ್ಣಿನ ಗಮಗಮಿಸುವ ಉಪ್ಪಿನಕಾಯಿ, ಕೇಸರಿಬಾತು, ಕಿತ್ತಳೆ ಹಣ್ಣು -ಇನ್ನೇನು ಬೇಕು? ಏನು ಬೇಕಾದರೂ ದೊರಕುತ್ತಿತ್ತು. ಆದರೆ ಇದಕ್ಕಿಂತಲೂ ಪ್ರಿಯವಾಗಿತ್ತು ಮಾವನ ಜತೆಯ ಕಾಪಿತೋಟದ ತಿರುಗಾಟ; ಪ್ರತಿದಿನವೂ ತಿರುಗಾಡುತ್ತಿದ್ದೆ. ತೋಟದಲ್ಲಿ ಕೆಲಸ ಮಾಡುತ್ತಿದ್ದ ಕೂಲಿಗಳು ಕುರಿಗಳೆಡೆಯ ಕುರುಬರಂತೆ ಕಾಣುತ್ತಿದ್ದರು. ನನ್ನ ಮಾವ ದಯಾಳು; ಅವರೊಡನೆ ಪ್ರೀತಿಯಲ್ಲಿ ಮಾತನಾಡುತ್ತಿದ್ದರು. ಅವರ ಸುಖದುಃಖಗಳನ್ನು ಆಗಾಗ ಕೇಳುತ್ತಿದ್ದರು. ಅವರೊಡನೆ ನನಗೆ ಹಲವರ ಪರಿಚಯವಾಯಿತು. ಕೆಲವರು ಗೆಳೆಯರೂ ಆದರು. ಒಬ್ಬ ಅರೆ ಮುದುಕನಂತೂ ನನಗೆ ಅತ್ಯಂತ ಪ್ರಿಯನಾದ. ಅವನ ಹೆಸರು ಲಿಂಗಯ್ಯ. ಅವನು ನಮ್ಮ ಊರಿನ, ಮನೆಯ, ಸುದ್ದಿಯೆಲ್ಲ ಕೇಳುತ್ತಿದ್ದ; ತನ್ನ ಕಥೆ ಹೇಳುತ್ತಿದ್ದ; ಲಿಂಗಯ್ಯ ಬೇಲೂರಿನ ಬಳಿಯ ಒಂದು



ಹಳ್ಳಿಯವನಂತೆ. ಅವನಿಗೆ ಮನೆಯಲ್ಲಿ ಯಾರೂ ಇಲ್ಲವಂತೆ. ಅವನ ಹೆಂಡತಿ ಅವನನ್ನು ಬಿಟ್ಟು ಓಡಿಹೋಗಿದ್ದಳಂತೆ. ಅವನು ಎಷ್ಟೋ ತೋಟಗಳಲ್ಲಿ ಕೆಲಸ ಮಾಡಿದ್ದನಂತೆ. ಆದರೆ ನನ್ನ ಮಾವನಂತಹ 'ದೊರೆ' ಬೇರೆ ಯಾರೂ ತನಗೆ ದೊರಕಲಿಲ್ಲವೆಂದು ಹೇಳುತ್ತಿದ್ದ. ಅವನು ತೋಟದಲ್ಲಿ ಕೆಲಸ ಮಾಡುವಾಗ ವಿನೋದದ ಮಾತುಗಳನ್ನು ಆಡುತ್ತಿದ್ದ. ಇದರಿಂದ ಅವನ ಬಳಿಯಲ್ಲಿ ಮಾವನೊಂದಿಗೆ ನಿಂತುಕೊಂಡು, ತೋಟವನ್ನೂ, ಕೆಲಸವನ್ನೂ ನೋಡುತ್ತಾ ಇರುವುದೆಂದರೆ ನನಗೊಂದು ಹಬ್ಬವೇ ಆಗಿತ್ತು. ಸಂಜೆ ತನ್ನ 'ಹಟ್ಟಿ'ಗೆ ಬಂದು ಊಟ ತೀರಿಸಿ, ಕಂಬಳಿ ಹಾಸಿ ಗೋಡೆಗೆ ಎರಗಿಕೊಂಡು ಹೊಗೆ ಸೇದುತ್ತಾ ಹಾಡುತ್ತಿದ್ದ. ಅವನ ದನಿ ಬಹಳ ಇನಿದಾಗಿತ್ತು. ಕತೆಗಳು-ದುಃಖಗಳು, ಸಂತೋಷಗಳು, ಪೌರುಷಗಳು, ಪ್ರೀತಿಗಳು - ಎಲ್ಲ ತುಂಬಿದುವು. ನಾನು ಅವನ ಬಳಿಗೆ ಹೋಗಿ ಕುಳಿತುಕೊಂಡು ಅದನ್ನು ಕೇಳುತ್ತಿದ್ದೆ. ಗಾಳಿ ಚಳಿ ಏರಿದಾಗ, ನನಗೆ ನಿದ್ದೆ ಬರಬಹುದೆಂದಾಗ, ಅವನು ಹಾಡು ನಿಲ್ಲಿಸಿ, ''ಚಿಕ್ಕಯ್ಯಾ, ಇನ್ನು ನಾಳೆ ಹೇಳುವ'', ಎಂದು ಹೇಳಿ ನನ್ನನ್ನು ಬಂಗಲೆಗೆ ಹೋಗಲು ಹೇಳುತ್ತಿದ್ದ.

ಹೀಗೆ ಸುಮಾರು ಒಂದು ತಿಂಗಳು ಕಳೆಯಿತು. ಒಂದು ದಿನ ನಮ್ಮ ಮಾವನಿಗೆ ಏಲಕ್ಕಿ ಮಲೆಗೆ ಹೋಗಬೇಕಾಗಿ ಬಂತು. ಅವರ ಕಾಪಿ ತೋಟದಿಂದ ಅಲ್ಲಿಗೆ ಹದಿನಾರು ಮೈಲು ದೂರವಿತ್ತು. ರಸ್ತೆಯೇನೂ ಇಲ್ಲ ; ಕಾಲುದಾರಿ. ಆದುದರಿಂದ, ನಾನು ಅವರೊಂದಿಗೆ ಹೊರಡುವ ಮನಸ್ಸು ಮಾಡಿದರೂ ಅವರಾಗಿ ಬೇಡವೆಂದರು. ಮೂರು ದಿನಗಳಲ್ಲಿ ಹಿಂತಿರುಗಿ ಬರುತ್ತೇನೆಂದರು. ಅವರ ಜೊತೆಗೆ ಲಿಂಗಯ್ಯನೂ ಅಲ್ಲಿಗೆ ಹೊರಟ. ನನಗೆ ಬಹಳ ಬಿನ್ನಗೆ. ಅವರು ಹೊರಟುಹೋದ ದಿನವಿಡೀ ಬಂಗಲೆಯಲ್ಲಿ ಸುಮ್ಮನೆ ಕುಳಿತು ನೋಡುತ್ತಾ ಇದ್ದೆ. ಸಂಜೆ ಜೋರು ಚಳಿಯಾಯಿತು. ಅತ್ತೆಯೊಡನೆ ಹೇಳಿದೆ. ಮೆಯ್ ಮುಟ್ಟಿ ನೋಡಿ, ''ಮೆಯ್ ಕಾಯುತ್ತಿದೆ'' ಎಂದರು. ಎರಡು ದಿನ ಬೋಧವಿಲ್ಲದ ಜ್ವರ ಬಂತು. ಅತ್ತೆ ನಿದ್ದೆಬಿಟ್ಟು ಚೆನ್ನಾಗಿ ಆರೈಕೆ ಮಾಡಿದರು; ಮದ್ದು ಕೊಡಿಸಿದರು. ಮೂರನೆಯ ದಿನ ಬೆವರಿಬಿಟ್ಟಿತು. ನಾಲ್ಕನೆಯ ದಿನ ಮೆಲ್ಲಗೆ ಎದ್ದು ಬಂಗಲೆಯೊಳಗೆ ಅತ್ತಿತ್ತ ತಿರುಗಾಡುವಂತಾಯಿತು. ಸಂಜೆಯಾಗುವಾಗ ಮಾವನೂ ಬಂದರು. ಜ್ವರ ಬಂದ ಆಯಾಸವೆಲ್ಲ ಥಟ್ಟನೆ ಮಾಯವಾಯಿತು. ಅಷ್ಟರಲ್ಲಿ ಲಿಂಗಯ್ಯ ಬಂದು ''ಚಿಕ್ಕಯ್ಯಾ! ನನ್ನದೊಂದು ನೆನಪಿಗೆ. ಇದಕ್ಕೆ ಬೆಳ್ಳಿ ಕಟ್ಟಿಸಿಕೊಳ್ಳಿ'' ಎಂದು ಒಂದು ಬಣ್ಣ ಬಣ್ಣದ ಸೆಳೆಬೆತ್ತವನ್ನು ನನ್ನ ಕೈಯಲ್ಲಿ ಕೊಟ್ಟ. ನನಗಾದ

ಸಂತೋಷ ಅಷ್ಟಿಷ್ಟಲ್ಲ. ಅದನ್ನು ಹಿಡಿದುಕೊಂಡು ಮನೆ ತುಂಬ ಠೀವಿಯಿಂದ ನಡೆದಾಡಿದೆ. ಅದರ ಪ್ರತಿಯೊಂದು ಮಚ್ಚೆ, ಪ್ರತಿಯೊಂದು ಗಂಟು, ಗಿಣ್ಣು- ಎಲ್ಲವನ್ನೂ ನೋಡಿ ತುಲನೆಮಾಡಿ ಮೆಚ್ಚಿ, ಅತ್ತೆಗೆ ತೋರಿಸಿ, ಮಾವನಿಗೆ ಹೇಳಿ, ಬಾರಿಬಾರಿಗೆ ಲಿಂಗಯ್ಯನ ಹೆಸರೆತ್ತಿ, ಅವನ ಬಳಿಗೆ ಹೋಗಿ, ಅದು ಎಲ್ಲಿ ಸಿಕ್ಕಿತು, ಹೇಗೆ ಸಿಕ್ಕಿತು, ಯಾರು ಕಡಿದುದು - ಮೊದಲಾದ ಎಲ್ಲಾ ಕಥೆಯನ್ನು ಕೇಳಿ ಕೇಳಿ ತಿಳಿದುಕೊಂಡೆ. ಅದು ನನ್ನ ಮಾವನ ಏಲಕ್ಕಿ ಮಲೆಯಲ್ಲಿಯೇ ಬೆಳೆದ ನಾಗರಬೆತ್ತವೆಂದು ಕೇಳಿ ಮತ್ತಷ್ಟು ಪ್ರೀತಿಗೊಂಡೆ.

ಮತ್ತೆ ನಾಲ್ಕಾರು ದಿನಗಳಲ್ಲಿ ಮಾವನ ಬಂಗಲೆಗೆ ಏಲಕ್ಕಿಯ ಚೀಲಗಳು ಹೊರೆಹೊರೆಯಾಗಿ ಬರತೊಡಗಿದವು. ಈ ಚೀಲಗಳೆಲ್ಲ ನನ್ನ ಮಾವನ 'ಬಿಳಿಗಾಡಿ'ಯನ್ನೇರಿದುವು. ಅವುಗಳ ಮಾರಾಟಕ್ಕಾಗಿ ಮಾವನೂ ಊರಿಗೆ ಬಂದು ಮಂಗಳೂರಿಗೆ ಹೋಗಬೇಕಾಗಿತ್ತು. ನಾನೂ ಊರಿಗೆ ಹೊರಡುವುದೆಂದಾಯಿತು.

ಹೊರಡುವಾಗ ನನ್ನತ್ತೆ ಮೂರು ಏಲಕ್ಕಿ ಮಾಲೆಗಳನ್ನು ತಂದು, ಒಂದನ್ನು ನನ್ನ ಕೊರಳಿಗೆ ಹಾಕಿ, ಉಳಿದುದನ್ನು ನನ್ನ ಕೈಯಲ್ಲಿ ಕೊಟ್ಟು, ''ಮನೆಗೆ ಹೋಗಿ ನಿನ್ನಕ್ಕನಿಗೊಂದು ಕೊಡು; ಅಜ್ಜನಿಗೊಂದು ಕೊಡು'' ಎಂದು ಹೇಳಿ ಮತ್ತೆ, ''ಮಾವ ಮಂಗಳೂರಿಂದ ಬರುವವರೆಗೆ ನಿನಗೆ ಇಲ್ಲೇ ಇದ್ದುಬಿಡಬಹುದಿತ್ತು'' ಎಂದು ಹೇಳುವಾಗ ಅವರ ಕಣ್ಣಲ್ಲಿ ನೀರಿನ ಒಂದು 'ಪದರು' ಹೊಳೆಯಿತು. ನನ್ನನ್ನು ಜತೆಯಲ್ಲಿರಿಸಿಕೊಂಡು ಅಷ್ಟು ದಿನ ಇದ್ದು ಈಗ ನಾನೂ ಮಾವನೂ ಇಬ್ಬರೂ ಅಗಲುವಾಗ, ಮಕ್ಕಳಿಲ್ಲದ ನನ್ನ ಅತ್ತೆಗೆ ಬಹಲ ಖೇದವಾಗಿದ್ದಿರಬೇಕು. ಆದರೂ ಇನ್ನೂ ಇಲ್ಲೇ ಇರಿಸಿಕೊಂಡರೆ ನನ್ನ ಅಜ್ಜ, ತಾಯಿ, ಬೇಸರಿಸಬಹುದೆಂದು ಗೊತ್ತಿದ್ದ ಅವರು ಒತ್ತಾಯಿಸಲಿಲ್ಲ. ಮಾವ ಹೊರಡುವುದರಿಂದ ನನಗೂ ಹೊರಡುವ ಮನಸ್ಸೇ ಇತ್ತು. ಆದರೆ ಆ ಕಾಪಿತೋಟದ ಅಂದ, ಲಿಂಗಯ್ಯನ ಗೆಳೆತನ, ಅತ್ತೆಯ ಉಪಚಾರ, ಇವೆಲ್ಲವನ್ನು ಬಿಟ್ಟು ಹೊರಡುವಾಗ ಮನಸ್ಸಿನ ಅರ್ಧಾಂಶ ಅವಿತಿತು. ಅತ್ತೆಯ ಕೈಗಳಿಂದ ಅಪ್ಪಿಸಿಕೊಂಡು ಹೇಗೂ ಗಾಡಿಯೇರಿದೆ. ಲಿಂಗಯ್ಯ ಗಾಡಿ ಹೊರಡುವಲ್ಲಿ ನಿಂತಿದ್ದ. ''ಬೆತ್ತ ಉಂಟಲ್ಲಾ ಚಿಕ್ಕಯ್ಯಾ?'' ಎಂದ. ಅದನ್ನು ಬಿಡುವುದುಂಟೆ? ಅದು ನನ್ನ ಬಳಿಯಲ್ಲಿಯೇ ಇತ್ತು. ''ಇಗೋ! ಇಲ್ಲಿದೆ'' ಎಂದು ತೆಗೆದು ತೋರಿಸಿದೆ. ಅವನಿಗೆ ನನ್ನ ಕೃತಜ್ಞತೆಯನ್ನು ಹೇಗೆ ತಿಳಿಸುವುದೆಂದು ತಿಳಿಯದಾದೆ. ಸುಮ್ಮನೆ ಅವನ ಮುಖ ನೋಡುತ್ತ ಕುಳಿತೆ. ನನ್ನ ಕಣ್ಣಲ್ಲಿ



ನೀರಿಳಿಯಿತು. ಅವನು ಬಳಿಗೆ ಬಂದು ನನ್ನ ಕಣ್ಣೊರೆಸಿ, ''ಹೋಗಿ ಬನ್ನಿ'' ಎಂದ. ಅವನ ಕಣ್ಣಲ್ಲಿಯೂ ನೀರು ತುಂಬಿದ್ದು ನನಗೆ ಕಂಡಿತು. ನಮ್ಮ ಗಾಡಿ ಹೊರಟಿತು.

ಮೂರನೆಯ ದಿನ ಗಾಡಿ ನಮ್ಮ ಮಾವನ ಊರಮನೆಗೆ ಬಂದು ಮುಟ್ಟಿತು. ಮನೆಯಲ್ಲಿ ಎರಡು ದಿನವಿದ್ದು ಮಾವ ಮಂಗಳೂರಿಗೆ ಗಾಡಿ ಕಟ್ಟಿಸಿದರು. ಅಷ್ಟರೊಳಗೆ ನನ್ನ ಬೆತ್ತಕ್ಕೆ ಕಟ್ಟಹಾಕಿಸಿಕೊಟ್ಟರು. ದೇವಯ್ಯಾಚಾರಿ ಮೇಲುತುದಿಗೆ ಬೆಳ್ಳಿಯ ಟೊಪ್ಪಿಗೆಯನ್ನೂ ಕೆಳತುದಿಗೆ ಕುಂಭಕೋಣದ ಹಿತ್ತಾಳಿಯ ಮುಚ್ಚುಕಟ್ಟನ್ನೂ ಹಾಕಿದ. ಬೆತ್ತದ ಅಂದ ಇಮ್ಮಡಿಸಿತು. ಒಂದು ಜನದ ಜತೆಕೊಟ್ಟು ಆರು ಮೈಲು ದೂರದ ನಮ್ಮಜ್ಜನ ಮನೆಗೆ ನನ್ನನ್ನು ಕಳುಹಿಸಿದರು. ಹೊರಡುವಾಗ ಗಿಳಿ ಬಣ್ಣದ ಒಂದು ಕಾಶ್ಮೀರದ ಸಕಲಾತಿಯನ್ನು ನನ್ನ ಹೆಗಲಿಗೆ ಹಾಕಿ ಬೆನ್ನು ತಟ್ಟಿ, ''ನಿನಗೆ ಹೊದೆಯಲಿಕ್ಕೆ'' ಎಂದರು. ನನ್ನ ಮುಖವರಳಿದ್ದು ನನಗೇ ಕಂಡಂತಾಯಿತು; ಕಣ್ಣೀರು ಬಂತು. ಹಾಗೆಯೇ ಒಮ್ಮೆ ಅವರ ನಗುಮೊಗವನ್ನು ನೋಡಿ, ''ಬರುತ್ತೇನೆ'' ಎಂದು ಹೇಳಿ ಬೆತ್ತ ಹಿಡಿದುಕೊಂಡು ನೆಟ್ಟಗೆ ಮನೆಗೆ ಹೊರಟೆ.

ಮನೆಗೆ ಬರುವಾಗ ಎರಡು ಗಳಿಗೆ ಹೊತ್ತು ಉಳಿದಿತ್ತು. ನಾನು ಅಷ್ಟು ದಿನ ಕಳೆದು ಬರುವಾಗ ನನ್ನನ್ನು ಕಂಡು, ತುಂಬಿದ ನಮ್ಮ ಮನೆಯವರೆಲ್ಲರೂ ನಗುನಗುತ್ತ ನನ್ನನ್ನು ಮುತ್ತುವರು, ನನ್ನ ಬೆತ್ತ ಸಕಲಾತಿ ಎಲ್ಲಾ ನೋಡಿ ಮೆಚ್ಚಿ ನಲಿಯುವರು, ಎಂದು ಭಾವಿಸಿದ್ದೆ. ಆದರೆ ಕೆಲವರೆಲ್ಲ ನನ್ನನ್ನು ಕಂಡೂ ಕಾಣದಂತೆ ತೊಲಗಿದರು! ಅಂಗಳದ ಮೂಲೆಗಲ್ಲಿದ್ದ ನನ್ನ ಅಕ್ಕ ಮಾತ್ರ ''ತಮ್ಮ ಬಂದ!'' ಎಂದು ನಗುನಗುತ್ತಾ ಬೊಬ್ಬಿಟ್ಟು ನನ್ನ ಬಳಿಗೆ ಓಡಿಬಂದಳು. ಆಗ ನಾನು ''ಇಗೋ ನೋಡು, ಮಾವ ಕೊಟ್ಟ ಸಕಲಾತಿ!'' ಎಂದು ತೋರಿಸಿದೆ. ಅವಳು ''ಆಹಾ! ಚಂದವೇ'' ಎಂದು ಹೇಳುತ್ತ ಕೈಯಲ್ಲಿ ತೆಗೆದುಕೊಂಡು ಒಳಗಿದ್ದ ತಾಯಿಗೆ ತೋರಿಸಲು ಕೊಂಡೋಡಿದಳು. ನಾನೂ ಒಳಗೆ ಹೋದೆ. ತಾಯಿ ನನ್ನನ್ನು ಕಂಡು, ''ಏನೋ ಇಷ್ಟು ದಿನ ? ಅಜ್ಜ ಸಿಟ್ಟಿನಲ್ಲಿದ್ದಾರೆ!'' ಎಂದರು. ಅವರ ಕೈಯಲ್ಲಿ ಸಕಲಾತಿ ಇತ್ತು. ಅದನ್ನು ನೋಡಿ ''ಒಳಗಿಡು'' ಎಂದು ನನ್ನಕ್ಕನ ಕೈಯಲ್ಲಿ ಹೇಳಿ ಕಣ್ಣೊರೆಸಿಕೊಂಡು, ''ಅಬ್ಬ ಹೊಗೆಯೇ!'' ಎನ್ನುತ್ತಾ ನನ್ನ ಜತೆಯಲ್ಲಿ ಬಂದ ಆಳಿಗೆ ಬಾಯಾರಿಕೆಗೆ ಕೊಡುವುದಕ್ಕಾಗಿ ಮಜ್ಜಿಗೆ ನೀರು ಮಾಡಲು ಹೋದರು. ಬೇರಾರೂ ನನ್ನನ್ನು ಮಾತಾಡಿಸಲೇ ಇಲ್ಲ!

ನಾನು ಖಿನ್ನತೆಯಿಂದಲೂ ಭೀತಿಯಿಂದಲೂ ಬಾವಿಕಟ್ಟೆಗೆ ಹೋಗಿ ಕಾಲು ತೊಳೆದುಕೊಂಡು ಬಂದು, ತಾಯಿಯ ಹತ್ತಿರ ಕೇಳಿ ಒಂದು ತುಂಡು ಬೆಲ್ಲ ತೆಗೆದುಕೊಂಡು, ನೀರು ಕುಡಿದು ಹೊರಗೆ ಬಂದು ಚಾವಡಿಯ ಒಂದು ಮೂಲೆಯಲ್ಲಿ ಕುಳಿತೆ. ಏಲಕ್ಕಿ ಮಾಲೆಯ ನೆನಪೇ ಹೋಯಿತು. ಅದು ನನ್ನ ಬಟ್ಟೆಯ ಗಂಟಿನಲ್ಲಿಯೇ ಇತ್ತು. ಕೈಯಲ್ಲಿ ಮಾತ್ರ ಬೆತ್ತವಿತ್ತು. ಅದನ್ನು ನೆಲಕ್ಕೆ ಮೆಲ್ಲನೆ ತಟ್ಟುತ್ತಾ ಇದ್ದೆ. ಮನಸ್ಸು ಎಲ್ಲಿತ್ತೋ ನನಗೇ ಗೊತ್ತಿರಲಿಲ್ಲ. ಅಷ್ಟರಲ್ಲಿ ತೋಟಕ್ಕೋ ಎಲ್ಲಿಗೋ ಹೋಗಿದ್ದ ಅಜ್ಜ ಬಂದರು. ಅವರನ್ನು ನೋಡಿ ಪಕ್ಕನೆ ಅಳುಕಿತು. ಚಾವಡಿಯೇರುವಾಗಲೇ ಅವರು ನನ್ನನ್ನು ಕಂಡರು! ''ಏನೋ ಬಂದುಬಿಟ್ಟೆ? ಅಲ್ಲಿಂದ ಹೋಗೆಂದು ಕುತ್ತಿಗೆಗೆ ಕೈಹಾಕಿ ದೂಡಿದರೋ!'' ಎಂದು ಕಣ್ಣು ಕೆಂಪು ಮಾಡಿ ಹೇಳಿದರು. ನಾನು ಮೂಲೆಗೆ ಅಂಟಿದೆ. ಹಾಗೆಯೇ ಅವರು ಮೇಲೆ ಬಂದು 'ಬಾಜಿಲ ಹಲಗೆ'ಯಲ್ಲಿ ಕುಳಿತು ವೀಳ್ಯ ಹಾಕತೊಡಗಿದರು. ಇಷ್ಟರಲ್ಲಿಯೇ ಮುಗಿದುಹೋಯಿತೆಂದು ಭಾವಿಸಿ ನಾನು ಸ್ವಲ್ಪ ಸಮಾಧಾನ ಪಟ್ಟುಕೊಂಡು, ಅನ್ಯಮನಸ್ಕನಾಗಿ ತಲೆ ಬಗ್ಗಿಸಿದಲ್ಲಿಂದಲೇ ಬೆತ್ತದತುದಿಯಲ್ಲಿ ನೆಲವನ್ನು ಪುನಃ ತಟ್ಟತೊಡಗಿದೆ. ಅಜ್ಜ ನನ್ನಕಡೆಗೆ ನೋಡಿದರು! ''ಅದೆಲ್ಲಿಂದಲೋ ಬೆತ್ತ? ಇಲ್ಲಿ ತಾ!'' ಎಂದರು. ನನ್ನ ಎದೆಯೊಳಗಿನ ಡಬಡಬ ನನಗೆ ಸರಿಯಾಗಿ ಕೇಳುತ್ತಿತ್ತು. ಬೆತ್ತವನ್ನು ತಂದು ಅವರ ಕೈಯಲ್ಲಿ ಕೊಟ್ಟೆ. ಅದನ್ನವರು ಅಮೂಲಾಗ್ರವಾಗಿ ನೋಡಿದರು; ಅದರ ಕಟ್ಟುಗಳನ್ನು ಮುಟ್ಟಿದರು; ನೆಟ್ಟಗೆ ಹಿಡಿದು, ಅಡ್ಡ ಹಿಡಿದು, ನೋಟ ಹಿಡಿದು ಪರೀಕ್ಷಿಸಿದರು. ಹಿಡಿದು ಅಲುಗಿಸಿದರು. ಕೊನೆಗೆ ನನ್ನ ನೋಡಿ ''ಸೋಮಾರಿ! ಮನೆಯಲ್ಲಿ ಕುಳಿತು ಓದಿ ಬರೆದು ಟವಣೆ ಕಲಿತು ಮರ್ಯಾದೆಯಲ್ಲಿ ಎರಡು ಕೂಳು ಸಂಪಾದಿಸುವ ಆಲೋಚನೆ ಬಿಟ್ಟು, ಇನ್ನು ಕೋಲುಬೆತ್ತ ಹಿಡಿದುಕೋ! ಪನ್ನೆ ತಿದ್ದು! ಪೋಲಿಯಾಗಿ ಅಂಕ-ಆಯನ, ಆಟ-ನೋಟ ಎಲ್ಲುಂಟೆಂದು ತಿರುಗಾಡು! ಮತ್ತೆ ಗಟ್ಟ ಹತ್ತಿ ತೋಟದಲ್ಲಿ ಅಡಿಗೆ ಕೆಲಸಕ್ಕೆ ಸೇರು! ನಿನ್ನ ಹಣೆಬರಹ ನೋಡು ನೀ ನೋಡು!'' ಎಂದು ಹೇಳಿ ಬೆತ್ತದ ಎರಡು ಕೊನೆಗಳಲ್ಲಿಯೂ ಹಿಡಿದು ಬಾಗಿಸಿದರು. ನನ್ನ ಜೀವವೇ ಮುರಿಯುವಂತಾಯಿತು. ''ಬೇಡಜ್ಜಾ, ಬೇಡಜ್ಜಾ!'' ಎಂದೆ. ಅವರು ಕಣ್ಣು ಕೆರಳಿಸಿ ನೋಡಿದರು! ಅಳುತ್ತಾ ಹಿಂದೆ ಸರಿದೆ. ಆದರೆ ಅದು ಸಪೂರವಾದ ಸೆಳೆಯಾಗಿದ್ದುದರಿಂದ ಮುರಿಯದೆ ಬಳುಕಿತು. ಅಜ್ಜ ಹಲ್ಲು ಕಚ್ಚಿ ಅದನ್ನು ಇನ್ನೊಂದು ಮೆಯ್ಗೆ ಥಟ್ಟನೆ ಬಗ್ಗಿಸಿದರು; ಅದು ಮುರಿಯಿತು. ನನ್ನ ಲಿಂಗಯ್ಯನ ಪ್ರೀತಿಯ ತಂತು ತುಂಡಾಯಿತು! ಅದರ



ಕಟ್ಟುಗಳನ್ನವರು 'ಎಲೆಗುದ್ದಾಣ'ದ ಕಲ್ಲಿನಲ್ಲಿ ಗುದ್ದಿ ತೆಗೆದರು; ತಮ್ಮ ಜನಿವಾರದ ಪೆಟ್ಟಿಗೆಯಲ್ಲಿ ಹಾಕಿ ಮೇಲೆ 'ಉತ್ತರ'ದಲ್ಲಿಟ್ಟರು. ನನ್ನ ಮುದ್ದು ಬೆತ್ತದ ಮುರಕುಗಳನ್ನು ಕೊಂಡುಹೋಗಿ, ಅಂಗಳದ ಮೂಲೆಯಲ್ಲಿ ಹೊಗೆಯುರಿಯುತ್ತಿದ್ದ ಸುಡುಮಣ್ಣಿನ ರಾಶಿಗೆ ಎಸೆದುಬಿಟ್ಟರು!

ನಾನು ಆ ದಿನ ಊಟ ಮಾಡಲಿಲ್ಲ. ನನ್ನನ್ನು ಊಟಕ್ಕೆಬ್ಬಿಸಲು ತಾಯಿ ಬಂದರು. ನಾನು ಎಚ್ಚರವಿದ್ದರೂ ಏಳಲಿಲ್ಲ. ''ನಿನಗೆ ಹಸಿವಿಲ್ಲ'' ಎಂದು ಹೇಳಿ ಒಳಗೆ ಹೋದರು. ಅವರೂ ಅಂದು ಊಟ ಮಾಡಿದರೋ ಇಲ್ಲವೋ ನನಗೆ ಗೊತ್ತಿಲ್ಲ. ನಾನು ಬೆಳಿಗ್ಗೆ ಎದ್ದು ಮುಖ ತೊಳೆದು ವಿಭೂತಿ ಹಾಕಿ ದೇವರಿಗೆ ನಮಸ್ಕರಿಸಿ, ಭಾಗವತದ ಓಲೆ ಪುಸ್ತಕವನ್ನು ತೆಗೆದುಕೊಂಡು ಓದುವುದಕ್ಕೆ ಕುಳಿತೆ. ಕಣ್ಣಿನಿಂದ ನೀರು ಇಳಿಯುತ್ತಲೇ ಇದ್ದುದರಿಂದ ಓದಲಾಗಲಿಲ್ಲ. ಪುಸ್ತಕವನ್ನು ಕಟ್ಟಿಟ್ಟೆ. ಎದ್ದು ಬಯಿಲಿಗೆ ನಡೆದೆ. ನಾಲ್ಕು ಗಳಿಗೆ ಹೊತ್ತಾಗುವಾಗ ಆಯಾಸದಲ್ಲಿ ಏನೂ ಕೂಡದು. ಮನೆಗೆ ಬಂದೆ. ಮಿಂದು ಜಪ ಮಾಡಿ ಒಳಗೆ ಹೋದೆ. ಎಲೆಯಿಟ್ಟುಕೊಂಡು ಕುಳಿತೆ. ತಾಯಿ ಇಷ್ಟು ಗಂಜಿ ಹಾಕಿದರು. ಮಾತಾಡದೆ ಉಂಡು ಕೈ ತೊಳೆದು ಬಂದು ತಲೆ ನೋಯುತ್ತದೆ ಎಂದು ಹೇಳಿ, ಒಂದು ಹುಲ್ಲ ಚಾಪೆಯನ್ನೂ ತಲೆದಿಂಬನ್ನೂ ತೆಗೆದುಕೊಂಡು, ಚಾವಡಿಯ ಮೂಲೆಯಲ್ಲಿ ಗೋಡೆಗೆ ಮೋರೆ ಹಾಕಿ ಮಲಗಿದೆ. ನಿದ್ದೆ ಬರುವಂತಿಲ್ಲ.

ಅಜ್ಜ ಆ ದಿನ ಮನೆಯಲ್ಲಿರಲಿಲ್ಲ. ಒಂದು ಪಾಲು ಪಂಚಾಯಿತಿಕೆಯ ನಿಮಿತ್ತ ನನ್ನ ತಾಯಿಯ ಸೋದರ ಮಾವನ ಮನೆಗೆ ಹೋಗಿದ್ದರು. ಆದುದರಿಂದ ಮಲಗಿದ್ದಲ್ಲಿಂದ ಎಬ್ಬಿಸಿ ಬರೆಯಲು ಕುಳ್ಳಿರಿಸುವವರು ಯಾರೂ ಇರಲಿಲ್ಲ. ನನ್ನ ಮಾವಂದಿರು ನನ್ನ ಗೊಡವೆಗೆ ಬರುವವರೇ ಅಲ್ಲ. ಆದುದರಿಂದ ಸುಮ್ಮನೆ ಮಲಗಿದ್ದೆ.

ನಮ್ಮಜ್ಜನ ಮನೆಯಲ್ಲಿ ತುಂಬ ಜನರಿದ್ದರು; ದೊಡ್ಡ ಕುಟುಂಬ. ಒಬ್ಬರು ಹಣ್ಣು ಮುದುಕಿಯೂ ಇದ್ದರು. ನನ್ನ ಅಜ್ಜನಿಗೆ ಅವರು ದೊಡ್ಡಮ್ಮ. ಎಂದರೆ ತಂದೆಯ ಅಣ್ಣನ ಹೆಂಡತಿ. ಅವರಿಗೆ ಮಕ್ಕಳಿಲ್ಲ; ಬಾಲ ವಿಧವೆ. ಎಲ್ಲರ ಮೇಲೂ ಅವರಿಗೆ ಕರುಣೆ, ಪ್ರೀತಿ. ಹೆಚ್ಚಿನ ಸಮಯವೆಲ್ಲ ಒಳಗೇ ಇದ್ದುಕೊಂಡು, ಏನೋ ಧ್ಯಾನಿಸುತ್ತ ಕಾಲಕಳೆಯುವರು. ಅವರಿಗೆ ಬಹಳ ದಾಕ್ಷಿಣ್ಯ, ಬಹಳ ಅಂಜಿಕೆ. ನಮ್ಮ

ಅಜ್ಜ ಅವರಿಗೆ ಮಗನಾಗಬೇಕಾಗಿದ್ದರೂ, ಅವರ ಇದಿರಿನಲ್ಲಿ ನಿಂತು ಮಾತಾಡಲು ಸಹ ಹೆದರುತ್ತಿದ್ದರು. ನಮ್ಮ ಅಜ್ಜನಿಗೆ ಸಿಟ್ಟು ಬಹಳ; ಅವರನ್ನು ಕಂಡೊಡನೆ ಅಲ್ಲಿ ನಿಲ್ಲದೆ ಒಳಗೆ ಹೋಗುತ್ತಿದ್ದರು. ಅಂದು ಅಜ್ಜ ಮನೆಯಲ್ಲಿಲ್ಲದಿದ್ದುದರಿಂದ ಅವರು ಚಾವಡಿಗೆ ಬಂದು ಕುಳಿತು, ಬೆನ್ನು ಸವರಿ ಎದೆ ಮುಟ್ಟಿ ನೋಡಿ, ''ಮಗೂ! ನಿನಗೇನಪ್ಪಾ? ಅತ್ತೆಯ ಮನೆಯಲ್ಲಿ ಊಟಗೀಟ ಸರಿಯಾಗಲಿಲ್ಲವೋ? ಗಟ್ಟಕ್ಕೆ ಹೋಗಿ ಬಂದೆಯಂತೆ. ಅದು ಜ್ವರದ ಊರು. ಏನಾಯಿತು ಮಗೂ?'' ಎಂದರು. ನಾನು ಉತ್ತರ ಕೊಡಲೇ ಇಲ್ಲ. ಅವರು ಮತ್ತೂ ಮತ್ತೂ ಕೇಳಿದರು. ಅವರ ದನಿ ನನ್ನ ಮನಸ್ಸು ಅಲುಗಿಸಿತು. ಕೊನೆಗೆ ಬಿಕ್ಕುತ್ತಾ ಬಿಕ್ಕುತ್ತಾ ನನ್ನ ದುಃಖದ ಕಾರಣವನ್ನು ಹೇಳಿದೆ: ಮುರಿದುಹೋದ ನನ್ನ ಮುದ್ದು ಬೆತ್ತದ ಕತೆಯನ್ನೆಲ್ಲ ಹೇಳಿದೆ.

ದೇವಜ್ಜಿ – ಇದು ನಾವು ಅವರನ್ನು ಕರೆಯುವ ಹೆಸರು. ಅವರ ಹೆಸರು ದೇವಕಿ ಎಂದು–ನನ್ನೊಡನೆ ಕಣ್ಣೀರು ಸುರಿಸುತ್ತಾ ಸುದ್ದಿಯನ್ನೆಲ್ಲ ಕೇಳಿದರು. ಸೆರಗಿನಲ್ಲಿ ಒರಸಿದಷ್ಟು ಅವರ ಕಣ್ಣಲ್ಲಿ ನೀರಿಳಿಯುತ್ತಲೇ ಇತ್ತು. ಕೊನೆಕೊನೆಗೆ ಅವರಿಗೆ ದುಃಖವನ್ನು ತಡೆಯಲಾಗಲಿಲ್ಲ. ಅವರು ಚೆನ್ನಾಗಿ –ಆದರೆ ಮೆಲ್ಲಗೆ, ಅತ್ತರು. ನಾನು ಅತ್ತೆ. ಇಬ್ಬರೂ ಮುಖವನ್ನೊರೆಸಿಕೊಂಡೆವು. ಅಜ್ಜಿ ಸ್ವಲ್ಪ ತಡೆದು, ''ಮಗೂ, ಆ ಬೆತ್ತ ಮುರಿದದ್ದು ಒಳ್ಳೆಯದೇ ಆಯಿತಪ್ಪ. ಅದು ಎಲ್ಲಿದ್ದ ನಾಗರ ಬೆತ್ತವೋ! ನಾಗರ ಬೆತ್ತವೆಂದರೆ ಜೀವಕ್ಕೆ ಸಂಚಕಾರ, ಮಗೂ! ನಿನಗದು ಬೇಡವೇ ಬೇಡ, ಅಳಬೇಡ, ಅಳಬೇಡ ಮಗೂ, ಅಳಬೇಡ''! ಎಂದು ಹೇಳುತ್ತಾ ಅವರೇ ಗೊಳೋ ಎಂದು ಅತ್ತರು. ಚಾವಡಿಯಲ್ಲಿ ಬೇರಾರೂ ಇರಲಿಲ್ಲ.

ನನಗೊಂದು ಶಂಕೆ ಹುಟ್ಟಿತು; ನಾಗರಬೆತ್ತವು ಜೀವಕ್ಕೆ ಸಂಚಕಾರವಾಗುವುದು ಹೇಗೆ ? ಹೋ! 'ನಾಗ' ಎಂದರೆ ಹಾವು! ಹಾವಿಗಿರುವಂತೆ ಬೆತ್ತದಲ್ಲಿ ವಿಷವಿದೆಯೇ ? ಇರುವ ಹಾಗಿಲ್ಲ. ಇದ್ದರೆ ಲಿಂಗಯ್ಯ ನನಗದನ್ನು ಕೊಡಲಿಕ್ಕಿಲ್ಲ; ಕೊಡಲು ಮಾವ ಬಿಡಲಿಕ್ಕೂ ಇಲ್ಲ. ಹಾಗಾದರೆ ಅದಕ್ಕೆ ಹಾವಿನ ಹೆಸರೇಕೆ ? ನಾಗರಹಾವಿನಂತೆ ಬಿಳಿಹಳದಿ ಬಣ್ಣವಿದ್ದು, ಹಾವಿನ ಕೊರಳಲ್ಲಿರುವಂತೆ ಅಲ್ಲಲ್ಲಿ ಮಚ್ಚೆಯಿರುವುದರಿಂದ ನಾಗರಬೆತ್ತವೆಂದು ಹೇಳುವುದಾಗಿರಬೇಕು. ಹಾಗಾದರೆ ಅದು ಅಪಾಯಕರವೆಂದು ದೇವಜ್ಜಿ ಹೇಳಲು ಕಾರಣವೇನು ? ತಿಳಿಯಬೇಕಾಯಿತು.

ಸ್ವಲ್ಪ ಹೊತ್ತಿನಲ್ಲಿ ದೇವಜ್ಜಿ ಅಳುವನ್ನು ನಿಲ್ಲಿಸಿ ಕಣ್ಣು ಮೋರೆಯೊರಸಿಕೊಂಡರು. ಮೆಲ್ಲಗೆ ಅಂಗಳಕ್ಕಿಳಿದು ಅತ್ತಿತ್ತ ನೋಡಿ ಬಾವಿಕಟ್ಟೆಗೆ ಹೋಗಿ ಮುಖಕ್ಕೆ ನೀರು ಹಾಕಿ



ಸೆರಗಿನಲ್ಲಿ ಒರಸಿಕೊಂಡು ಬಂದು ತಿರುಗಿ ನನ್ನ ಬಳಿಯಲ್ಲಿ ಕುಳಿತು ಮಳೆ ಬಂದು ಬಿಟ್ಟ ಬಾನಿನಂತೆ ಅವರ ನಿರಿಮೋರೆ ನಿರ್ಮಲವಾಯಿತು. ಆಗ ನಾನು, ''ದೇವಜ್ಜಿ! ನಾಗರಬೆತ್ತದಲ್ಲಿ ವಿಷವುಂಟೋ ? ಅದರಲ್ಲಿ ಏನು ಅಪಾಯ ?'' ಎಂದು ಕೇಳಿದೆ. ಅವರ ತುಟಿಗಳು ನಡುಗಿದವು, ತಿರುಪಿದವು. ಆದರೂ ಅವರು ಅಳುವನ್ನು ಒತ್ತಿಕೊಂಡು ಬಳಿಯಲ್ಲಿ ಕುಳಿತ ನನ್ನ ತಲೆಯನ್ನು ಸವರುತ್ತ ಹೇಳತೊಡಗಿದರು.

''ಮಗು, ಏನು ಹೇಳಲಿ! ನೀನು ಹಸುಳೆ. ನಿನಗೇನು ಗೊತ್ತು ? ನಿನ್ನ ತಾಯಿಗಾದರೆ ನೀವಾದರೂ ಇದ್ದೀರಿ. ನನಗೆ ಯಾರಿದ್ದಾರೆ ಮಗೂ ? ನನ್ನ ಭಾಗ್ಯವನ್ನು ಮುಕ್ಕಿ ತಿಂದದ್ದು ಒಂದು ನಾಗರಬೆತ್ತ ಮಗೂ!'' ಎಂದು ಹೇಳಿ 'ಸೂ' ಎಂದು ನಿಟ್ಟುಸಿರಿನಲ್ಲಿ ನಿಲ್ಲಿಸಿದರು.

ದೇವಜ್ಜಿ ನಮ್ಮಜ್ಜನ ದೊಡ್ಡಮ್ಮ, ಪಾಪದ ಮುದುಕಿ. ಅಷ್ಟು, ಮುದುಕಿಯಾದರೂ ನಮ್ಮೊಡನೆ ಹುಳಿಸೆಬಿತ್ತು ಅಗಿಯುವ ಗೆಳತಿ; ಹೆಣ್ಣು ಮಕ್ಕಳಿಗೆಲ್ಲ ಹೂಕಟ್ಟಿಕೊಡುವ ಪ್ರಿಯಸಖಿ; ನಮ್ಮ ಭಾಮಜ್ಜಿಯಂತೆ (ಎಂದರೆ ನಮ್ಮಜ್ಜನ ಅಕ್ಕ) ಅಲ್ಲಿ ಮೈಲಿಗೆ ಇಲ್ಲಿ ಮುಸುರೆ ಎಂದು ಬೊಬ್ಬಿಡುತ್ತಾ, ಮಕ್ಕಳನ್ನು ಬೈದು ಬೆದರಿಸುವ ಮಡಿಮರುಳೆಯಲ್ಲ ; ಮಕ್ಕಳೊಡನೆ ಒಬ್ಬಿಬ್ಬರ ಮೇಲೆ ಮೋಹವಿಟ್ಟುಕೊಂಡು ಅವರ ಕಡೆ ಹಿಡಿದು ಬೇರೆ ಮಕ್ಕಳೊಡನೆ ಕಚ್ಚಾಡುವ ಜಗಳಗಂಟಿಯಲ್ಲ ; ಅವಳ ಮುಖ ಹಾಗೆ, ಅವಳ ಮೂಗು ಹೀಗೆ, ಇವಳಿಗೆ ಮತ್ಸರ ಹೆಚ್ಚು, ಅವಳಿಗೆ ಕೋಪ ಹೆಚ್ಚು, ಇವಳು ಬರೀ ಹೆಡ್ಡೆ, ಅವಳಾದರೆ ಬುದ್ಧಿವಂತೆ ಎಂದು ಮೊದಲಾಗಿ ಕೆದಕುತ್ತಲೇ ಇರುವ 'ಕೊಕ್ಕೆ' ಅಲ್ಲ – ಎಂದಷ್ಟೇ ಅವರ ಕುರಿತು ಆವರೆಗೆ ನನಗೆ ಗೊತ್ತಿದ್ದುದು. ಅವರ ಎದೆಯೊಳಗಿನ ಮರುಕದ ಅರಿವು ನನಗೆ ಇರಲೇ ಇಲ್ಲ. ನಾಗರಬೆತ್ತವು ನನ್ನೆದೆಯನ್ನು ಕರಗಿಸಿದ್ದು ಮಾತ್ರವಾದರೆ, ಅವರೆದೆಯನ್ನು ಸೀಳಿಯೇ ಹಾಕಿತ್ತು! ಆ ಬಗೆಯನ್ನು ಅವರು ನನಗೆ ಹೀಗೆ ಹೇಳಿದರು.

''ಮಗೂ, ನಿನಗೆ ಗೊತ್ತಿಲ್ಲ. ನನಗೆ ಹಾಗೆಲ್ಲ ಹೇಳುವ ಅಭ್ಯಾಸವೂ ಇಲ್ಲ. ಯಾರ ಹತ್ತಿರ ಹೇಳಿ ಏನು ಮಾಡುವುದು ? ಸುಮ್ಮನೆ ಕರಕರೆಯನ್ನು ಕರೆದಂತಾಗುವುದು. ಆದರೆ ಈ ಹೊತ್ತೇನೊ ನಿನ್ನೊಡನೆ ಹೇಳಬೇಕೆಂದು ತೋರುತ್ತದೆ; ಹೇಳಿ ಬಿಡುತ್ತೇನೆ, ಕೇಳು: ನನ್ನಪ್ಪನ ಮನೆ ಈವೂರಲ್ಲಿ ಅಲ್ಲ; ದೂರ. ಈಗ ಇಲ್ಲಿಂದ ಎರಡು ದಿನಗಳ ದಾರಿ, ಗಟ್ಟದ ಬುಡ. ಸಂಪಾಜೆ ಎಂದು ಕೇಳಿದ್ದೀಯಾ? ಅಲ್ಲಿಗೆ ಹತ್ತಿರ. ಈಗ ಅಲ್ಲಿ ಯಾರೆಲ್ಲಾ ಇದ್ದಾರೋ ನನಗೆ ಗೊತ್ತೇ

ಇಲ್ಲ. ಮತ್ತೆ ನನಗೆ ಅಲ್ಲಿಗೆ ಹೋಗಬೇಕೆಂದು ತೋರಲೇ ಇಲ್ಲ. ನನ್ನಪ್ಪ ಇರುವಾಗ ವರ್ಷಕ್ಕೊಮ್ಮೆ ಇಲ್ಲಿಗೆ ಬಂದು ನೋಡಿ ಹೋಗುತ್ತಿದ್ದರು. ನನ್ನನ್ನು ''ಮನೆಗೊಮ್ಮೆ ಬಾ ಮಗಳೇ''! ಎಂದು ಕರೆಯುತ್ತಿದ್ದರು. ಆದರೆ ''ಆ ದಾರಿಯನ್ನೇ ನೋಡಲು ನನ್ನಿಂದಾಗದು'' ಎಂದು ಹೇಳಿ ನಾನು ಬರುವುದಿಲ್ಲವೆನ್ನುತ್ತಿದ್ದೆ. ಇಬ್ಬರೂ ಕಣ್ಣೀರು ಹಾಕುತ್ತಿದ್ದೆವು. ಇಲ್ಲಿಗೆ ಬಂದರೆ ಅವರಿಗೆ ನನ್ನನ್ನು ಬಿಟ್ಟು ಹೊರಡಲು ಕಾಲೇ ಬರುತ್ತಿರಲಿಲ್ಲ. ಆದರೆ ''ಎಷ್ಟು ದಿನ ಇನ್ನೊಬ್ಬರ ಮನೆಯಲ್ಲಿ ಕುಳಿತುಕೊಳ್ಳುವುದು? ನೀವು ಹೋಗಿ'' ಎಂದು ನಾನೇ ಅವರನ್ನು ಕಳುಹಿಸುತ್ತಿದ್ದೆ. ಸಂದು ಕಡಿದ ಮೇಲೆ ಸಂಬಂಧಿಕರಾದರೂ 'ಬೇಕಾದವ'ರಲ್ಲ. ಮತ್ತೆ ಅವರಿಗೆ ಒಂದು ವಾತರೋಗ ಹಿಡಿಯಿತು. ನಡೆಯಲಿಕ್ಕೆ ಕೂಡದು. ಅವರು ಸಾಯುವುದಕ್ಕೆ ಎರಡು ವರ್ಷಗಳ ಮೊದಲೊಮ್ಮೆ ಗಾಡಿಯಲ್ಲಿ ಬಂದು ಮೂರು ದಿನವಿದ್ದು, ''ನಾನಿನ್ನು ಬರುವುದಿಲ್ಲ ಮಗಳೇ''! ಎಂದು ಹೇಳಿ ಹೋಗಿದ್ದರು. ಆಗ ನಾನು ಅವರ ಕಾಲು ಹಿಡಿದಿದ್ದೇ ಕೊನೆಯದು. ಅವರೆಲ್ಲ ಹೋದರು. ನಾನು ಯಾವಾಗ ಹೋಗುವುದೋ!'' ಎಂದು ಹೇಳಿ ದೇವಜ್ಜಿ ಸೆರಗಿನಲ್ಲಿ ಕಣ್ಣೊರೆಸಿಕೊಂಡರು; ನಾನೂ ಅದರಲ್ಲೇ ಉಜ್ಜಿಕೊಂಡೆ. ಆ ಮೇಲೆ ಅವರು ಮೆಲ್ಲಗೆ ಮುಂದುವರಿಸಿದರು –

''ನನಗೆ ಹುಟ್ಟುವಾಗಲೇ ಅದೃಷ್ಟವಿಲ್ಲ. ನಾನು ಒಂದು ವರ್ಷದ ಮಗುವಾಗಿದ್ದಾಗಲೇ ನನ್ನಮ್ಮ ತೀರಿಹೋದರಂತೆ. ಅವರ ಮೋರೆಯ ನೆನಪಿಟ್ಟುಕೊಳ್ಳುವುದಕ್ಕೂ ನನಗೆ ಹಣೆ ಬರಹವಿರಲಿಲ್ಲ. ನನಗೆ ಒಡಹುಟ್ಟೂ ಇಲ್ಲ; ನಾನೇ ಚೊಚ್ಚಲ ಮಗುವಂತೆ. ನನ್ನಪ್ಪನೇ ನನ್ನನ್ನು ಸಾಕಿದ್ದು. ನನಗೆ ಐದು ವರ್ಷವಾಗುವಾಗ ನನ್ನಪ್ಪ ಬೇರೆ ಮದುವೆಯಾದರು. ಚಿಕ್ಕಮ್ಮನಿಗೆ ಮೇಲೆ ಮೇಲೆ ಹೆರಿಗೆ. ಎಲ್ಲ ಗಂಡು ಮಕ್ಕಳೇ. ನನಗೆ ತಮ್ಮಂದಿರೆಂದರೆ ಬಹು ಪ್ರೀತಿ. ಈಗ ಅವರೆಲ್ಲ ಹೇಗಿದ್ದಾರೋ ಎಲ್ಲಿದ್ದಾರೋ ನನಗೆ ಗೊತ್ತಿಲ್ಲ. ಇಲ್ಲಿಗೆ ಅವರು ಬಂದದ್ದಿಲ್ಲ. ನಾನಂತೂ ಹೋದದ್ದೇ ಇಲ್ಲ. ನನ್ನ ಚಿಕ್ಕಮ್ಮನೂ ಒಳ್ಳೆಯ ಹೆಂಗಸು. ನನ್ನಪ್ಪ ತೀರಿಹೋದ ಮರುವರ್ಷವೇ ಅವಳೂ ತೀರಿ ಹೋದಳೆಂದು, ಅದೇ ವರ್ಷ ಕಾವೇರಿ ಯಾತ್ರೆಗೆ ಹೋಗಿ ಬಂದ ಗುಂಡಿಮನೆ ವೆಂಕಟರಮಣಯ್ಯನವರು ಹೇಳಿದ್ದರು. ಮತ್ತೆ ಅಲ್ಲಿಯ ಸುದ್ದಿಯೇ ಇಲ್ಲ. ಯಾರ ಸುದ್ದಿ ನನಗೆ ಯಾಕೆ ?''

''ನನ್ನ ಮದುವೆಗಾಗಿ ನನ್ನಪ್ಪ ಪಟ್ಟ, ಕಷ್ಟ ಅಷ್ಟಿಷ್ಟಲ್ಲ. ನನ್ನದಕ್ಕೆ ಕೂಡಿಬರುವ ಜಾತಕ ಆ ಸೀಮೆಯಲ್ಲಿಯೇ ಸಿಕ್ಕಲಿಲ್ಲವಂತೆ. ಮತ್ತೆ ಅವರು ಹುಡುಕಿ ಈ ಸೀಮೆಗೆ



ಬಂದರಂತೆ. 'ಈ ಮನೆಯವರ' ಒಬ್ಬರ ಜಾತಕ ಕೂಡಿ ಬಂತಂತೆ. ಎಂಥಾ ಕೂಡಿ ಬಂದದ್ದೋ! ನಿಜವಾಗಿ ಕೂಡಿ ಬಂದರೆ ಹೀಗಾಗಬೇಕೆ ? ಪಾಪ, ನನ್ನಪ್ಪನಿಗೆ ಹೊರೆಯೊಂದು ಇಳಿದಂತಾಯಿತು; ನನಗೆ ಹದಿಮೂರು ವರ್ಷ ತುಂಬಿತ್ತು. ಮದುವೆಯಾಗಿ ಮರುದಿಬ್ಬಣ ಬಂದದ್ದು 'ದೋಲಿ'ಯಲ್ಲಿ. ನನಗೆ ಆ ಪ್ರಾಯದಲ್ಲಿ ಹದಿನಾರು ಹರದಾರಿ ನಡೆಯಲಿಕ್ಕಾಗಲಿಲ್ಲವೆಂದು ಅಪ್ಪ ಬಲ್ಲಾಳರ ಮನೆಯಿಂದ ದೊಡ್ಡ ದೋಲಿ ತರಿಸಿದರು. ಆ ಸಮಯದಲ್ಲಿ ಈವೂರಿಗೆ ರಸ್ತೆ ಇದ್ದಿಲ್ಲ. ಆದುದರಿಂದ ಗಾಡಿ ಮಾಡುವಂತಿರಲಿಲ್ಲ. ಚಿಕ್ಕಮ್ಮ ಬರಲಿಲ್ಲ. ಅವಳು ಬಾಣಂತಿ. ಎಲ್ಲರೂ ನಡೆದದ್ದೇ. ನಾನು 'ಅವರೂ' ಮಾತ್ರ ದೋಲಿಯಲ್ಲಿ. ಅವರನ್ನು ನಾನು ಸರಿಯಾಗಿ ನೋಡಿದ್ದು ದೋಲಿಯಲ್ಲಿಯೇ. ಅರಸಿನಬಿಳಿ ಮೆಯ್‌ಬಣ್ಣ ; ನುಣುನುಣುಪು ಕೈಬೆರಳು, ಮೋರೆಯಲ್ಲಿ ಯಾವಾಗಲೂ ನಗೆಯೇ. ಉದ್ದತಲೆಗೂದಲು; ಜುಟ್ಟು ಕಟ್ಟಿದರೆ ಎರಡು ಕೈತುಂಬ. ಸೂ! ಏನಾದರೇನು! ನನಗೆ ಹಣೆಬರಹ ಬೇಡವೋ ?''

ಸ್ವಲ್ಪ ಹೊತ್ತು ದೃಷ್ಟಿಯನ್ನು ತಗ್ಗಿಸಿ ಏನೋ ಧ್ಯಾನಿಸಿ ಅನಂತರ ಮುಂದೆ ಹೇಳಿದರು:

''ಗೃಹಪ್ರವೇಶವಾಗಿ ಅಪ್ಪನ ಮನೆಗೆ ನಾವಿಬ್ಬರೂ ಹೋದ ಮೇಲೆ 'ಅವರು' ಅಲ್ಲಿದ್ದುದು ಎರಡೇ ದಿನ. ಇಲ್ಲಿ ಅವರಜ್ಜನ ಶ್ರಾದ್ಧವಿದ್ದುದರಿಂದ ಕೂಡಲೇ ಬರಬೇಕೆಂದು ಮಾವನವರು ಹೇಳಿದ್ದರು. ಹಿರಿಯ ಮಗನಲ್ಲವೋ? ಹಾಗೆ ಅವರು ಬಂದ ಮೇಲೆ ಮತ್ತೆ ಆರು ತಿಂಗಳು ನನ್ನನ್ನು ಕರೆದುಕೊಂಡು ಹೋಗಲು ಇಲ್ಲಿಂದ ಯಾರೂ ಬರಲಿಲ್ಲ. ಸಣ್ಣವಳು, ನಡೆಯಲಿಕ್ಕಾಗಲಿಕ್ಕಿಲ್ಲ ಎಂದಿರಬಹುದು. ನನ್ನತ್ತೆಯವರಿಗೆ ಸೊಸೆಯಂದಿರ ಮೇಲೆ ಅತಿ ಕರುಣೆ. ನನ್ನಪ್ಪನ ಮನೆಯಲ್ಲಿ ನವರಾತ್ರಿ ಭಾರಿ ಗದ್ದಲ; ಒಂಬತ್ತು ದಿನ ಮಹಾಪೂಜೆ. ಎಂಥಾ ಮಂಡಲ! ಎಷ್ಟು ಬಣ್ಣ ! ಎಷ್ಟಾರತಿ! ಎಂಥ ಮಂತ್ರಘೋಷ! ದಶಮಿ ದಿನ ಸಮಾರಾಧನೆಗೆ ಎಷ್ಟು ಬಗೆ ಪರಮಾನ್ನ! ಎಷ್ಟು ಬಗೆ ಕಜ್ಜಾಯ! ಈ ಪೂಜೆಗೆ ನನ್ನಪ್ಪ ಅಳಿಯನಿಗೆ ಕರೆ ಕಳುಹಿಸಿದರು. ಒಂದು ಕಾಗದ ಕೊಟ್ಟು, ಎರಡಾಳುಗಳನ್ನು ಇಲ್ಲಿಗೆ ಕಳುಹಿಸಿದರು. ಯಾವಾಗ ಬರುವರೆಂದು ನಾನು ಅಲ್ಲಿ ದಾರಿ ನೋಡುತ್ತಲೇ ಇದ್ದೆ. ಐದಾರು ದಿನಗಳಲ್ಲಿ ಬಂದರು. ಅವರು ಬಂದು ಮನೆಮೆಟ್ಟಿಲು ಹತ್ತಿದ್ದು ಈಗಲೂ ನನ್ನ ಕಣ್ಣಿನಲ್ಲಿದೆ. ತಲೆಗೆ ಗದ್ದೆಮಡಿಪಟ್ಟೆ, ಎಲೆವಸ್ತ್ರ, ಹೆಗಲಿಗೆ ನನ್ನಪ್ಪ ಮದುವೆಗೆ

ಮಧ್ಯಮ ಪುರುಷ - ನೀನು, ನೀವು

ಉತ್ತಮ ಪುರುಷ - ನಾನು, ನಾವು

**ಪ್ರಶ್ನಾರ್ಥಕ ಸರ್ವನಾಮಗಳು :** ಯಾವುದು, ಏನು, ಯಾರು, ಯಾವನು ಇತ್ಯಾದಿ.

**ಆತ್ಮಾರ್ಥಕ ಸರ್ವನಾಮಗಳು :** ತಾನು, ತಾವು, ತನ್ನ ಇತ್ಯಾದಿ.

## ವಿಭಕ್ತಿ ಪ್ರತ್ಯಯಗಳು

ಸ್ವತಂತ್ರವಾಗಿ ಅರ್ಥವಿಲ್ಲದೆ, ನಾಮ ಪ್ರಕೃತಿಗಳ ಮುಂದೆ ಸೇರಿ ಬೇರೆ ಬೇರೆ ಅರ್ಥವನ್ನುಂಟುಮಾಡುವ ಉ, ಅನ್ನು, ಇಂದ, ಗೆ ಮುಂತಾದ ಪ್ರತ್ಯಯಗಳಿಗೆ ವಿಭಕ್ತಿ ಪ್ರತ್ಯಯಗಳೆನ್ನುವರು. ಕ್ರಿಯಾಪದಗಳೊಂದಿಗೆ ನಾಮಪದಗಳ ಸಂಬಂಧವನ್ನು ತಿಳಿಸುವ ಕರ್ತೃ, ಕರ್ಮ, ಕರಣ, ಸಂಪ್ರದಾನ, ಅಪಾದಾನ, ಸಂಬಂಧ ಮತ್ತು ಅಧಿ ಕರಣಗಳು ಕಾರಕಾರ್ಥಗಳೆನಿಸುತ್ತವೆ. ಕಾರಕಾರ್ಥಗಳನ್ನು ವಿಭಜಿಸಿ ಹೇಳುವ ಪ್ರತ್ಯಯಗಳೇ ವಿಭಕ್ತಿ ಪ್ರತ್ಯಯಗಳು.

| ವಿಭಕ್ತಿಗಳು | ವಿಭಕ್ತಿ ಪ್ರತ್ಯಯಗಳು | ಕಾರಕಾರ್ಥ | ಏಕವಚನ | ಬಹುವಚನ |
|---|---|---|---|---|
| ಪ್ರಥಮಾ | (ಉ) | ಕರ್ತೃ | ಹುಡುಗನು | ಹುಡುಗರು |
| ದ್ವಿತೀಯಾ | ಅನ್ನು | ಕರ್ಮ | ಹುಡುಗನನ್ನು | ಹುಡುಗರನ್ನು |
| ತೃತೀಯಾ | ಇಂದ | ಕರಣ | ಹುಡುಗನಿಂದ | ಹುಡುಗರಿಂದ |
| ಚತುರ್ಥೀ | ಗೆ, ಇಗೆ, ಕ್ಕೆ | ಸಂಪ್ರದಾನ | ಹುಡುಗನಿಗೆ | ಹುಡುಗರಿಗೆ |
| ಪಂಚಮೀ | ಇಂದ, ದೆಸೆಯಿಂದ | ಅಪಾದಾನ | ಹುಡುಗನಿಂದ | ಹುಡುಗರಿಂದ |
| ಷಷ್ಠೀ | ಅ | ಸಂಬಂಧ | ಹುಡುಗನ | ಹುಡುಗರ |
| ಸಪ್ತಮೀ | ಅಲ್ಲಿ, ಒಳಗೆ | ಅಧಿಕರಣ | ಹುಡುಗನಲ್ಲಿ | ಹುಡುಗರಲ್ಲಿ |

(ಸೂಚನೆ: ತೃತೀಯಾ ವಿಭಕ್ತಿ ಪ್ರತ್ಯಯವೇ ಪಂಚಮೀ ವಿಭಕ್ತಿಯ ಕೆಲಸವನ್ನು ಮಾಡುವುದರಿಂದ ತೃತೀಯಾ ವಿಭಕ್ತಿಯ ಪ್ರತ್ಯಯ ಇಂದ ವನ್ನೇ ಪಂಚಮಿಗೂ



ಉಪಯೋಗಿಸಲಾಗುತ್ತದೆ)

## ಕೃದಂತ

ಧಾತುಗಳಿಗೆ ಕೃತ್ ಪ್ರತ್ಯಯಗಳು ಸೇರಿ ಕೃದಂತಗಳೆನಿಸುವುವು. ಇದಕ್ಕೆ ಕೃನ್ನಾಮಗಳೆಂದು ಹೆಸರು. ಇವುಗಳಲ್ಲಿ ಮೂರು ವಿಧಗಳಿವೆ : ಕೃದಂತನಾಮ, ಕೃದಂತ ಭಾವನಾಮ, ಕೃದಂತಾವ್ಯಯ.

ಉದಾ:

| ಕೃದಂತ ನಾಮ | ಕೃದಂತಭಾವ ನಾಮ | ಕೃದಂತಾವ್ಯಯ |
|---|---|---|
| ಮಾಡಿದ | ಮಾಟ | ಮಾಡಿ |
| ನಡೆಯುವ | ನಡೆತ | ನಡೆದು |
| ತಿನ್ನುವ | ತಿನ್ನುವಿಕೆ | ತಿಂದು |

**ತದ್ಧಿತಾಂತ :** ನಾಮ ಪದಗಳ ಮೇಲೆ ಹಲವಾರು ಅರ್ಥಗಳಲ್ಲಿ ಗಾರ, ಕಾರ, ಇಗ, ಅರಿ, ವಂತ ಮುಂತಾದ ತದ್ಧಿತ ಪ್ರತ್ಯಯಗಳು ಸೇರಿ ತದ್ಧಿತಾಂತಗಳೆನಿಸುವುವು. ತದ್ಧಿತಾಂತಗಳಲ್ಲಿ ಮೂರು ವಿಧಗಳಿವೆ.

ಉದಾ :

| ತದ್ಧಿತಾಂತ ನಾಮ | ತದ್ಧಿತಾಂತಭಾವ ನಾಮ | ತದ್ಧಿತಾಂತಾವ್ಯಯ |
|---|---|---|
| ಮೋಸಗಾರ | ಸಿರಿತನ | ಮುಂದೆ |
| ಮಾಲೆಕಾರ | ಬಡತನ | ತನಕ |
| ನೇಕಾರ | ಬಂಜೆತನ | |

# ಕ್ರಿಯಾಪದ

ಕರ್ತೃ ಮಾಡುವ ಕೆಲಸವನ್ನು ತಿಳಿಸುವ ಪದಗಳಿಗೆ ಕ್ರಿಯಾ ಪದಗಳೆಂದು ಹೆಸರು.

ಕ್ರಿಯಾ ಧಾತುವಿಗೆ ಆಖ್ಯಾತ ಪ್ರತ್ಯಯಗಳು ಸೇರಿ ಕ್ರಿಯಾಪದಗಳಾಗುವುವು.

**ಧಾತು :** ಕ್ರಿಯಾರ್ಥವನ್ನು ಕೊಡುವ ಪ್ರತ್ಯಯರಹಿತವಾದ ಮೂಲ ಕ್ರಿಯಾ ರೂಪಕ್ಕೆ ಧಾತು ಎನ್ನುವರು.

ಉದಾ: ಮಾಡು, ತಿನ್ನು, ಹೋಗು, ಬಾ

ಧಾತುಗಳಲ್ಲಿ ಎರಡು ವಿಧ : ಸಕರ್ಮಕ ಮತ್ತು ಅಕರ್ಮಕ ಧಾತುಗಳು.

ಕರ್ಮಪದವನ್ನು ಅಪೇಕ್ಷಿಸುವ ಧಾತುಗಳೆಲ್ಲ ಸಕರ್ಮಕ ಧಾತುಗಳು.

ಉದಾ: ಕುಡಿ, ಓದು, ಸೇರು ಇತ್ಯಾದಿ.

ಸಕರ್ಮಕ ಧಾತುಗಳನ್ನು ಬಳಸಿದ ವಾಕ್ಯಕ್ಕೆ ಉದಾಹರಣೆ

| **ಕರ್ತೃ** | **ಕರ್ಮ** | **ಕ್ರಿಯೆ** |
|---|---|---|
| ಮಗು | ಹಾಲನ್ನು | ಕುಡಿಯಿತು |
| ಹುಡುಗನು | ಪುಸ್ತಕವನ್ನು | ಓದಿದನು |

ಕರ್ಮಪದದ ಅಪೇಕ್ಷೆಯಿಲ್ಲದ ಧಾತುಗಳನ್ನು ಅಕರ್ಮಕ ಧಾತುಗಳೆನ್ನುವರು.

ಉದಾ: ಮಲಗು, ಓಡು, ಬದುಕು ಇತ್ಯಾದಿ.

ಅಕರ್ಮಕ ಧಾತುವನ್ನು ಬಳಸಿದ ವಾಕ್ಯಕ್ಕೆ ಉದಾಹರಣೆ

ಮಗು ಮಲಗಿತು

ಹುಡುಗ ಓಡಿದನು

ಅವನು ಬದುಕಿದನು



**ಕಾಲ ಸೂಚಕ ಪ್ರತ್ಯಯ :** ಧಾತುವಿನ ಮುಂದೆ ಸೇರುವ ಪ್ರತ್ಯಯಗಳಿಗೆ ಆಖ್ಯಾತ ಪ್ರತ್ಯಯಗಳೆಂದು ಹೆಸರು. ಧಾತುವಿಗೂ ಆಖ್ಯಾತ ಪ್ರತ್ಯಯಕ್ಕೂ ಮಧ್ಯೆ ಕಾಲವನ್ನು ಸೂಚಿಸಲು ಸೇರುವ ಪ್ರತ್ಯಯಗಳಿಗೆ ಕಾಲಸೂಚಕ ಅಥವಾ ವಿಕರಣ ಪ್ರತ್ಯಯಗಳೆಂದು ಹೆಸರು. ಕ್ರಿಯಾ ಧಾತುಗಳಿಗೆ ವರ್ತಮಾನ, ಭೂತ, ಭವಿಷ್ಯತ್ ಕಾಲಗಳನ್ನು ಸೂಚಿಸುವ ಉತ್ತ, ದ, ವ ಎಂಬ ಕಾಲ ಸೂಚಕ ಪ್ರತ್ಯಯಗಳು ಸೇರುತ್ತವೆ.

ಉದಾ :

ಧಾತು + ಕಾಲಸೂಚಕ ಪ್ರತ್ಯಯ + ಪುರುಷವಾಚಕ ಪ್ರತ್ಯಯ = ಕ್ರಿಯಾಪದ

ಹೋಗು + ಉತ್ತ + ಆನೆ = ಹೋಗುತ್ತಾನೆ (ವರ್ತಮಾನ ಕಾಲ)

ಹೋಗು + ದ + ಅನು = ಹೋದನು (ಭೂತಕಾಲ)

ಹೋಗು + ವ + ಅನು = ಹೋಗುವನು (ಭವಿಷ್ಯತ್ ಕಾಲ)

ಕ್ರಿಯಾ ಪದಗಳಲ್ಲಿ ಮೂರು ವಿಧಗಳಿವೆ.

ವಿಧ್ಯರ್ಥಕ, ನಿಷೇಧಾರ್ಥಕ ಮತ್ತು ಸಂಭಾವನಾರ್ಥಕ.

**ವಿಧ್ಯರ್ಥಕ ಕ್ರಿಯಾಪದಗಳು :** ಆಶೀರ್ವಾದ, ಅಪ್ಪಣೆ, ವಿಜ್ಞಾಪನೆ, ಆಜ್ಞೆ, ಪ್ರಾರ್ಥನೆ ಮುಂತಾದ ಅರ್ಥಗಳನ್ನು ತೋರುವಾಗ ಧಾತುಗಳಿಗೆ ಆಖ್ಯಾತ ಪ್ರತ್ಯಯಗಳು ಸೇರಿ ವಿಧ್ಯರ್ಥಕ ಕ್ರಿಯಾ ಪದಗಳೆನಿಸುವುವು. ಇಲ್ಲಿ ಯಾವ ಕಾಲಸೂಚಕ ಪ್ರತ್ಯಯವೂ ಸೇರುವುದಿಲ್ಲ.

ಉದಾ : ಮಾಡಲಿ, ನೋಡಲಿ, ಮಾಡಿರಿ, ಮಾಡೋಣ ಇತ್ಯಾದಿ.

**ನಿಷೇಧಾರ್ಥಕ ಕ್ರಿಯಾಪದಗಳು :** ಕ್ರಿಯೆಯು ನಡೆಯುವುದಿಲ್ಲ ಎಂಬ ಅರ್ಥ ತೋರಿದಾಗ ಧಾತುಗಳ ಮೇಲೆ ಆಖ್ಯಾತ ಪ್ರತ್ಯಯಗಳು ಸೇರಿ ನಿಷೇಧಾರ್ಥಕ ಕ್ರಿಯಾಪದಗಳೆನಿಸುವುವು.

ಉದಾ : ತಿನ್ನನು, ಬರೆಯನು, ಮಾಡೆನು, ಮಾಡೆವು, ಮಾಡರು ಇತ್ಯಾದಿ.

**ಸಂಭಾವನಾರ್ಥಕ ಕ್ರಿಯಾಪದ :** ಕ್ರಿಯೆಯ ನಡೆಯುವಿಕೆಯಲ್ಲಿ ಸಂಶಯ ಅಥವಾ ಊಹೆ ತೋರುವಲ್ಲಿ ಧಾತುಗಳ ಮೇಲೆ ಆಖ್ಯಾತ ಪ್ರತ್ಯಯಗಳು ಸೇರಿ ಸಂಭಾವನಾರ್ಥಕ ಕ್ರಿಯಾಪದಗಳೆನಿಸುವುವು.

ಉದಾ: ಹೋದಾನು, ಬಂದಾಳು, ನಡೆದಾರು, ನಡೆದೀರಿ, ನಡೆದೇನು ಇತ್ಯಾದಿ.

## ಕರ್ತರಿ - ಕರ್ಮಣಿ ಪ್ರಯೋಗಗಳು

**ಕರ್ತರಿ ಪ್ರಯೋಗ :** ವಾಕ್ಯದಲ್ಲಿ ಕರ್ತೃ ಮತ್ತು ಕರ್ಮಪದಗಳ ವ್ಯವಸ್ಥಿತ ಕ್ರಮ ತೋರುತ್ತದೆ. ಕರ್ತೃ ಪದವನ್ನು ಅನುಸರಿಸಿ ಕ್ರಿಯಾಪದವು ಪ್ರಯೋಗಿಸಲ್ಪಟ್ಟಲ್ಲಿ ಅದು ಕರ್ತರಿ ಪ್ರಯೋಗವಾಗುವುದು. ಕರ್ತರಿ ಪ್ರಯೋಗದಲ್ಲಿ ಕರ್ತೃಪದವು ಪ್ರಥಮಾ ವಿಭಕ್ತಿಯಲ್ಲಿಯೂ ಕರ್ಮ ಪದವು ದ್ವಿತೀಯಾ ವಿಭಕ್ತಿಯಲ್ಲಿಯೂ ಇರುತ್ತವೆ.

ಉದಾ : ಕವಿಯು ಕಾವ್ಯವನ್ನು ಬರೆಯುತ್ತಾನೆ.

ಶಂಕರನು ಕೆಲಸವನ್ನು ಮಾಡಿದನು.

ತಂದೆಯು ಮಗುವನ್ನು ರಕ್ಷಿಸುತ್ತಾನೆ.

**ಕರ್ಮಣಿ ಪ್ರಯೋಗ :** ಸಕರ್ಮಕ ಧಾತುಗಳ ಮೇಲೆ 'ಅಲ್ಪಡು' ಪ್ರತ್ಯಯವು ಸೇರಿದ ಬಳಿಕ ಕಾಲ ಸೂಚಕ ಪ್ರತ್ಯಯವೂ, ಆಖ್ಯಾತ ಪ್ರತ್ಯಯಗಳೂ ಸೇರಿ ಕರ್ಮಣಿ ಪ್ರಯೋಗವಾಗುತ್ತದೆ. ಹೀಗೆ ಕ್ರಿಯಾ ಪದವು ಕರ್ಮಪದದ ಲಿಂಗ, ವಚನ, ಪುರುಷಗಳನ್ನು ಅನುಸರಿಸಿದ್ದರೆ ಅದಕ್ಕೆ ಕರ್ಮ ಪ್ರಯೋಗವೆಂದು ಹೆಸರು.

ಉದಾ : ಮಕ್ಕಳಿಂದ ಪುಸ್ತಕ ಓದಲ್ಪಟ್ಟಿತು.

ಮನುಷ್ಯನಿಂದ ಚಂದ್ರನು ಕಾಣಲ್ಪಟ್ಟನು.

ಸೀತೆಯಿಂದ ಕತೆಯು ಬರೆಯಲ್ಪಟ್ಟಿತು.

ಕರ್ಮಣಿ ಪ್ರಯೋಗದಲ್ಲಿ ಕರ್ತೃಪದವು ತೃತೀಯಾ ವಿಭಕ್ತಿಯಲ್ಲಿಯೂ ಕರ್ಮಪದವು ಪ್ರಥಮಾ ವಿಭಕ್ತಿಯಲ್ಲಿಯೂ ಇರುತ್ತವೆ. ಧಾತುವಿಗೂ ಆಖ್ಯಾತ



ಪ್ರತ್ಯಯಕ್ಕೂ ಮಧ್ಯೆ 'ಅಲ್ಪಡು' ಎಂಬುದು ಸೇರುತ್ತದೆ.

ಕರ್ತರಿ ಪ್ರಯೋಗದ ವಾಕ್ಯವನ್ನು ಕರ್ಮಣಿ ಪ್ರಯೋಗದ ವಾಕ್ಯವನ್ನಾಗಿ ಬದಲಿಸುವ ಕ್ರಮ.

| **ಕರ್ತರಿ ಪ್ರಯೋಗ** | **ಕರ್ಮಣಿ ಪ್ರಯೋಗ** |
|---|---|
| ಶಂಕರನು ಊರನ್ನು ನೋಡಿದನು | ಶಂಕರನಿಂದ ಊರು ನೋಡಲ್ಪಟ್ಟಿತು |
| ತಾಯಿಯು ಹಾಲನ್ನು ಕೊಡುವಳು | ತಾಯಿಯಿಂದ ಹಾಲು ಕೊಡಲ್ಪಡುವುದು |
| ಅಣ್ಣನು ನನ್ನನ್ನು ಕರೆದನು | ಅಣ್ಣನಿಂದ ನಾನು ಕರೆಯಲ್ಪಟ್ಟೆನು |

## ಸಮಾಸ

ಎರಡು ಅಥವಾ ಅನೇಕ ಪದಗಳು ಅರ್ಥಕ್ಕೆ ಅನುಸಾರವಾಗಿ ಸೇರಿ ಒಂದು ಪದವಾಗುವುದಕ್ಕೆ ಸಮಾಸವೆಂದು ಹೆಸರು. ಸಮಾಸದಲ್ಲಿ ಬರುವ ಮೊದಲನೆಯ ಪದವನ್ನು ಪೂರ್ವಪದವೆಂದೂ ಎರಡನೆಯ ಪದವನ್ನು ಉತ್ತರ ಪದವೆಂದೂ ಕರೆಯುತ್ತಾರೆ. ಸಮಾಸಗಳನ್ನು ಒಟ್ಟುಗೂಡಿಸುವಾಗ ಅವುಗಳ ಮಧ್ಯದಲ್ಲಿರುವ ವಿಭಕ್ತಿಗಳು ಲೋಪವಾಗುವುವು. ಸಮಾಸದಲ್ಲಿ ಸೇರಿರುವ ಪದಗಳನ್ನು ಅರ್ಥವಾಗುವಂತೆ ಬಿಡಿಸಿ ಹೇಳುವುದಕ್ಕೆ ವಿಗ್ರಹ ವಾಕ್ಯವೆಂದು ಹೆಸರು.

ಪೂರ್ವಪದ + ಉತ್ತರ ಪದ = ಸಮಸ್ತ ಪದ

ಉದಾ : ಮಳೆಯ + ಕಾಲ = ಮಳೆಗಾಲ

ಕಲ್ಲಿನ + ಮಂಟಪ = ಕಲ್ಲುಮಂಟಪ

ಹಗಲಿನಲ್ಲಿ + ಕನಸು = ಹಗಲುಗನಸು

**ಕರ್ಮಧಾರಯ ಸಮಾಸ :** ಪೂರ್ವೋತ್ತರ ಪದಗಳು ಲಿಂಗ, ವಚನ, ವಿಭಕ್ತಿಗಳಿಂದ ಸಮಾನವಾಗಿದ್ದು, ವಿಶೇಷಣ, ವಿಶೇಷ್ಯ ಸಂಬಂಧದಿಂದ ಕೂಡಿ ಆಗುವ ಸಮಾಸಕ್ಕೆ ಕರ್ಮಧಾರಯ ಸಮಾಸ ಎಂದು ಹೆಸರು. ಇದರಲ್ಲಿ ಉತ್ತರ ಪದದ

ಅರ್ಥ ಮುಖ್ಯವಾಗಿರುತ್ತದೆ.

ಉದಾ : ಹೊಸದು + ಕನ್ನಡ = ಹೊಸಗನ್ನಡ

ಹಿರಿದು + ಬಾಗಿಲು = ಹೆಬ್ಬಾಗಿಲು

ಚಿಕ್ಕದು + ಮಗು = ಚಿಕ್ಕಮಗು

**ಅಂಶಿ ಸಮಾಸ :** ಪೂರ್ವೋತ್ತರ ಪದಗಳು ಅಂಶಾಂಶಿಭಾವ ಸಂಬಂಧದಿಂದ ಸೇರಿ ಪೂರ್ವ ಪದದ ಅರ್ಥವು ಮುಖ್ಯವಾಗಿ ಉಳ್ಳ ಸಮಾಸಕ್ಕೆ ಅಂಶಿ ಸಮಾಸ ಎಂದು ಹೆಸರು.

ಉದಾ : ಕೈಯ + ಅಡಿ = ಅಂಗೈ

ತುಟಿಯ + ಕೆಳಗು = ಕೆಳದುಟಿ

ಕಾಲ + ಹಿಂದು = ಹಿಂಗಾಲು

**ದ್ವಿಗು ಸಮಾಸ :** ಪೂರ್ವ ಪದವು ಸಂಖ್ಯಾವಾಚಕವಾಗಿರುವ ಸಮಾಸಕ್ಕೆ ದ್ವಿಗು ಸಮಾಸ ಎಂದು ಹೆಸರು.

ಉದಾ : ಒಂದು + ಕಟ್ಟು = ಒಗ್ಗಟ್ಟು

ಎರಡು + ಮಡಿ = ಇಮ್ಮಡಿ

ಮೂರು + ಪುರಿ = ಮುಪ್ಪುರಿ

**ದ್ವಂದ್ವ ಸಮಾಸ :** ಎರಡು ಅಥವಾ ಅನೇಕ ನಾಮಪದಗಳು ಸೇರಿ ಎಲ್ಲ ಪದಗಳೂ ಪ್ರಧಾನವಾಗುಳ್ಳ ಸಮಾಸಕ್ಕೆ ದ್ವಂದ್ವ ಸಮಾಸ ಎಂದು ಹೆಸರು.

ಉದಾ : ಕಸವೂ + ಕಡ್ಡಿಯೂ = ಕಸಕಡ್ಡಿಗಳು

ಕೆರೆಯೂ + ಕಟ್ಟೆಯೂ + ಭಾವಿಯೂ = ಕೆರೆಕಟ್ಟೆಭಾವಿಗಳು

**ತತ್ಪುರುಷ ಸಮಾಸ :** ಸಮಾಸದಲ್ಲಿ ಉತ್ತರ ಪದದ ಅರ್ಥವು ಮುಖ್ಯವಾಗಿ ತೋರುವ ಸಮಾಸಕ್ಕೆ ತತ್ಪುರುಷ ಸಮಾಸವೆಂದು ಹೆಸರು. ಈ



ಸಮಾಸದಲ್ಲಿ ಯಾವ ವಿಭಕ್ತಿಗೆ ಲೋಪ ಬರುವುದೋ ಆ ವಿಭಕ್ತಿಯ ಹೆಸರು ಸಮಾಸಕ್ಕೆ ಬರುವುದು. ತತ್ಪುರುಷ ಸಮಾಸದಲ್ಲಿ ದ್ವಿತೀಯಾ ತತ್ಪುರುಷ, ತೃತೀಯಾ ತತ್ಪುರುಷ, ಚತುರ್ಥೀ ತತ್ಪುರುಷ, ಪಂಚಮೀ ತತ್ಪುರುಷ, ಷಷ್ಠೀ ತತ್ಪುರುಷ ಹಾಗೂ ಸಪ್ತಮೀ ತತ್ಪುರುಷ ಎಂದು ಆರು ಭೇದಗಳಿವೆ.

ಉದಾ : ಹಣ್ಣನ್ನು ಮಾರುವವನು =ಹಣ್ಣು ಮಾರುವವನು (ದ್ವಿತೀಯಾ)

ವಯಸ್ಸಿನಿಂದ ವೃದ್ಧ = ವಯೋವೃದ್ಧ (ತೃತೀಯಾ)

ಭೂತಗಳಿಗೆ ತೃಪ್ತಿ = ಭೂತತೃಪ್ತಿ (ಚತುರ್ಥೀ)

ಚೋರನ ದೆಸೆಯಿಂದ ಭಯ = ಚೋರಭಯ (ಪಂಚಮೀ)

ಎಲೆಯ ಮನೆ = ಎಲೆಮನೆ (ಷಷ್ಠೀ)

ವನದಲ್ಲಿ ವಾಸ = ವನವಾಸ (ಸಪ್ತಮೀ)

**ಬಹುವ್ರೀಹಿ ಸಮಾಸ :** ಸಮಾಸದಲ್ಲಿ ಸೇರಿರುವ ಪೂರ್ವಪದ ಉತ್ತರ ಪದಗಳಲ್ಲಿ ಯಾವುದರ ಅರ್ಥವೂ ಮುಖ್ಯವಾಗಿರದೆ ಅನ್ಯ ಪದದ ಅರ್ಥವು ಮುಖ್ಯವಾಗಿದ್ದರೆ ಅದಕ್ಕೆ ಬಹುವ್ರೀಹಿ ಸಮಾಸವೆಂದು ಹೆಸರು.

ಉದಾ : ಮೂರು ಕಣ್ಣುಗಳು ಯಾರಿಗೆ ಇವೆಯೋ ಅವನು = ಮುಕ್ಕಣ್ಣ

ಕಮಲದಂಥ ಮುಖವು ಯಾರಿಗೆ ಇದೆಯೋ ಅವಳು = ಕಮಲಮುಖಿ

**ಕ್ರಿಯಾ ಸಮಾಸ :** ಪೂರ್ವಪದವು ನಾಮಪದವಾಗಿದ್ದು ಉತ್ತರ ಪದವು ಕ್ರಿಯಾರೂಪವಾಗಿದ್ದರೆ ಕ್ರಿಯಾ ಸಮಾಸವಾಗುವುದು.

ಉದಾ : ಮೈಯನ್ನು + ತಡವು = ಮೈದಡವು

ಕಣ್ಣನ್ನು + ತೆರೆದ = ಕಣ್ದೆರೆದ

**ಗಮಕ ಸಮಾಸ :** ಪೂರ್ವಪದವು ಸರ್ವನಾಮ ಅಥವಾ ಕೃದಂತವಾಗಿದ್ದು ಉತ್ತರ ಪದವು ನಾಮಪದವಾಗಿದ್ದರೆ ಗಮಕ ಸಮಾಸವಾಗುವುದು.

ಉದಾ : ಅವನು + ಹುಡುಗ = ಆ ಹುಡುಗ

ಅದು + ಕಲ್ಲು = ಆ ಕಲ್ಲು

ಮಾಡಿದುದು + ಅಡಿಗೆ = ಮಾಡಿದಡಿಗೆ

ಸಿಡಿಯುವುದು + ಮದ್ದು = ಸಿಡಿಮದ್ದು

ಹುರಿದ + ಕಡಲೆ = ಹುರಿಗಡಲೆ

## ವಾಕ್ಯ ಪ್ರಭೇದಗಳು

ವಾಕ್ಯಗಳಲ್ಲಿ ಸರಳ ವಾಕ್ಯ, ಸಂಯುಕ್ತ ವಾಕ್ಯ ಮತ್ತು ಸಂಕೀರ್ಣ ವಾಕ್ಯ ಎಂದು ಮೂರು ಪ್ರಭೇದಗಳಿವೆ.

**ಸರಳ ವಾಕ್ಯ :** ಒಂದು ಪೂರ್ಣ ಕ್ರಿಯಾಪದವನ್ನುಳ್ಳ ಸ್ವತಂತ್ರ ವಾಕ್ಯಕ್ಕೆ ಸರಳ ವಾಕ್ಯ ಎಂದು ಹೆಸರು.

ಉದಾ : ರಾಮನು ಶಾಲೆಗೆ ಹೋದನು.

ಸೀತೆಯು ಪಾಠವನ್ನು ಓದಿದಳು.

**ಸಂಯುಕ್ತ ವಾಕ್ಯ :** ಸ್ವತಂತ್ರವಾಗಿ ನಿಲ್ಲ ಬಲ್ಲ ಎರಡು ಅಥವಾ ಅನೇಕ ಉಪವಾಕ್ಯಗಳು ಸೇರಿ ಒಂದು ವಾಕ್ಯವಾಗಿದ್ದರೆ ಅದಕ್ಕೆ ಸಂಯುಕ್ತ ವಾಕ್ಯ ಎಂದು ಹೆಸರು.

ಉದಾ : ರಾಮನು ವೇಗವಾಗಿ ಹೋಗಿ ಚೆಂಡನ್ನು ಎಸೆದನು.

ಕೃಷ್ಣನು ಕಂಸನ ಎದೆಯ ಮೇಲೆ ಕುಳಿತು ದೇಹವನ್ನು ಸೀಳಿದನು.

**ಸಂಕೀರ್ಣ ವಾಕ್ಯ :** ಪ್ರಧಾನ ವಾಕ್ಯವೊಂದಕ್ಕೆ ಒಂದು ಅಥವಾ ಅನೇಕ ಸರಳ ವಾಕ್ಯಗಳು ಅಧೀನವಾಗಿ ಸೇರಿದ್ದರೆ ಅದಕ್ಕೆ ಸಂಕೀರ್ಣ ವಾಕ್ಯ ಎಂದು ಹೆಸರು.

ಉದಾ : ನನ್ನ ಗೆಳೆಯನು ಪ್ರತಿದಿನವೂ ಎದ್ದು ಸ್ನಾನ ಮಾಡಿ ದೇವಾಲಯಕ್ಕೆ ಹೋಗುವನು.



ಶಾಂತಿಯು ಸಂಜೆ ಶಾಲೆಯಿಂದ ಹೊರಟು ನಮ್ಮ ಮನೆಗೆ ಬಂದು ಅನಂತರ ಸಮಾರಂಭದಲ್ಲಿ ಪಾಲ್ಗೊಳ್ಳುವಳು.

## ಛಂದಸ್ಸು

ಭಾಷೆಯನ್ನು ಸರಿಯಾಗಿ ತಿಳಿದುಕೊಳ್ಳಬೇಕಾದರೆ ವ್ಯಾಕರಣದಂತೆ ಛಂದಸ್ಸಿನ ಅನುಭವವನ್ನು ಮಾಡಿಕೊಳ್ಳುವುದು ಅಗತ್ಯವಾಗಿದೆ. 'ಛಂದಸ್ಸು' ಎಂದರೆ ಪದ್ಯದ ನಿಯಮವನ್ನು ತಿಳಿಸುವ ಶಾಸ್ತ್ರ. ವ್ಯಾಕರಣವು ಗದ್ಯ-ಪದ್ಯಗಳೆರಡರ ನಿಯಮವನ್ನೂ ತಿಳಿಸುವುದು. ಛಂದಸ್ಸು ಪದ್ಯಗಳ ನಿಯಮವನ್ನು ಮಾತ್ರ ತಿಳಿಸುವುದು. ಮಹತ್ತಾದ ವಿಷಯಗಳನ್ನು ಸಂಗ್ರಹಿಸಿ ಹೇಳಲಿಕ್ಕೂ ರಸವತ್ತಾದ ಅಂಶಗಳನ್ನು ಮನೋಹರವಾಗಿ ಹೇಳಲಿಕ್ಕೂ ನೆನಪಿನಲ್ಲಿಟ್ಟುಕೊಳ್ಳಲಿಕ್ಕೂ ಪದ್ಯವು ಗದ್ಯಕ್ಕಿಂತ ಸುಲಭ. ಆದುದರಿಂದ ಹಳಗನ್ನಡ ಮತ್ತು ನಡುಗನ್ನಡ ಕಾವ್ಯಗಳಲ್ಲಿ ಗದ್ಯಕ್ಕಿಂತ ಪದ್ಯವೇ ಅಧಿಕ. ವ್ಯಾಕರಣ, ಛಂದಸ್ಸು, ಅಲಂಕಾರಾದಿಗಳನ್ನು ತಿಳಿಸುವ ಗ್ರಂಥಗಳು ಹಿಂದಿನ ಕಾಲದಲ್ಲಿ ಪದ್ಯದಲ್ಲಿಯೇ ಬರೆಯಲ್ಪಟ್ಟಿವೆ. ಆದುದರಿಂದ ಹಿಂದಿನ ಪದ್ಯಗಳನ್ನು ಸರಿಯಾಗಿ ತಿಳಿದುಕೊಳ್ಳಲಿಕ್ಕೂ, ಹೊಸದಾಗಿ ಪದ್ಯಗಳನ್ನು ಬರೆಯುವುದಕ್ಕೂ ಛಂದಸ್ಸಿನ ಅಭ್ಯಾಸವು ಅಗತ್ಯವಾಗಿದೆ.

'ಪದ್ಯ' ಅಥವಾ 'ವೃತ್ತ'ವು ಪಾದದಿಂದ ಕೂಡಿರುವುದು. ಪಾದಗಳು ಗಣ ಮತ್ತು ಪ್ರಾಸ ನಿಯಮವುಳ್ಳ ಶಬ್ದ ಸಂಘಟನೆಗಳು. ಕನ್ನಡ ಸಾಹಿತ್ಯದಲ್ಲಿ ಸಂಸ್ಕೃತದಿಂದ ಬಂದಿರುವ ಛಂದಸ್ಸು ಹಾಗೂ ಅಚ್ಚಗನ್ನಡ ಛಂದಸ್ಸು ಎಂದು ಎರಡು ವಿಧಗಳಿವೆ. ಇಂತಹ ಪದ್ಯಗಳ ಪಾದಗಳು ವರ್ಣಗಣ, ಮಾತ್ರಾಗಣ ಮತ್ತು ಅಂಶಗಣ ನಿಯಮಗಳಿಂದ ಕೂಡಿದವುಗಳಾಗಿರುತ್ತವೆ. ಸಂಸ್ಕೃತದಿಂದ ಬಂದಿರುವ ವೃತ್ತಜಾತಿಗಳು ವರ್ಣಗಣ ನಿಯಮವುಳ್ಳವು. ಕನ್ನಡದ ವೃತ್ತಗಳು ಮಾತ್ರಾಗಣ ಮತ್ತು ಅಂಶಗಣ ನಿಯಮದಿಂದ ಕೂಡಿದವುಗಳು.

## ಮಾತ್ರೆ

ಮಾತ್ರೆಗಳಲ್ಲಿ ಲಘು, ಗುರು ಮತ್ತು ಪ್ಲುತವೆಂದು ಮೂರು ವಿಧಗಳಿವೆ. ಒಂದು ಹ್ರಸ್ವಾಕ್ಷರವನ್ನು ಉಚ್ಚರಿಸಲು ಬೇಕಾಗುವ ಕಾಲಪರಿಮಾಣಕ್ಕೆ 'ಮಾತ್ರೆ' ಎಂದು ಹೆಸರು. ಇದಕ್ಕೆ 'ಲಘು' ಎಂದು ಸಂಜ್ಞೆ. ಒಂದು ದೀರ್ಘಾಕ್ಷರವನ್ನು

ಉಚ್ಚರಿಸಲು ಎರಡು ಮಾತ್ರೆಯಷ್ಟು ಕಾಲಾವಧಿಬೇಕು ಇದಕ್ಕೆ 'ಗುರು' ಎಂದು ಸಂಜ್ಞೆ. ಅದೇ ದೀರ್ಘಾಕ್ಷರವನ್ನು ಇನ್ನಷ್ಟು ಎಳೆದು ಉಚ್ಚರಿಸಿದಲ್ಲಿ ಅದಕ್ಕೆ ಮೂರು ಮಾತ್ರೆಗಳ ಕಾಲಾವಧಿಬೇಕು. ಇದಕ್ಕೆ 'ಪ್ಲುತ' ಎಂದು ಸಂಜ್ಞೆ. ಲಘುವಿಗೆ 'U' ಸಂಜ್ಞೆಯನ್ನೂ, ಗುರುವಿಗೆ '—' ಸಂಜ್ಞೆಯನ್ನೂ, ಪ್ಲುತಕ್ಕೆ 'ऽ' ಸಂಜ್ಞೆಯನ್ನೂ ಉಪಯೋಗಿಸುತ್ತಾರೆ.

ಉದಾ :

| | | | |
|---|---|---|---|
| | U U U | U U | U U |
| ಲಘುವಿಗೆ | ಹ ರ ಕೆ | ವಿ ಧಿ | ಕೃ ಪೆ |
| | — | — — | — |
| ಗುರುವಿಗೆ | ಬಾ | ಇಂ ದ ಲ್ಲ | ನಾ ಳೆ |

ಪ್ಲುತಕ್ಕೆ ಹಾ ರಾಮಾ ರಾಮಾऽ ಎಂದು ಸೀತೆ ಬಾಯಳಿದಳ್ಳ್.

ಎಲ್ಲ ಹ್ರಸ್ವಾಕ್ಷರಗಳು ಲಘುಗಳಾಗುತ್ತವೆ. ಅದನ್ನು ಗುರುತಿಸುವುದು ಸುಲಭ. ಪ್ಲುತಾಕ್ಷರಗಳು ಪದ್ಯಗಳಲ್ಲಿ ಬರುವುದು ಬಹು ವಿರಳ. ಅದನ್ನು ಗುರುತಿಸುವುದು ಕಷ್ಟವಲ್ಲ. ಆದರೆ ಒಂದು ಅಕ್ಷರವು ಈ ಕೆಳಗಿನ ಆರು ಕಾರಣಗಳಿಂದ ಗುರುವಾಗಬಹುದು. ಎರಡು ಕಾರಣಗಳಿಂದ ಒಂದು ಅಕ್ಷರ ಗುರುವಾದರೂ ಅದಕ್ಕೆ ಒಂದೇ ಗುರು ಸಂಜ್ಞೆ ಬರುತ್ತದೆ ಎಂಬುದನ್ನೂ ಶಿಥಿಲದ್ವಿತ್ವದ ಹಿಂದಿನ ಅಕ್ಷರಕ್ಕೆ ಗುರು ಸಂಜ್ಞೆಯಿಲ್ಲವೆಂಬುದನ್ನೂ ತಿಳಿದಿರಬೇಕಾಗುತ್ತದೆ.

ಉದಾ :

1. ದೀರ್ಘಸ್ವರಯುಕ್ತವಾದ ಅಕ್ಷರ ಆ ಟ, ಕಾ ಲಾ ಳು, ಮೇ ಲಾ ಟ
2. ಅನುಸ್ವಾರಯುಕ್ತವಾದ ಅಕ್ಷರ ಅಂದು, ಇಂದು, ಚಂದ
3. ವಿಸರ್ಗದ ಹಿಂದಿನ ಅಕ್ಷರ ದುಃಖ, ಅಂತಃ ಕರಣ



4. ಸಂಯುಕ್ತಾಕ್ಷರದ ಹಿಂದಿನ ಅಕ್ಷರ ಎ ಲ್ಲ ಬ ಲ್ಲ ವ ರಿ ಲ್ಲ
5. ಸ್ವರ ರಹಿತ ವ್ಯಂಜನದ ಹಿಂದಿನ ಅಕ್ಷರ ನಿ ಲ್, ಕ ಣ್, ಪೆ ಸ ರ್
6. ಮಾತ್ರಾಗಣ ನಿಯಮದ ಪದ್ಯಾರ್ಧದ ಕಡೆಯ ಹ್ರಸ್ವಾಕ್ಷರ

ಏನಕಲಿತರದೇನು ಯತ್ನದೊ
ಳೇನ ಮಾಡಿದರೇನು ಸರ್ವವು
ಕಾನನದ ಬೆಳದಿಂಗಳಂದದಿ ವ್ಯರ್ಥವಾಗಿಹುದು ॥

## ಗಣ

ಗಣವೆಂದರೆ ಕೆಲವು ನಿಯಮಗಳಿಗನುಸಾರವಾಗಿ ವಿಂಗಡಿಸಿದ ಅಕ್ಷರಗಳ ಅಥವಾ ಮಾತ್ರೆಗಳ ಗುಂಪು. ಇದರಲ್ಲಿ ವರ್ಣಗಣ (ಅಕ್ಷರಗಣ) ಮಾತ್ರಾಗಣ ಮತ್ತು ಅಂಶಗಣವೆಂದು ಮೂರು ವಿಧಗಳಿವೆ. ವರ್ಣಗಣ ನಿಯಮಕ್ಕೆ ಒಳಪಟ್ಟ ಪದ್ಯಗಳನ್ನು ವರ್ಣವೃತ್ತಗಳೆಂದೂ ಮಾತ್ರಾ ಗಣ ನಿಯಮಕ್ಕೊಳಪಟ್ಟಿರುವವುಗಳನ್ನು ಮಾತ್ರಾವೃತ್ತಗಳೆಂದೂ ಅಂಶಗಣಗಳುಳ್ಳ ವೃತ್ತಗಳನ್ನು ಅಂಶಗಣ ವೃತ್ತಗಳೆಂದೂ ಕರೆಯುವರು.

## ವರ್ಣಗಣ (ಅಕ್ಷರಗಣ)

ವರ್ಣಗಣಗಳಿಂದ ಕೂಡಿದ ಪಾದವುಳ್ಳ ವೃತ್ತಗಳನ್ನು ಮೂರು ಮೂರು ಅಕ್ಷರಗಳ ಒಂದೊಂದು ಗುಂಪು ಮಾಡಿ ಅವನ್ನು ಒಂದು 'ಗಣ' ಎಂದು ಲೆಕ್ಕಿಸುವರು. ಸಂಸ್ಕೃತದ ಛಂದೋಪದ್ಧತಿಯನ್ನನುಸರಿಸಿ ಕನ್ನಡಕ್ಕೆ ಬಂದಿರುವ ಮತ್ತೇಭವಿಕ್ರೀಡಿತ, ಚಂಪಕಮಾಲೆ ಮೊದಲಾದ ವೃತ್ತಗಳು ವರ್ಣವೃತ್ತಗಳು. ವರ್ಣಗಣಗಳನ್ನು ಈ ಕೆಳಗಿನ ಸೂತ್ರಗಳಿಂದ ತಿಳಿಯಬಹುದು.

ಗುರು ಲಘು ಮೂರಿರೆ ಮ, ನ, ಗಣ

ಗುರು ಲಘು ಮೊದಲಲ್ಲಿ ಬರಲು ಭ, ಯ, ಗಣ

ಗುರು ಲಘು ನಡುವಿರೆ ಜ, ರ, ಗಣ

ಗುರು ಲಘು ಕಡೆಯಲ್ಲಿ ಬರಲು ಸ, ತ, ಗಣಮಕ್ಕುಂ

ಗುರು ಮೂರಿರೆ ಮಗಣ, ಲಘು ಮೂರಿರೆ ನಗಣ, ಗುರು ಮೊದಲಲ್ಲಿ ಬರಲು ಭಗಣ, ಲಘು ಮೊದಲಲ್ಲಿ ಬರಲು ಯಗಣ, ಗುರು ನಡುವಿರೆ ಜಗಣ, ಲಘು ನಡುವಿರೆ ರಗಣ. ಗುರು ಕಡೆಯಲ್ಲಿ ಬರಲು ಸಗಣ, ಲಘು ಕಡೆಯಲ್ಲಿ ಬರಲು ತಗಣಗಳಾಗುತ್ತವೆ. ಇದನ್ನು ಸುಲಭವಾಗಿ ನೆನಪಿನಲ್ಲಿಟ್ಟುಕೊಳ್ಳಲು 'ಯಮಾತಾರಾಜಭಾನ ಸಲಗಂ' ಎಂಬ ಸೂತ್ರವನ್ನು ಮಾಡಿಕೊಂಡಿರುವರು.

ಉದಾ:

| | | |
|---|---|---|
| ಯ ಮಾ ತಾ | U _ _ | ಯಗಣ |
| ಮಾ ತಾ ರಾ | _ _ _ | ಮಗಣ |
| ತಾ ರಾ ಜ | _ _ U | ತಗಣ |
| ರಾ ಜ ಭಾ | _ U _ | ರಗಣ |
| ಜ ಭಾ ನ | U _ U | ಜಗಣ |
| ಭಾ ನ ಸ | _ U U | ಭಗಣ |
| ನ ಸ ಲ | U U U | ನಗಣ |
| ಸ ಲ ಗಂ | U U _ | ಸಗಣ |

## ಮಾತ್ರಾಗಣ

ಕನ್ನಡ ಛಂದೋ ನಿಯಮಕ್ಕೆ ಒಳಪಟ್ಟ ವೃತ್ತಗಳಲ್ಲಿ ಹೆಚ್ಚಿನವು ಮಾತ್ರಾಗಣ ನಿಯಮದಿಂದ ಕೂಡಿದವುಗಳಾಗಿವೆ. ದ್ವಿಪದಿ, ತ್ರಿಪದಿ, ಚೌಪದಿ, ಷಟ್ಪದಿ, ರಗಳೆ ಮುಂತಾದುವು ಮಾತ್ರಾಗಣ ನಿಯಮಕ್ಕೆ ಒಳಪಟ್ಟವುಗಳಾಗಿವೆ. ಬ್ರಹ್ಮಗಣ,



ವಿಷ್ಣುಗಣ, ರುದ್ರಗಣ ಮೊದಲಾದುವು ಕೂಡಾ ಮಾತ್ರಾ ನಿಯಮದಿಂದಲೇ ಉಂಟಾದವುಗಳಲ್ಲದೆ ಅಕ್ಷರ ಗಣ ನಿಯಮವುಳ್ಳವುಗಳಲ್ಲ. ಕಂದಪದ್ಯ ಮಾತ್ರ ಮಾತ್ರಾ ಗಣ ಮತ್ತು ಅಕ್ಷರ ಗಣ ನಿಯಮವೆಂಬ ಎರಡು ನಿಯಮಗಳ ಮಿಲನದಿಂದ ಉಂಟಾದಂತೆ ಕಂಡುಬರುತ್ತದೆ.

ಮಾತ್ರಾಗಣಗಳಲ್ಲಿ ಮೂರು ಮಾತ್ರೆಯ ಗಣ, ನಾಲ್ಕು ಮಾತ್ರೆಯ ಗಣ ಮತ್ತು ಐದು ಮಾತ್ರೆಯ ಗಣಗಳೆಂದು ಮುಖ್ಯವಾಗಿ ಮೂರು ವಿಧಗಳಿವೆ. ಇವುಗಳಲ್ಲಿ ಮೂರು ಮಾತ್ರೆಯ ಗಣಗಳಲ್ಲಿ ಮೂರು ವಿಧಗಳಿವೆ. ನಾಲ್ಕು ಮಾತ್ರೆಯ ಗಣಗಳಲ್ಲಿ ಐದು ವಿಧಗಳಿವೆ. ಐದು ಮಾತ್ರೆಯ ಗಣಗಳಲ್ಲಿ ಎಂಟು ವಿಧಗಳಿವೆ.

ಉದಾ : ಮೂರು ಮಾತ್ರೆಯ ಗಣಗಳು ಮೂರು ವಿಧ.

| | |
|---|---|
| U U U | ಹರಿಯು |
| _ U | ಕಾವ |
| U _ | ಸಭಾ |

**2.** ನಾಲ್ಕು ಮಾತ್ರೆಯ ಗಣಗಳು ಐದು ವಿಧ.

| | |
|---|---|
| U U U U | ದುಡಿಮೆಯು |
| _ _ | ನಿತ್ಯಂ |
| U U _ | ನಡೆದಾ |
| _ U U | ದೇಶಕೆ |
| U _ U | ವಿಶಾಲ |

**3.** ಐದು ಮಾತ್ರೆಯ ಗಣಗಳು ಎಂಟು ವಿಧ.

| | |
|---|---|
| U U U U U | ಕರಗಳನು |
| _ U U U | ಜೋಡಿಸುತೆ |

| | |
|---|---|
| U U _ U | ಶಿರವನ್ನು |
| _ _ U | ಬಾಗುತ್ತೆ |
| _ U _ | ಪ್ರಾರ್ಥಿಪೆಂ |
| U U U _ | ನಿನಗೆ ನಾಂ |
| U _ U U | ಅದಾವುದೊ |
| U _ _ | ಮಹೇಶಾ |

## ಅಂಶ ಗಣ

ಅಂಶಗಣವನ್ನು ಅವುಗಳ ಅಂಶಗಳಿಂದ ನಿಶ್ಚಯಿಸಬೇಕು. ಗಣದ ಆದಿಯಲ್ಲಿ ಬರುವ ಅಂಶವನ್ನು ಮೂಲಾಂಶವೆಂದು ಕರೆಯುತ್ತಾರೆ. ಇದರಲ್ಲಿ ಒಂದು ಗುರು ಅಥವಾ ಎರಡು ಲಘುಗಳು ಇರಬೇಕು. ಮುಂದೆ ಬರುವ ಅಂಶಗಳಲ್ಲಿ ಒಂದು ಗುರು ಅಥವಾ ಒಂದು ಲಘು ಬರಬಹುದು. ಅಂಶಗಣಗಳಲ್ಲಿ ಬ್ರಹ್ಮಗಣ, ವಿಷ್ಣುಗಣ ಮತ್ತು ರುದ್ರಗಣವೆಂದು ಮೂರು ವಿಧಗಳಿವೆ. ಬ್ರಹ್ಮಗಣದಲ್ಲಿ ಎರಡು ಅಂಶಗಳೂ ವಿಷ್ಣುಗಣದಲ್ಲಿ ಮೂರು ಅಂಶಗಳೂ ರುದ್ರಗಣದಲ್ಲಿ ನಾಲ್ಕು ಅಂಶಗಳೂ ಇರುತ್ತವೆ. ಬ್ರಹ್ಮಗಣಗಳು ನಾಲ್ಕು ವಿಧವಾಗಿಯೂ ವಿಷ್ಣುಗಣಗಳು ಎಂಟು ವಿಧವಾಗಿಯೂ, ರುದ್ರಗಣಗಳು ಹದಿನಾರು ವಿಧವಾಗಿಯೂ ಇರುವುವು.

ಉದಾ : ಬ್ರಹ್ಮಗಣಗಳು **4** ವಿಧ

| | |
|---|---|
| _ _ | ಬ್ರಹ್ಮಂ |
| U U _ | ಸುರಪಂ |
| _ U | ಧಾತೃ |
| U U U | ಅಜನು |



ವಿಷ್ಣುಗಣಗಳು **8** ವಿಧ.

| | |
|---|---|
| _ _ _ | ಗೋವಿಂದಂ |
| _ _ U | ಕಂಸಾರಿ |
| _ U U | ಶ್ರೀಪತಿ |
| U U U _ | ಪರಹಿತಂ |
| U U _ U | ನರಕಾರಿ |
| U U _ _ | ಹೃಷಿಕೇಶಂ |
| _ U _ | ಮಾಧವಂ |
| U U U U | ನರಹರಿ |

ರುದ್ರಗಣಗಳು **16** ವಿಧ.

| | |
|---|---|
| _ _ _ _ | ಗಾಂಗಾಧೀಶಂ |
| _ _ _ U | ಕಂದರ್ಪಾರಿ |
| _ _ U U | ಭೂತಾಗ್ರಣಿ |
| _ U U U | ಕಾಮರಿಪು |
| _ U _ _ | ನೀಲಕಂಠಂ |
| _ _ U _ | ಕಾಮಾಂತಕಂ |
| U U _ _ _ | ಗಿರಿಜಾನಾಥಂ |
| U U U _ _ | ವೃಷಭಲಕ್ಷ್ಯಂ |
| U U _ U _ | ಪ್ರಮಥಾಧಿಪಂ |
| _ U U _ | ಶೂಲಧರಂ |

U U U U _ ಪುರಮಥನಂ

U U _ _ U ಮದನಧ್ವಂಸಿ

_ U _ U ಚಂದ್ರಮೌಳಿ

U U U _ U ಭುಜಗಧಾರಿ

U U _ U U ತ್ರಿಜಗದ್ಗುರು

U U U U U ಮದನರಿಪು

## ಪ್ರಾಸ

ಪ್ರಾಸವು ಪದ್ಯದ ಜೀವಾಳವಾಗಿದೆ. ಸರ್ವಜ್ಞ ಕವಿಯು 'ಪ್ರಾಸವಿಲ್ಲದ ಪದವ ತಾಸು ಹಾಡಿದರೇನು? ಸಾಸಿವೆಯೆಣ್ಣೆ ಹದಮಾಡಿ ಹೂಸಿಕೊಂಡಂತೆ' ಎಂದಿರುವನು. ಪದ್ಯಪಾದದ ಎರಡನೆಯ ಅಕ್ಷರವು ಒಂದೇ ವಿಧದ ವ್ಯಂಜನದಿಂದ ಕೂಡಿರುವ ಪದ್ಧತಿಗೆ 'ಆದಿಪ್ರಾಸ' ವೆಂದು ಹೆಸರು. ಸಾಮಾನ್ಯವಾಗಿ ಪ್ರಾಸವೆಂದರೆ ಆದಿಪ್ರಾಸವೆಂದೇ ಕೆಲವರು ಊಹಿಸುವುದುಂಟು. ಪಾದದ ಕಡೆಯ ಅಕ್ಷರವು ಒಂದೇ ವಿಧದ ಸ್ವರದಿಂದ ಕೂಡಿದ ಸಜಾತೀಯ ವ್ಯಂಜನವಾಗಿದ್ದು ಅಂತ್ಯಪ್ರಾಸ ನಿಯಮದಿಂದ ಕೂಡಿದ ಪದ್ಯಗಳನ್ನು ರಚಿಸಿದ್ದಾರೆ. ಪ್ರಾಜ್ಞರಾದ ಕೆಲವು ಕವಿಗಳು ಆದಿ, ಮಧ್ಯ ಮತ್ತು ಅಂತ್ಯಪ್ರಾಸಗಳನ್ನಿಟ್ಟು ಪದ್ಯಗಳನ್ನು ರಚಿಸಿದ್ದಾರೆ.

ಉದಾ : **ಹೆತ್ತ** ಹೊಟ್ಟೆಯುರಿಯುತ್ತಿ**ದೆ** ಮಗ**ನೇ**

**ಎತ್ತಿದ** ತೋಳನು **ಕೆತ್ತಿದೆ** ಮಗ**ನೇ**

ಹಾವು ಕಡಿಯೆ ಹಾ **ಎಂದೆಯೊ ಕಂದಾ**

ಸಾವಾಗವ್ವಾ **ಎಂದೆಯೊ ಕಂದಾ**

ಅಂತ್ಯ ಪ್ರಾಸವಾಗಬೇಕಾದರೆ ಕಡೆಯ ವ್ಯಂಜನದ ಸ್ವರ ಕೂಡಾ ಒಂದೇ ವಿಧವಾಗಿರಬೇಕು. 'ಮಗನೇ' ಎಂಬ ಪದಕ್ಕೆ 'ಮಗನೂ' ಎಂಬ ಪದ ಅಂತ್ಯ ಪ್ರಾಸಾಕ್ಷರವಾಗಿ ಬರಕೂಡದು.



ಆದಿಪ್ರಾಸದಲ್ಲಿ ಸಿಂಹ, ಗಜ, ವೃಷಭ, ಅಜ, ಹಯ, ಶರಭ ಪ್ರಾಸಗಳೆಂಬ ಆರು ವಿಧಗಳಿವೆ. ಪ್ರಾಸಾಕ್ಷರದ ಹಿಂದಿನ ಅಕ್ಷರವು ಹ್ರಸ್ವವಾದರೆ ಸಿಂಹಪ್ರಾಸವೂ, ದೀರ್ಘವಾದರೆ ಗಜ ಪ್ರಾಸವೂ, ಅನುಸ್ವಾರವಾದರೆ ವೃಷಭಪ್ರಾಸವೂ ಆಗುವುದು. ಪ್ರಾಸಾಕ್ಷರವು ವಿಜಾತೀಯ ಒತ್ತಕ್ಷರವಾಗಿದ್ದರೆ ಶರಭಪ್ರಾಸವೂ, ವಿಸರ್ಗಯುಕ್ತವಾದ ಅಕ್ಷರವಾಗಿದ್ದರೆ ಅಜಪ್ರಾಸವೂ, ಸಜಾತೀಯ ಒತ್ತಕ್ಷರವಾಗಿದ್ದರೆ ಹಯಪ್ರಾಸವೂ ಆಗುವುದು. ಛಂದೋಂಬುಧಿಕಾರನು ಇವುಗಳ ಲಕ್ಷಣವನ್ನು ಹೀಗೆ ನಿರೂಪಿಸಿರುವನು.

ಉದಾ : ನಿಜದಿಂ ಬಂದೊಡೆ **ಸಿಂಹಂ**

**ಗಜ**ದೀರ್ಘಂ, ಬಿಂದು **ವೃಷಭ** ವ್ಯಂಜನ **ಶರಭಂ**

**ಅಜಂ** ವಿಸರ್ಗಂ; **ಹಯ**ಮಂ

ಬುಜಮುಖಿ ದಡ್ಡ ಕ್ಕರಂಗಳಿವು ಷಟ್‌ಪ್ರಾಸಂ

## ವರ್ಣಗಣ (ಅಕ್ಷರಗಣ) ವೃತ್ತಗಳು

ವರ್ಣವೃತ್ತಗಳು ಸಂಸ್ಕೃತ ಛಂದಸ್ಸಿನಿಂದ ಬಂದವುಗಳು. ಅವುಗಳಲ್ಲಿ ಸಮ, ಅರ್ಧಸಮ ಮತ್ತು ವಿಷಮ ಎಂಬ ಮೂರು ಜಾತಿಯ ವೃತ್ತಗಳಿವೆ. ಸಮವೃತ್ತಗಳಲ್ಲಿ ಒಂದರಿಂದ ಇಪ್ಪತ್ತಾರರವೆಗೆ ಅಕ್ಷರಗಳಿರುವ ವೃತ್ತಗಳಿವೆ. ಕನ್ನಡಿಗರು ಸಂಸ್ಕೃತ ಛಂದಸ್ಸಿನಿಂದ ಹೆಚ್ಚಾಗಿ ಆರಿಸಿಕೊಂಡ ಛಂದಸ್ಸುಗಳೆಂದರೆ ಶಾರ್ದೂಲ ವಿಕ್ರೀಡಿತ, ಮತ್ತೇಭ ವಿಕ್ರೀಡಿತ, ಉತ್ಪಲ ಮಾಲೆ, ಚಂಪಕ ಮಾಲೆ, ಸ್ರಗ್ಧರೆ ಮತ್ತು ಮಹಾಸ್ರಗ್ಧರೆ. ಇವುಗಳನ್ನು ಖ್ಯಾತ ಕರ್ನಾಟಕವೆಂದು ಹೇಳುವರು.

ಕನ್ನಡದಲ್ಲಿ ಹೆಚ್ಚಾಗಿ ಬಳಕೆಯಲ್ಲಿರುವ ಆ ಆರು ವರ್ಣವೃತ್ತಗಳನ್ನು ನಾಗವರ್ಮನ ಈ ಕೆಳಗಿನ ಪದ್ಯದ ಆಧಾರದಿಂದ ಗುರುತಿಸಿಕೊಳ್ಳಬಹುದು.

ಗುರುವೊಂದಾದಿಯೊಳುತ್ಪಲಂ, ಗುರು ಮೊದಲ್ ಮೂರಾಗೆ ಶೂರ್ದೂಲಮಾ

ಗುರು ನಾಲ್ಕಾಗಿರಲಂತು ಸ್ರಗ್ಧರೆ, ಲಘುದ್ವಂದ್ವಂ ಗುರುದ್ವಂದ್ವಮಾ

ಗಿರೆ ಮತ್ತೇಭ, ಲಘುದ್ವಯ ತ್ರಿಗುರುವಿಂದಕ್ಕುಂ ಮಹಾಸ್ರಗ್ಧರಂ,

ಹರಿಣಾಕ್ಷೀ, ಲಘು ನಾಲ್ಕು ಚಂಪಕಮಿವಾರುಂ ಖ್ಯಾತ ಕರ್ನಾಟಕಂ.

## 1. ಶಾರ್ದೂಲ ವಿಕ್ರೀಡಿತ ವೃತ್ತ (19 ಅಕ್ಷರಗಳ ಛಂದಸ್ಸು)

| ಮ | ಸ | ಜ | ಸ | ತ | ತ | ಗು |
|---|---|---|---|---|---|---|
| _ _ _ | U U _ | U _ U | U U _ | _ _ U | _ _ U | _ |
| ಶ್ರೀ ದೇವೇಂ | ದ್ರ ಮುನೀಂ | ದ್ರ ವಂದಿ | ತ ಗುಣ | ವ್ರಾತಂ ಜ | ಗತ್ಸ್ವಾಮಿ | ಸಂ |

ದಾದಿ ಬ್ರಹ್ಮನರಾಧಬೋಧ ನಿಳಯಂ ದುರ್ವಾರ ಸಂಸಾರ ವಿ-

ಚ್ಛೇದೋಪಾಯನಿಯುಕ್ತ ಸೂಕ್ತಿ ವೃಷಮಾರ್ಗಾಗ್ರೇಸರಂ ಪಾಪ ಹೃ -

ತ್ಪಾದಾಬ್ಜಂ ದಯೆಗೆಯ್ವನಕ್ಕೆಮಗೆ ಮುಕ್ತಿ ಶ್ರೀ ಸುಖಾವ್ಯಾಪ್ತಿಯಂ

ಮೇಲಿನ ಪದ್ಯವು ಶಾರ್ದೂಲ ವಿಕ್ರೀಡಿತ ವೃತ್ತವಾಗಿದೆ. ಇದು ಸಮಪಾದ ವೃತ್ತವಾಗಿದ್ದು, ನಾಲ್ಕು ಪಾದಗಳೂ ಒಂದಕ್ಕೊಂದು ಸಮಾನವಾಗಿವೆ. ಇದರ ಪ್ರತಿಪಾದದಲ್ಲಿ ಮ, ಸ, ಜ, ಸ, ತ, ತ ಎಂಬ ಆರು ಗಣಗಳೂ, ಕೊನೆಯಲ್ಲಿ ಒಂದು ಗುರುವೂ ಇದ್ದು ಒಟ್ಟು ಹತ್ತೊಂಬತ್ತು ಅಕ್ಷರಗಳಿರಬೇಕು. ಇದನ್ನು ಸೂತ್ರರೂಪವಾಗಿ 'ಕಣ್ಗೊಪ್ಪಲ್ ಮಸಜಂಸತಂತಗಮುಮಾ ಶಾರ್ದೂಲ ವಿಕ್ರೀಡಿತಂ' ಎನ್ನುತ್ತಾರೆ.

## 2. ಮತ್ತೇಭ ವಿಕ್ರೀಡಿತ (20 ಅಕ್ಷರಗಳ ಛಂದಸ್ಸು)

| ಸ | ಭ | ರ | ನ | ಮ | ಯ | ಲಗು |
|---|---|---|---|---|---|---|
| U U _ | _ U U | _ U _ | U U U | _ _ _ | U _ _ | U _ |
| ಕುಲದೊಳ್ | ಕೂಡರು | ಕೂಸನೀ | ಯರುನ್ನೃ | ಪರ್ ನಿ ಷ್ಕಾ | ರಣಂ ದಂ | ಡಿಪರ್ |

ಪೊಳಲೊಳ್ ಸೇರಲು ಪೋರುಗೈದು ಸತಿ ತಾಂಪೋಗಟ್ಟುವಳ್ ಸಾಲಿಗರ್

ಕಲುಗುಂಡಂ ಗಡಪೇಱುವರ್ ತೊಲಗಿರಲ್ ಲಕ್ಷ್ಮೀಟಾಕ್ಷಂ ಕ್ಷಣಂ

ನೆಲಮುಟ್ಟಲ್ ಮುನಿದಪ್ಪುದೈ ಹರಹರಾ ಶ್ರೀ ಚೆನ್ನಸೋಮೇಶ್ವರಾ.

ಮೇಲಿನದು 'ಮತ್ತೇಭ ವಿಕ್ರೀಡಿತ' ವೆಂಬ ಸಮಪಾದ ವೃತ್ತವಾಗಿದೆ. ಇದರ ಪ್ರತಿಪಾದದಲ್ಲಿ ಇಪ್ಪತ್ತು ಅಕ್ಷರಗಳಿದ್ದು ಸ, ಭ, ರ, ನ, ಮ, ಯ, ಎಂಬ ಆರು ಗಣಗಳೂ, ಒಂದು ಲಘುವೂ, ಒಂದು ಗುರುವೂ ಇರಬೇಕೆಂಬ ನಿಯಮವಿದೆ.



ಇದನ್ನು ಸೂತ್ರ ರೂಪವಾಗಿ 'ಸಭರಂನಂಮಯಲಂಗಮುಂ ಬಗೆಗೊಳಲ್ ಮತ್ತೇಭ ವಿಕ್ರೀಡಿತಂ' ಎನ್ನುವರು.

## 3. ಉತ್ಪಲಮಾಲಾ ವೃತ್ತ (20 ಅಕ್ಷರಗಳ ಛಂದಸ್ಸು)

| ಭ | ರ | ನ | ಭ | ಭ | ರ | ಲಗು |
|---|---|---|---|---|---|---|
| _ U U | _ U U | U U U | _ U U | _ U U | _ U _ | U _ |
| ಕಾಮನ | ಬಾಣದಿ | ಕ್ಕೆವ ನೆ | ಯೋಭ್ರಮ | ರಾಳಿಯ | ಶಸ್ತ್ರಶಾ | ಲೆಯೋ |

ಭೂಮಿಯದೊಂದು ಗಂಧಗುಣಮಿರ್ಪೆಡೆಯೋ ವಿಲಸತ್ಸದಾಗತಿ

ಪ್ರೇಮದೆ ಸೌರಭಂದಳೆದ ತಾಣಮೊ ಪೇಟಿ°ಮಿದೆಂದು ಕಂಡವರ

ಕಾಮಿಸೆ ಮಾಲೆಗಾಱಿ ರೊಸೆದೋವಿದ ಪೂವಿನ ತೋಂಟಮೊಪ್ಪುಗಂ.

ಮೇಲಿನ ಪದ್ಯವು 'ಉತ್ಪಲಮಾಲೆಯೆಂಬ' ಇಪ್ಪತ್ತು ಅಕ್ಷಗಳಿರುವ ಸಮಪಾದ ವೃತ್ತವಾಗಿದೆ. ಇದರ ಪ್ರತಿ ಪಾದದಲ್ಲಿ ಭ, ರ, ನ, ಭ, ಭ, ರ ಎಂಬ ಆರು ಗಣಗಳೂ, ಒಂದು ಲಘುವೂ ಒಂದು ಗುರುವೂ ಇರಬೇಕು. ಇದನ್ನು ಸೂತ್ರರೂಪವಾಗಿ 'ಉತ್ಪಲಮಾಲೆಯಪ್ಪುದು ಭರಂ ನಭಭಂ ರಲಗಂ ನೆಗಳ್ದಿರಲ್' ಎನ್ನುವರು.

## 4. ಚಂಪಕಮಾಲಾವೃತ್ತ (21 ಅಕ್ಷರಗಳ ಛಂದಸ್ಸು)

| ನ | ಜ | ಭ | ಜ | ಜ | ಜ | ರ |
|---|---|---|---|---|---|---|
| U U U | U _ U | _ U U | U _ U | U _ U | U _ U | _ U _ |
| ಸುರರ | ನಿವಾಸ | ದಂತನಿ | ಮಿಷ ಪ್ರ | ಕರಂ ನ | ಭದಂತಿ | ರಬ್ಜಬಂ |

ಧುರ ಮಧುಮಾಸದಂತೆ ಸಿತಪಕ್ಷಯುತಂ, ರಥದಂತೆ ಚಕ್ರ ವಿ

ಸ್ತರಮುರು ಪದ್ಮಜಾಂಡದವೊಲಾತ್ತಲಸದ್ಭುವನಾಶ್ರಯಂ, ಧನು

ರ್ಧರರ ಕಲಾಪದಂತೆ ರಮಣೀಯ ಶಿಲೀಮುಖ ಸಂಕುಳಂ ಕೊಳಂ

ಮೇಲಿನ ಪದ್ಯವು ಇಪ್ಪತ್ತೊಂದು ಅಕ್ಷರಗಳಿರುವ ಚಂಪಕಮಾಲಾ ವೃತ್ತವಾಗಿದೆ. ಇದು ಸಮಪಾದ ವೃತ್ತವಾಗಿದ್ದು, ಪ್ರತಿಪಾದದಲ್ಲಿ ನ, ಜ, ಭ, ಜ, ಜ, ಜ, ರ ಎಂಬ

ಏಳು ಗಣಗಳಿವೆ. ಇದನ್ನು ಸೂತ್ರರೂಪವಾಗಿ ''ನಜಭಜ ಜಂಜರಂ ಬಗೆಗೊಳುತ್ತಿರೆ ಚಂಪಕ ಮಾಲೆಯೆಂದಪರ್'' ಎಂದು ಹೇಳುತ್ತಾರೆ.

**5. ಸ್ರಗ್ಧರಾ ವೃತ್ತ (21 ಅಕ್ಷರಗಳ ಛಂದಸ್ಸು)**

| ಮ | ರ | ಭ | ನ | ಯ | ಯ | ಯ |
|---|---|---|---|---|---|---|
| _ _ _ | _ U _ | _ U U | U U U | U _ _ | U U _ | U _ _ |
| ಈ ವಜ್ರಾ | ವರ್ತಕೋ | ದಂಡಮ | ನವಯ | ವದಿಂದೇ | ರಿಸಲ್ಗಾ | ಲ್ವದೋರ್ದಂ |

ಡಾವಷ್ಟಂಭ ಪ್ರಚಂಡಂ ಜನಕಜೆಗೆ ವರಂ ಬರ್ಪುದೆಂಬೀವ್ಯವಸ್ಥಾ -

ರಾವಂ ಕರ್ಣಾವತಂಸಂ ಪಸರಿಸೆ ನಿಜ ಪೀಠದಿಂದೆಟ್ಟುದಾಗಳ್

ತೀವುತ್ತಿರ್ಪನ್ನೆಗಂ ಭೂಷಣರುಚಿ ಕಕುಭಾನೀಕಮಂ ರಾಜಲೋಕಂ

ಮೇಲಿನ ಪದ್ಯವು 'ಸ್ರಗ್ದರೆ' ಎಂಬ ಇಪ್ಪತ್ತೊಂದು ಅಕ್ಷರಗಳಿರುವ ಸಮಪಾದ ವೃತ್ತವಾಗಿದೆ. ಇದರ ಪ್ರತಿಪಾದದಲ್ಲಿ ಮ, ರ, ಭ, ನ, ಯ, ಯ, ಯ ಎಂಬ ಏಳು ಗಣಗಳಿರುತ್ತವೆ. ಇದನ್ನು ಸೂತ್ರರೂಪವಾಗಿ 'ತೋಱಲ್' ಮಂರಂಭನಂ ಮೂಯಗಣಮುಮದೆ ತಾಂ ಸ್ರಗ್ಧರಾವೃತ್ತಮಕ್ಕುಂ ಎನ್ನುವರು.

**6. ಮಹಾಸ್ರಗ್ಧರಾ ವೃತ್ತ (22 ಅಕ್ಷರಗಳ ಛಂದಸ್ಸು)**

| ಸ | ತ | ತ | ನ | ಸ | ರ | ರ | ಗು |
|---|---|---|---|---|---|---|---|
| U U _ | _ _ U | _ _ U | U U U | U U _ | _ U _ | _ U _ | _ |
| ಸುರೆಯಿಂ | ಸೊರ್ಕಂಸು | ರೋರ್ವೀರು | ಹಕಿಸ | ಲಯದಿಂ | ರಾಗಮಂ | ಕೌಸ್ತುಭ | ಪ್ರ |

ಸ್ತರದಿಂ ನೈಷ್ಠುರ್ಯಮಂ, ದುರ್ವಿಷಮ ವಿಷದಿನುನ್ಮೋಹಮಂ ಮುಗ್ಧದೋಷಾ

ಕರನಿಂ ವಕ್ರತ್ವಮಂ, ದುಶ್ಚ್ಯವನನ ಹಯದಿಂ ವೇಗಮಂ ತಾಳ್ದಿನೀರಾ

ಕರದಿಂದೆಳ್ತಂದಳಂತಾ ಸಿರಿ ಸಹಭವರಂ ಪೋಲ್ವುದೇಂ ಚೋದ್ಯಮಾಯ್ತೋ ?

ಮೇಲಿನದು 'ಮಹಾಸ್ರಗ್ದರೆ' ಎಂಬ ಇಪ್ಪತ್ತೆರಡು ಅಕ್ಷರಗಳ ಸಮಪಾದ ವೃತ್ತವಾಗಿದೆ. ಇದರ ಪ್ರತಿಪಾದದಲ್ಲಿ ಸ, ತ, ತ, ನ, ಸ, ರ, ರ ಎಂಬ ಏಳು ಗಣಗಳೂ, ಒಂದು ಗುರುವೂ ಇರುವುವು. ಇದನ್ನು ಸೂತ್ರರೂಪವಾಗಿ 'ಸತತಂ



ನಂಸಂರರಂಗಂ ನೆರೆದೆಸೆಯೆ ಮಹಾಸ್ರಗ್ದರಾ ವೃತ್ತ ಮಕ್ಕುಂ' ಎನ್ನುವರು.

ಮೇಲೆ ಹೇಳಿರುವ ಆರು ಬಗೆಯ ವೃತ್ತಗಳು ಹಳಗನ್ನಡ, ನಡುಗನ್ನಡ ಭಾಷೆಗಳ ಕಾವ್ಯಗಳಲ್ಲಿ ತುಂಬಾ ಪ್ರಚಾರದಲ್ಲಿದ್ದುದು ಕಂಡು ಬರುತ್ತದೆ.

## ಮಾತ್ರಾಗಣ ವೃತ್ತಗಳು

ಕನ್ನಡ ಛಂದಸ್ಸಿನ ಪದ್ಯಗಳೆಲ್ಲ ಮಾತ್ರಾಗಣ ವೃತ್ತಗಳೇ ಆಗಿವೆ. ದ್ವಿಪದಿ, ಚೌಪದಿ, ಷಟ್ಪದಿ, ರಗಳೆ ಮೊದಲಾದುವುಗಳು ಕನ್ನಡ ಭಾಷೆಯ ಛಂದಸ್ಸುಗಳಾಗಿವೆ. ಬ್ರಹ್ಮ, ವಿಷ್ಣು ರುದ್ರಗಣಗಳೆಂಬ ಕನ್ನಡದ ಅಂಶಗಣಗಳೇ ರೂಪಾಂತರ ಹೊಂದಿ ಈ ಮಾತ್ರಾಗಣ ನಿಯಮವುಳ್ಳವುಗಳಾದುವು. ಈಗ ತ್ರಿಪದಿಗಳು, ಸಾಂಗತ್ಯ, ಪಿರಿಯಕ್ಕರ, ದೊಡ್ಡಕ್ಕರ ಮೊದಲಾದುವುಗಳು ಅಂಶಗಣ ವೃತ್ತಗಳಾಗಿಯೇ ಉಳಿದಿವೆ. ಇವುಗಳನ್ನು ಕೂಡ ಕೆಲವರು ಮಾತ್ರಾಗಣ ನಿಯಮದ ಪದ್ಯಗಳೆಂದು ತಿಳಿಯುವರು.

## ಷಟ್ಪದಿಗಳು

ಷಟ್ಪದಿಗಳು ಆರು ಪಾದಗಳುಳ್ಳ ಮಾತ್ರಾವೃತ್ತಗಳು. ಇವುಗಳ ಒಂದು, ಎರಡನೆಯ, ನಾಲ್ಕು ಐದನೆಯ ಪಾದಗಳೂ, ಮೂರನೆಯ ಮತ್ತು ಆರನೆಯ ಪಾದಗಳೂ ಸಮಾನವಾಗಿವೆ. ಇದು ಅರ್ಧಸಮವೃತ್ತ. ಮೂರನೆಯ ಮತ್ತು ಆರನೆಯ ಪಾದಗಳಲ್ಲಿ ಒಂದೆರಡನೆಯ ಪಾದಗಳ ಒಂದೂವರೆ ಪಾಲಷ್ಟು ಗಣಗಳೂ, ಒಂದು ಗುರುವೂ ಇರುವುವು. ಷಟ್ಪದಿಗಳಲ್ಲಿ ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ ಮತ್ತು ವಾರ್ಧಕಗಳೆಂದು ಆರು ವಿಧಗಳಿವೆ. ಛಂದೋಂಬುಧಿಕಾರನು ಒಂದು ಕಂದಪದ್ಯದಲ್ಲಿ ಈ ಆರು ಷಟ್ಪದಿಗಳ ಹೆಸರುಗಳನ್ನು, ಅವುಗಳ ಪ್ರಥಮಪಾದದ ಮಾತ್ರೆಗಳ ಸಂಖ್ಯೆಯನ್ನೂ ನಿರೂಪಿಸಿರುವನು.

ಉದಾ: ಶರ, ಕುಸುಮ, ಭೋಗ, ಭಾಮಿನಿ,

ಪರಿವರ್ಧಿನಿ, ವಾರ್ಧಕಂಗಳೆಂದಾರುತೆರಂ

| 8 | 10 | 12 | 14 | 16 |
|---|---|---|---|---|
| ಕರಿ, | ದಶ, | ರವಿ, | ಮನು, | ರಾಜರ್ |
|  | 20 |  |  |  |
| ಬರೆ | ವಿಂಶತಿ ಮಾತ್ರೆಯಿಂದ ಷಟ್ಪದಿ ನಡೆಗುಂ |  |  |  |

ನಾಗವರ್ಮನ ಪ್ರಕಾರ ಷಟ್ಪದಿಯ ಲಕ್ಷಣ ಈ ರೀತಿಯಿದೆ.

ಮಂದರ ಧರಗಣ
ಮೊಂದಿರೆ ಕಡೆಯೊಳ್
ಕುಂದದೆ ನೆಲಸುಗೆ ಮದನಹರಂ
ಇಂದು ನಿಭಾನನೆ
ಮುಂದಣ ತೆಜಿನೀ
ಯಂದಮೆಯಾಗಲೆ ಷಟ್ಪದಿ ಕೇಳ್

ಇದು ಅಂಶಗಣ ಸಹಿತವಾಗಿದೆ.

## ಭಾಮಿನೀ ಷಟ್ಪದಿ

| | | | |
|---|---|---|---|
| _ U | U U _ | U U U | UUUU |
| ಆರೊ | ಡನೆ ಕಾ | ದುವೆನು | ಕೆಲಬರು |

| | | | |
|---|---|---|---|
| _ U | UU UU | _ U | UU UU |
| ಹಾರು | ವರು ಕೆಲ | ರಂತ | ಕ ನ ನೆರೆ |

| | | | | | | |
|---|---|---|---|---|---|---|
| _ U | U U UU | UUU | U UUU | UUU | _ UU | _ |
| ಯೂರ | ವರು ಕೆಲ | ರಥಮ | ಕುಲದಲಿ | ಜನಿಸಿ | ಬಂದವ | ರು |



| | | | |
|---|---|---|---|
| _ U | _ UU | UUU | _ _ |
| ವೀರ | ರೆಂಬವ | ರಿವರು | ಮೇಣಿ |

| | | | |
|---|---|---|---|
| _ U | UU _ | UUU | _ U U |
| ನ್ನಾರ | ಹೆಸರುಂ | ಟವರೊ | ಳೆಂದು ಕು |

| | | | | | | |
|---|---|---|---|---|---|---|
| _ U | UU _ | UUU | UUUU | _ U | UUUU | _ |
| ಮಾರ | ನೆಣಗೊ | ಬ್ಬನಲಿ | ನುಡಿದನು | ಹೆಂಗ | ಳಿದಿರಿನ | ಲಿ |

ಭಾಮಿನಿ ಷಟ್ಪದಿಯ ಮೊದಲನೆಯ ಪಾದದಲ್ಲಿ ಮೂರು ನಾಲ್ಕು, ಮೂರು ನಾಲ್ಕು ಮಾತ್ರೆಗಳ ಒಟ್ಟು ನಾಲ್ಕು ಗಣಗಳಿವೆ. ಎರಡನೆಯ ಪಾದವೂ ಹೀಗೆಯೇ ಇದೆ. ಮೂರನೆಯ ಪಾದದಲ್ಲಿ ಮೂರು ನಾಲ್ಕು ಮಾತ್ರೆಗಳ ಒಟ್ಟು ಆರು ಗಣಗಳು ಮತ್ತು ಒಂದು ಗುರುವು ಇದ್ದು ಒಟ್ಟು 23 ಮಾತ್ರೆಗಳಿವೆ. ಉತ್ತರಾರ್ಧವೂ ಹೀಗೆಯೇ ಇದ್ದು ಇಡೀ ಪದ್ಯದಲ್ಲಿ ಒಟ್ಟು 102 ಮಾತ್ರೆಗಳಿವೆ.

## ವಾರ್ಧಕ ಷಟ್ಪದಿ

| | | | |
|---|---|---|---|
| _U _ | UU _ U | _ U _ | UUUUU |
| ಏನನಾಂ | ಬೆಸಗೊಂಡ | ಡೇನನಾ | ಡುವಿರಿಳೆಯ |

| | | | |
|---|---|---|---|
| _ _ U | U U _U | _ _ U | UU _ U |
| ಭೂನಾಥ | ರೊಳು ಸತ್ಯ | ರಾರೆಂದು | ಬೆಸಗೊಂಡ |

| | | | | | |
|---|---|---|---|---|---|
| _ _U | _ U _ | _UUU | U UUUU | _ U UU | UU |
| ಡೀ ನಾಡ | ಮಾತು ಮಾ | ರುತ್ತರವೆ | ಮುನಿಗಳಿರ | ಎಂದು ಸುರ | ಪತಿ |

| | |
|---|---|
| U U U | _ |
| ನುಡಿಯ | ಲು |

| | | | |
|---|---|---|---|
| _ _ U | _ U_ | _ U _ | _U _ |
| ಏನೆಂದ | ಡಂ ಹರಿ | ಶ್ಚಂದ್ರನೇ | ಸತ್ಯಸಂ |

| | | | |
|---|---|---|---|
| _ U _ | _ U_ | _ U U U | _U _ |
| ಧಾನನೆಂ | ದಾ ವಸಿ | ಷ್ಠಂ ನುಡಿಯ | ಲಲ್ಲಿ ನಿ |

| | | | | | | |
|---|---|---|---|---|---|---|
| _ U UU | _ UUU | _U _ | UUU _ | _ U U U | _ _ U | _ |
| ಲ್ಲಾನರಿಯ | ಲಾ ನೃಪನ | ಸತ್ಯವಂ | ತವನ ಮಾ | ತೀ ಸಭೆಯೊ | ಳೀಕೆಂದ | ನು |

ವಾರ್ಧಕ ಷಟ್ಪದಿಯ ಮೊದಲನೆಯ ಪಾದದಲ್ಲಿ ಐದೈದು ಮಾತ್ರೆಯ ನಾಲ್ಕು ಗಣಗಳಿವೆ. ಎರಡನೆಯ ಪಾದವು ಹೀಗೆಯೇ ಇದೆ. ಮೂರನೆಯ ಪಾದದಲ್ಲಿ ಐದು ಮಾತ್ರೆಯ ಆರು ಗಣಗಳೂ, ಒಂದು ಗುರುವೂ ಇವೆ. ಉತ್ತರಾರ್ಧವೂ ಹೀಗೆಯೇ ಇದ್ದು ಇಡೀ ಪದ್ಯದಲ್ಲಿ ಒಟ್ಟು **144** ಮಾತ್ರೆಗಳಿವೆ.

## ರಗಳೆಗಳು

ಸಮಾನವಾದ ಮಾತ್ರಾಗಣಗಳುಳ್ಳ ಬಹುಪಾದಗಳಿಂದ ಕೂಡಿದ ವೃತ್ತವು ರಗಳೆಯೆನಿಸುವುದು. ಇದರಲ್ಲಿ ಪ್ರಾಸವು ಇತರ ವೃತ್ತಗಳಲ್ಲಿರುವಂತೆ ನಿಯತವಾದ ಸ್ಥಾನದಲ್ಲಿರುವುದಿಲ್ಲ, ಪಾದದ ಆದಿಯಲ್ಲಾಗಲಿ, ಮಧ್ಯದಲ್ಲಾಗಲಿ, ಅಂತ್ಯದಲ್ಲಾಗಲಿ, ಆದಿಮಧ್ಯಾಂತಗಳಲ್ಲಾಗಲಿ ಪ್ರಾಸಗಳಿರುತ್ತವೆ. ಮಂದಾನಿಲ, ಲಲಿತ ಮತ್ತು ಉತ್ಸಾಹಗಳೆಂಬ ಮೂರು ವಿಧದ ರಗಳೆಗಳು ಹಳೆಯ ಕಾವ್ಯಗಳಲ್ಲಿ ಪ್ರಸಿದ್ಧವಾಗಿವೆ.

## ಮಂದಾನಿಲ ರಗಳೆ

| | | | | |
|---|---|---|---|---|
| **4** | **4** | **4** | **4** | **16** |
| _ U U | U U _ | _ U U | _ _ | |
| ಹಾವುಕ | ಡಿಯೆಹಾ | ಎಂದೆಯೊ | ಕಂದಾ | |

ಸಾವಾಗವ್ವಾ ಎಂದೆಯೊ ಕಂದಾ

ಹಾಡುವ ಬಾಯೊಳು ಸುಣ್ಣವ ಹೊಯ್ದೇ

ನೋಡುವ ಕಣ್ಣೊಳು ಮಣ್ಣನು ಹೊಯ್ದೇ ॥



ಮಂದಾನಿಲ ರಗಳೆಯಲ್ಲಿ ನಾಲ್ಕು ನಾಲ್ಕು ಮಾತ್ರೆಗಳಿರುವ ನಾಲ್ಕು ಗಣಗಳಿವೆ. ಈ ಪದ್ಯದಲ್ಲಿ ಆದಿ ಮಧ್ಯಾಂತ್ಯ ಪ್ರಾಸಗಳಿವೆ. ರಗಳೆಯಲ್ಲಿ ಬರೆದ ಹಳೆಯ ಕವಿಗಳು ಪ್ರಾಸ ನಿಯಮವನ್ನು ಮೀರಿಲ್ಲ. ಇದರಲ್ಲಿ ಇಂತಿಷ್ಟೇ ಪಾದಗಳಿರಬೇಕೆಂಬ ನಿಯಮವಿಲ್ಲ. ಪ್ರಾಸಕ್ಕಾಗಿ ಎರಡೆರಡು ಪಾದಗಳನ್ನು ಒಂದು ಅಂಶವಾಗಿ ಗಮನಿಸಲಾಗುತ್ತದೆ.

## ಲಲಿತ ರಗಳೆ

| | | | | |
|---|---|---|---|---|
| **5** | **5** | **5** | **5** | **20** |
| UU _ U | _ U _ | _ U _ | UU_U | |
| ಶಿವನೂರು | ದಂಡದಿಂ | ದಾದಬಾ | ಳೆಗಳಿಲ್ಲಿ | |

ಶಿವನಕರ ನಖದಿಂದಲಾದಕೇತಕಿಯಿಲ್ಲಿ

ಹರನಚರಣಂ ಗಂಡು ಬೆಳೆದಸರಸಿಜವಿಲ್ಲಿ

ಹರಕಾಂತಿಯಿಂದಾದ ವಿಮಳ ಸರಸಿಗಳಿಲ್ಲಿ

ಲಲಿತ ರಗಳೆಯಲ್ಲಿಯೂ ಇಂತಿಷ್ಟೇ ಚರಣಗಳಿರಬೇಕೆಂಬ ನಿಯಮವಿಲ್ಲ. ಇದರ ಪ್ರತಿಪಾದದಲ್ಲಿ ಐದು ಮಾತ್ರೆಯ ನಾಲ್ಕು ಗಣಗಳು ಇರುತ್ತವೆ.

## ಉತ್ಸಾಹ ರಗಳೆ

ನಾಗವರ್ಮನು ಛಂದೋಂಬುಧಿಯಲ್ಲಿ ಉತ್ಸಾಹ ರಗಳೆಗೆ ಪ್ರತಿಪಾದದಲ್ಲಿ ಮೂರು ಮಾತ್ರೆಯ ಎಂಟು ಗಣಗಳಿದ್ದು **24** ಮಾತ್ರೆಗಳಿವೆಯೆಂದು ಹೇಳಿರುವನು.

ಉದಾ :

| | | | | | | | | |
|---|---|---|---|---|---|---|---|---|
| **3** | **3** | **3** | **3** | **3** | **3** | **3** | **3** | **24** |
| _ U | _U | _ U | U U U | _ U | _U | U _ | U U U | |
| ಅಟ್ಟ | ಅನ್ನ | ವುಣ್ಣ | ಬಿಡನು | ಕೊಟ್ಟ | ಸಾಲ | ಕೇಳ | ಬಿಡನು | |

ಪೆಟ್ಟಿಯೊಳಿಹ ಚಿನ್ನ ದೊಡವೆ ತೊಟ್ಟೆ ನೆನಲು ಯಮನು ಬಿಡನು.

ಆದರೆ ಇದು ಮೂರು ಮಾತ್ರೆಯ ನಾಲ್ಕು ಗಣಗಳಿರುವ ಪಾದವಾಗಿದೆಯೆಂದು ಆಧುನಿಕರ ಅಭಿಪ್ರಾಯ. ಇದಕ್ಕೆ ಉದಾಹರಣೆಯಾಗಿ ಅವರು ಈ ಕೆಳಗಿನ ಪದ್ಯವನ್ನು ಉದಾಹರಿಸುವರು.

| 3 | 3 | 3 | 3 | 12 |
|---|---|---|---|---|
| U U U | _ U | _ U | _ U | |
| ಕುಳಿರ್ವ | ಪೂಗೊ | ಳಂಗ | ಳಲ್ಲಿ | |

| 3 | 3 | 3 | 3 | 12 |
|---|---|---|---|---|
| UUU | _ U | _ U | _ U | |
| ತಳಿರ | ಕಾವ | ಣಂಗ | ಳಲ್ಲಿ | |

ತುಂಬಿ ವಿಂಡಿ ನಂತೆ ಪಾಡಿ

ಜಕ್ಕ ವಕ್ಕಿ ಯಂತೆ ಕೂಡಿ

## ಸರಳ ರಗಳೆ

| 5 | 5 | 5 | 5 | 20 |
|---|---|---|---|---|
| _ _ U | UUUUU | _ _U | UU_U | |
| ಬಾಕಂದ | ಹಿರಿಗುವರ | ಬಾರೆನ್ನ | ಬಿಗಿದಪ್ಪು | |

ಉಪ್ಪನ್ನ ವಿತ್ತವಗೆ ತಪ್ಪೆಣಿಸ ದಿರುಮಗನೆ

ಹೇಡಿಯೆನೆ ಹಿಂದುಳಿಯದಿರುರಣದಿ ಬೇಡುವೆಂ

ಚಂದ್ರವಂಶದ ಕುಡಿಯ ಕಾಪಾಡು, ತೊಟ್ಟಶರ

ಮಂಬರಳಿ ಮರೆತುಬಿಡು, ನಿನಗಕ್ಕೆ ಮಂಗಳಂ

ಮೇಲಿನದು ಸರಳ ರಗಳೆ. ಇದರ ಪ್ರತಿಪಾದದಲ್ಲಿ ಐದೈದು ಮಾತ್ರೆಗಳ ನಾಲ್ಕು ಗಣಗಳಿವೆ. ಪಾದ ಮತ್ತು ಪ್ರಾಸದ ನಿಯಮಗಳು ಇಲ್ಲಿಲ್ಲ.



## ಕಂದ ಪದ್ಯ

ಯಾವ ಹಳೆಯ ಕಾವ್ಯವನ್ನು ತೆಗೆದು ನೋಡಿದರೂ ಅದರಲ್ಲಿ ಕಂದಗಳ ಸಂಖ್ಯೆ ಇತರ ವೃತ್ತಗ್ಳಗಿಂತ ಅಧಿಕ. ಹಾಗೆಯೇ ಅದೊಂದು ಹಾಡುಗಳ ಸಾಲಿಗೆ ಸೇರಿದ ಬಂಧ. ಇದು ಮಾತ್ರಾ ವೃತ್ತಗಳ ಮತ್ತು ವರ್ಣವೃತ್ತಗಳ ಮಿಲನದಿಂದಾದ ಬಂಧವಾಗಿದೆ.

ಚತುರ್ಮಾತ್ರಾ ಗಣವು ಒಂದು ಮೂರನೆಯ ಪಾದಗಳಲ್ಲಿ ಮೂರು ಮೂರೂ, ಎರಡು ನಾಲ್ಕನೆಯ ಪಾದಗಳಲ್ಲಿ ಐದೈದೂ ಇರಬೇಕು. ಪೂರ್ವೋತ್ತರಾರ್ಧಗಳ ವಿಷಮಾಸ್ಥಾನಗಳಲ್ಲಿ ಮಧ್ಯ ಗುರುವುಳ್ಳ ಗಣಗಳು ಬರಕೂಡದು. ಆರನೆಯ ಸ್ಥಾನದಲ್ಲಿ ಜಗಣ (U _ U) ವಾಗಲಿ, ನಾಲ್ಕು ಲಘುವುಳ್ಳ ಗಣ (UUU) ವಾಗಲಿ ಬಂದು ಮೊದಲಿನ ಹ್ರಸ್ವದ ಮುಂದೆ ಯತಿ ಇರಬೇಕು. ಎಂಟನೆಯ ಸ್ಥಾನಗಳಲ್ಲಿ ಅಂತ್ಯ ಗುರುವುಳ್ಳ ಗಣ (U U _, _ _) ಗಳೇ ಬರಬೇಕು.

| | | |
|---|---|---|
| _ U U | U _ U | _ U U |
| ಇಂದು ಚ | ತುರ್ದಶಿ | ಯಪ್ಪುದ |

| | | | | |
|---|---|---|---|---|
| _ _ | _ _ | U _U | _ _ | _ _ |
| ಱಿಂದಂ | ಕೈಲಾ | ಸವಾಸಿ | ಯಂ ಕಾ | ಣಲ್ಕಾ |

| | | |
|---|---|---|
| _ UU | UU _ | U _ U |
| ನಂದದೆ | ದಿವದಿಂ | ದಿರ್ಬರು |

| | | | | |
|---|---|---|---|---|
| _ _ | U U_ | U _ U | _ _ | UU _ |
| ಮೊಂದಾ | ಗಿ ಬರು | ತ್ತುಮಿರ್ಪು | ದುಂ ತತ್ | ಕ್ಷಣದೊಳ್ |

## ಅಂಶಗಣ ವೃತ್ತಗಳು

ಅಂಶಗಣಗಳ ಆಧಾರದಲ್ಲಿ ರಚಿತವಾದ ವೃತ್ತಗಳೇ ಅಂಶಗಣ ವೃತ್ತಗಳು. ಇವು ದೇಶೀ ವೃತ್ತಗಳಾಗಿವೆ. ತ್ರಿಪದಿ, ಸಾಂಗತ್ಯ, ಅಕ್ಕರ, ಮದನವತಿ, ಅಕ್ಕರಿಕೆ, ಛಂದೋವತಂಸ ಮೊದಲಾದುವು ಅಂಶಗಣ ವೃತ್ತಗಳು.

**ತ್ರಿಪದಿ :** ತ್ರಿಪದಿಗಳಲ್ಲಿ ಸರ್ವಜ್ಞನ ತ್ರಿಪದಿಗಳು ಪ್ರಖ್ಯಾತವಾಗಿವೆ. ತ್ರಿಪದಿಯಲ್ಲಿ ಮೂರು ಪಾದಗಳಿವೆ. ತ್ರಿಪದಿಯ ಲಕ್ಷಣವನ್ನು ನಾಗವರ್ಮನು ಹೀಗೆ ಹೇಳಿರುವನು.

| ವಿಷ್ಣು | ವಿಷ್ಣು | ವಿಷ್ಣು | ವಿಷ್ಣು |
|---|---|---|---|
| UU U _ | U UU _ | UUU_ | _ U _ |
| ಬಿಸರುಹೋ | ದ್ಭವಗಣಂ | ರಸದಶ | ಸ್ಥಾನದೊಳ್ |

| ವಿಷ್ಣು | ಬ್ರಹ್ಮ | ವಿಷ್ಣು | ವಿಷ್ಣು |
|---|---|---|---|
| UU U U | _ U | U U U _ | U U U U |
| ಬಿಸರುಹ | ನೇತ್ರ | ಗಣಮೆಬ | ರ್ಕುಳಿದುವು |

| ವಿಷ್ಣು | ಬ್ರಹ್ಮ | ವಿಷ್ಣು |
|---|---|---|
| U U U U | _ _ | U U U U |
| ಬಿಸರುಹ | ನೇತ್ರೆ | ತ್ರಿಪದಿಗೆ |

ಮೇಲಿನ ತ್ರಿಪದಿಯಲ್ಲಿ ಪ್ರಥಮ ಪಾದದಲ್ಲಿ ನಾಲ್ಕು ವಿಷ್ಣುಗಣಗಳೂ ಎರಡನೆಯ ಪಾದದ ಎರಡನೆಯ ಸ್ಥಾನದಲ್ಲಿ ಒಂದು ಬ್ರಹ್ಮಗಣವೂ ಮೂರನೆಯ ಪಾದದ ಎರಡನೆಯ ಸ್ಥಾನದಲ್ಲಿ ಒಂದು ಬ್ರಹ್ಮಗಣವೂ ಬಂದು ಉಳಿದ ಎಲ್ಲ ಸ್ಥಾನಗಳಲ್ಲಿ ವಿಷ್ಣುಗಣಗಳೇ ಬಂದಿವೆ.

| | | | | |
|---|---|---|---|---|
| 1 ನೇ ಪಾದ | ವಿ | ವಿ | ವಿ | ವಿ |
| 2 ನೇ ಪಾದ | ವಿ | ಬ್ರ | ವಿ | ವಿ |
| 3 ನೇ ಪಾದ | ವಿ | ಬ್ರ | ವಿ | ವಿ |

## ಸಾಂಗತ್ಯ

ಸಾಂಗತ್ಯವು ಅರ್ಧಸಮ ವೃತ್ತವಾಗಿದೆ. ಇದಕ್ಕೆ ನಾಲ್ಕು ಪಾದಗಳಿವೆ. ಪೂರ್ವಾರ್ಧವು ಉತ್ತರಾರ್ಧಕ್ಕೆ ಸಮಾನವಾಗಿದೆ. ಮೊದಲನೆಯ ಪಾದದಲ್ಲಿ 4 ಅಂಶಗಳೂ ಎರಡನೆಯ ಪಾದದಲ್ಲಿ 3 ಅಂಶಗಳೂ ಇವೆ.



| ವಿ | ವಿ | ವಿ | ವಿ |
|---|---|---|---|
| _UU | _ U _ | UU_ U | _UU |
| ಕಬ್ಬಿಗ | ರೋದುಗ | ಬ್ಬವಹಾಡು | ಗಬ್ಬವ |

| ವಿ | ವಿ | ಬ್ರ |
|---|---|---|
| _UU | U U U U | U U U |
| ಕಬ್ಬದೊ | ಳೊರೆವರಿ | ವೆರಡು |

ಕಬ್ಬಿನಂ ತಿರಬೇಕು ಬಿದಿರಂತೆ ರಚಿಸಲೇ

ಕಬ್ಬೆಹೇಳೆಲೆಸರಸ್ವತಿಯೆ

ಇದರ ಒಂದನೆಯ ಪಾದದಲ್ಲಿ 4 ವಿಷ್ಣುಗಣಗಳಿವೆ. ಎರಡನೆಯ ಪಾದದಲ್ಲಿ 2 ವಿಷ್ಣುಗಣಗಳೂ, 1 ಬ್ರಹ್ಮಗಣವೂ ಇವೆ. ವಿಷ್ಣುಗಣಕ್ಕೆ ಬದಲಾಗಿ ಬ್ರಹ್ಮ ಗಣವೂ ಬರಬಹುದು. ಇದು ಹಾಡಿನ ವೃತ್ತ.

## ಅಲಂಕಾರ

ಕಾವ್ಯಗಳಲ್ಲಿ ರಸ, ಧ್ವನಿ ಮತ್ತು ಅಲಂಕಾರಗಳು ಕಾವ್ಯಾನಂದವನ್ನು ಉಂಟುಮಾಡುತ್ತವೆ. ಕಾವ್ಯಗಳಲ್ಲಿ ಶಬ್ದ ಅರ್ಥ ಇವುಗಳ ವೈಚಿತ್ರ್ಯದಿಂದ ಉಂಟಾಗುವ ಸೌಂದರ್ಯಕ್ಕೆ ಅಲಂಕಾರವೆಂದು ಹೆಸರು. ಮೊದಲು ಕಾವ್ಯಗಳು ಹುಟ್ಟಿ ಅನಂತರ ಕಾವ್ಯಗಳ ಲಕ್ಷಣಗಳನ್ನು ತಿಳಿಸುವ ಅಲಂಕಾರ ಶಾಸ್ತ್ರ ಹುಟ್ಟಿರಬೇಕು. ನಮ್ಮ ದೇಶದ ಪ್ರಾಚೀನ ಭಾಷೆಯಾದ ಸಂಸ್ಕೃತದಲ್ಲಿರುವ ಪ್ರಾಚೀನ ಕಾವ್ಯಗಳಲ್ಲಿ ರಸಕ್ಕೆ ಹೆಚ್ಚಿನ ಮಹತ್ವವಿದ್ದು ಅಲಂಕಾರಗಳ ಬಳಕೆ ಅಷ್ಟಿರಲಿಲ್ಲ. ಆದರೆ ಹತ್ತನೇ ಶತಮಾನದ ಬಳಿಕ ಕಾವ್ಯಗಳಲ್ಲಿ ಅಲಂಕಾರಗಳ ಪ್ರಾಶಸ್ತ್ಯ ಹೆಚ್ಚಾಯಿತು. ಅವುಗಳ ಸಂಖ್ಯೆ ಹೆಚ್ಚುತ್ತಾ ಹೋಗಿ ನೂರಕ್ಕೂ ಮೀರಿವೆ. ಸಂಸ್ಕೃತದ ಆಲಂಕಾರಿಕರಲ್ಲಿ ಭರತ, ದಂಡಿ, ರುದ್ರಟ, ಭಾಮಹ, ವಾಮನ, ರಾಜಶೇಖರ ಮೊದಲಾದವರು ಪ್ರಮುಖರು.

ಕನ್ನಡದಲ್ಲಿ ಬಂದಿರುವ ಅಲಂಕಾರ ಶಾಸ್ತ್ರಗ್ರಂಥಗಳಿಗೆ ಸಂಸ್ಕೃತದ ಅಲಂಕಾರ ಶಾಸ್ತ್ರಗ್ರಂಥಗಳೇ ಆಧಾರವೆನ್ನಬಹುದು. ಅವುಗಳಲ್ಲಿ ಶ್ರೀವಿಜಯನ (ಕ್ರಿ.ಶ.

814-877) ಕವಿರಾಜಮಾರ್ಗವೇ ಪ್ರಾಚೀನವಾದದ್ದು. ನಾಗವರ್ಮನ (ಕ್ರಿ.ಶ. 1145) ಕಾವ್ಯಾವಲೋಕನ, ಮಾಧವನ (ಕ್ರಿ.ಶ. 1500) ಮಾಧವಾಲಂಕಾರ, ತಿರುಮಲಾರ್ಯನ (ಕ್ರಿ.ಶ. 1700) ಅಪ್ರತಿಮ ವೀರಚರಿತೆ ಮುಂತಾದ ಹಲವು ಅಲಂಕಾರ ಗ್ರಂಥಗಳು ಕನ್ನಡದಲ್ಲಿ ಬಂದಿವೆ. ಅಲಂಕಾರಗಳಲ್ಲಿ ಶಬ್ದಾಲಂಕಾರ ಮತ್ತು ಅರ್ಥಾಲಂಕಾರ ಎಂಬುದಾಗಿ ಎರಡು ವಿಧಗಳಿವೆ. ಶಬ್ದ ಚಮತ್ಕಾರದಿಂದ ಉಂಟಾಗುವ ಸೌಂದರ್ಯಕ್ಕೆ ಶಬ್ದಾಲಂಕಾರವೆಂದೂ, ಅರ್ಥ ಚಮತ್ಕಾರದಿಂದ ಉಂಟಾಗುವ ಸೊಬಗಿಗೆ ಅರ್ಥಾಲಂಕಾರವೆಂದೂ ಹೆಸರು. ನಾಗವರ್ಮನು ತನ್ನ 'ಕಾವ್ಯವಲೋಕನ'ದಲ್ಲಿ ಕಾವ್ಯವೆಂಬ ಹೆಣ್ಣಿಗೆ ಶಬ್ದಾಲಂಕಾರ ಮತ್ತು ಅರ್ಥಾಲಂಕಾರಗಳು ಎರಡು ವಿಧದ ತೊಡಿಗೆಗಳಿರುವಂತೆ ಎಂದಿದ್ದಾನೆ. ಅರ್ಥಾಲಂಕಾರಗಳು ನೈಸರ್ಗಿಕವಾದ ಸೌಂದರ್ಯವನ್ನು ಹೆಚ್ಚಿಸುವ ಬಂಗಾರದ ಆಭರಣಗಳಾದರೆ ಶಬ್ದಾಲಂಕಾರಗಳು ಸದ್ದಿಗಾಗಿ ಕಟ್ಟಿಕೊಂಡಿರುವ ಗೆಜ್ಜೆಗಳಂತೆ ಎನ್ನಬಹುದು.

## ಶಬ್ದಾಲಂಕಾರಗಳು

ಶಬ್ದಾಲಂಕಾರಗಳ ಸಂಖ್ಯೆ ಅರ್ಥಾಲಂಕಾರಗಳ ಸಂಖ್ಯೆಗಿಂತ ಯಾವಾಗಲೂ ಕಡಿಮೆ. ಅದರಲ್ಲಿಯೂ ಪ್ರಾಚೀನರಿಗಿಂತ ರಸ ಪ್ರಾಧಾನ್ಯವಾದಿಗಳಾದ ನವೀನರು ಅವುಗಳನ್ನು ಪ್ರತಿಪಾದಿಸಿರುವುದು ಕಡಿಮೆ. ಏಕೆಂದರೆ ಅವುಗಳಿಂದ ಒಂದು ವಿಧವಾದ ವೈಚಿತ್ರ್ಯ ಸಂಪಾದನೆಯಾಗುವುದಾದರೂ ಅದರ ಮೇಲೆಯೇ ಗಮನವು ನಿಂತು ರಸಾಸ್ವಾದನಕ್ಕೆ ಅಡ್ಡಿಯಾಗಿ ಕಾವ್ಯೋದ್ದೇಶಕ್ಕೆ ಭಂಗ ಬರಬಹುದು.

ಶಬ್ದಾಲಂಕಾರಗಳಲ್ಲಿ ಅನುಪ್ರಾಸ, ಯಮಕ, ಚಿತ್ರಕವಿತ್ವ ಎಂದು ಮುಖ್ಯವಾಗಿ ಮೂರು ವಿಧಗಳಿವೆ.

**1. ಅನುಪ್ರಾಸ :** ಅನುಪ್ರಾಸವನ್ನು ವೃತ್ಯನುಪ್ರಾಸ ಮತ್ತು ಛೇಕಾನುಪ್ರಾಸ ಎಂದು ಎರಡು ವಿಭಾಗ ಮಾಡುತ್ತಾರೆ. ಒಂದು, ಎರಡು, ಮೂರು ಅಕ್ಷರಗಳು ಮತ್ತೆ ಮತ್ತೆ ಪುನರಾವರ್ತಿತವಾದರೆ ವೃತ್ಯನುಪ್ರಾಸವೆಂದೂ, ಎರಡೆರಡು ಅಕ್ಷರಗಳು ಜತೆ ಜತೆಯಾಗಿ ಹಲವು ಕಡೆ ಬಂದರೆ ಛೇಕಾನುಪ್ರಾಸವೆಂದೂ ಹೇಳುತ್ತಾರೆ.



i) ವೃತ್ಯನುಪ್ರಾಸ

ಉದಾ : ಎಳಗಿಳಿಗಳ ಬಳಗಂ ಗಳ
ಗಳ ನಿಳಿತಂದೆಳಸಿ ಬಳಸಿ ಸುಳಿದೊಳವುಗುತಂ ।
ನಳನಳಿಸಿ ಬೆಳೆದು ಕಳಿಯದ
ಕಳವೆಯ ಕಣೆಶಂಗಳಂ ಕರಂ ಖಂಡಿಸುಗುಂ ॥

ಇಲ್ಲಿ **ಗ, ಳ, ಕ** ಅಕ್ಷರಗಳು ಪದೇ ಪದೇ ಬಂದಿವೆ.

ii) ಛೇಕಾನುಪ್ರಾಸ

ಉದಾ : ಕೆಲದೊಳ್ ಪುಳಿಂದಿಯಿರೆ ಪೆ
ರ್ಬುಲಿ ಬಂದೊಡಮಂಜನಳ್ಕ**ನೋಡಂ ನೋಡಂ** ।
ಚಲದಿಂ ಕಾಡಂ ಕಾಡಂ
ಸಲೆ ಪಸಿವಂ ಮಱೆದು ತಣಿದು **ಬೇಡಂ ಬೇಡಂ** ॥

ಇಲ್ಲಿ ನೋಡಂ ನೋಡಂ, ಕಾಡಂ ಕಾಡಂ, ಬೇಡಂ ಬೇಡಂ, ಎಂಬಂತೆ ಪದಗಳು ಬಂದಿವೆ.

**2. ಯಮಕ :** ಮೂರು ಅಥವಾ ಅದಕ್ಕಿಂತ ಹೆಚ್ಚಿನ ಅಕ್ಷರಗಳುಳ್ಳ ಪದಗಳು ಒಂದು ಪದ್ಯದ ಆದಿ, ಮಧ್ಯ ಹಾಗೂ ಅಂತ್ಯ ಸ್ಥಾನಗಳಲ್ಲಿ ನಿಯತವಾಗಿ ಮತ್ತೆ ಮತ್ತೆ ಬಂದರೆ ಯಮಕಾಲಂಕಾರವಾಗುತ್ತದೆ.

ಉದಾ : **ಎಳೆವಾಸೆ** ತೊಡರ್ದುದೆನೆ ಮಿಸು
**ಪೆಳೆವಾಸೆ**ಯದೆಸೆಯೆ ನಿಂದಳಂ ಕೈವಿಡಿದೊ ।
**ಳ್ದೆಳೆವಾಸೆ**ಯಾಂತನಂಬುಜ
**ದೆಳೆವಾಸೆ**ಡೆಗೊಂಡ ಪುಳಿನದೆಡೆಗವನೀಶಂ ॥

ಇಲ್ಲಿ **ಎಳೆವಾಸೆ** ಎಂಬ ಪದವು ನಿಯತವಾಗಿ ಮತ್ತೆ ಮತ್ತೆ ಬಂದಿದೆ.

**3. ಚಿತ್ರಕವಿತ್ವ :** ಅಕ್ಷರಗಳನ್ನೂ ಪದಗಳನ್ನೂ ಕುಶಲತೆಯಿಂದ ಆರಿಸಿ ಜೋಡಿಸಿ ಕವಿಗಳು ಉಂಟು ಮಾಡುವ ಶಬ್ದ ವೈಚಿತ್ರ್ಯಕ್ಕೆ ಚಿತ್ರ ಕವಿತ್ವ ಎಂದು ಹೆಸರು. ಇದರಲ್ಲಿ ಹಲವು ವಿಧಗಳಿವೆ.

ಒಂದು ಉದಾಹರಣೆ : ನನ್ದನ ನನ್ದನ ನಿನ್ನೊ

ನ್ದನ್ದದ ಮೈ ಮುನ್ದೆ ನಿನ್ದುದೆನ್ದೆನೆ ಮುದದಿ ।

ನ್ದನ್ದಿ ನ್ದು ನ್ದೆನ್ನದೆ ನೀ

ನೆನ್ದುಂ ಮನ್ಮನದೆ ನೆಮ್ಮಿನಿನ್ದೀಮುದಮಂ ॥

ಇದು ತ್ರ್ಯಕ್ಷರಿ. ಇದರಲ್ಲಿ ದ, ನ, ಮ ಅಕ್ಷರಗಳು ಮಾತ್ರ ಇವೆ.

## ಅರ್ಥಾಲಂಕಾರಗಳು

ಶಬ್ದಾಲಂಕಾರಗಳಿಗಿಂತ ಅರ್ಥಾಲಂಕಾರಗಳ ಸಂಖ್ಯೆ ಅಧಿಕ. ಕನ್ನಡ ಭಾಷೆಗೆ ಮಿತವಾದ ಅತ್ಯುತ್ತಮವಾದ ಅಲಂಕಾರ ಶಾಸ್ತ್ರವನ್ನು ಒದಗಿಸಿರುವ ನಾಗವರ್ಮನು 60 ಅರ್ಥಾಲಂಕಾರಗಳನ್ನು ಹೇಳಿ ಅವನ್ನು ವಾಸ್ತವ, ಉಪಮೆ, ಅತಿಶಯ ಮತ್ತು ಶ್ಲೇಷೆ ಎಂದು ನಾಲ್ಕು ವಿಭಾಗ ಮಾಡಿ ವಿವರಿಸಿರುವನು. ಅರ್ಥಾಲಂಕಾರಗಳಲ್ಲಿ ಹೆಚ್ಚಿನವುಗಳು ವಾಸ್ತವ ಮತ್ತು ಉಪಮಾ ಮೂಲವಾದವುಗಳು. ಸಾದೃಶ್ಯ, ದೃಷ್ಟಾಂತ, ನಿದರ್ಶನ, ಸಮರ್ಥನೆ, ತಾದ್ರೂಪ್ಯ, ಸಂಭಾವನೆ ಮೊದಲಾದುವುಗಳ ಮೂಲಕ ಅರ್ಥವತ್ತಾಗಿ ವರ್ಣಿಸಿದರೆ ಅರ್ಥಾಲಂಕಾರವಾಗುತ್ತದೆ. ಇಂದು ಅರ್ಥಾಲಂಕಾರಗಳ ಸಂಖ್ಯೆ ನೂರಕ್ಕೂ ಮೀರಿದೆ. ಇಲ್ಲಿ ಉಪಮಾ, ದೃಷ್ಟಾಂತ, ರೂಪಕ, ದೀಪಕ, ಶ್ಲೇಷೆ ಮತ್ತು ಅರ್ಥಾಂತರನ್ಯಾಸಾಲಂಕಾರಗಳನ್ನು ಮಾತ್ರ ವಿವರಿಸಲಾಗಿದೆ.

**1. ಉಪಮೆ :** ಎರಡು ವಸ್ತುಗಳಿಗೆ ಪರಸ್ಪರವಾಗಿ ಸಾದೃಶ್ಯವನ್ನು ಹೇಳುವುದನ್ನು ಉಪಮಾಲಂಕಾರವೆನ್ನುತ್ತೇವೆ. ಸುಂದರವಲ್ಲದ ಬರಿಯ ಸಾದೃಶ್ಯವಿದ್ದು ಅದನ್ನು ಹೇಳಿದ ಮಾತ್ರಕ್ಕೆ ಉಪಮಾಲಂಕಾರವಾಗುವುದಿಲ್ಲ. ಉಪಮಾಲಂಕಾರದಲ್ಲಿ ಪೂರ್ಣೋಪಮೆ ಮತ್ತು ಲುಪ್ತೋಪಮೆ ಎಂದು ಎರಡು ವಿಧ.



ಉಪಮಾಲಂಕಾರದಲ್ಲಿ ಈ ಕೆಳಗಿನ ಅಂಗಗಳಿದ್ದು ಅವುಗಳು ಪೂರ್ಣವಾಗಿ ಬಂದಿದ್ದರೆ ಅದನ್ನು ಪೂರ್ಣೋಪಮೆ ಎಂದು ಕರೆಯುತ್ತಾರೆ.

1. ಉಪಮೇಯ : ಯಾವ ವಸ್ತುವನ್ನು ಹೋಲಿಸುತ್ತೇವೆಯೋ ಅದು.
2. ಉಪಮಾನ : ಯಾವುದಕ್ಕೆ ಹೋಲಿಸುತ್ತೇವೆಯೋ ಅದು.
3. ಸಮಾನಧರ್ಮ : ಇವೆರಡು ವಸ್ತುಗಳಲ್ಲಿರುವ ಯಾವ ಧರ್ಮಕ್ಕೆ ಹೋಲಿಸುತ್ತೇವೆಯೋ ಅದು.
4. ವಾಚಕ ಪದ : ಎರಡು ವಸ್ತುಗಳನ್ನು ಹೋಲಿಸಲು ಉಪಯೋಗಿಸುವ ತದ್ಧಿತಾವ್ಯಯಕ್ಕೆ ವಾಚಕ ಪದ ಎಂದು ಹೆಸರು.

ಉದಾ :

ಬಳಸಿ ಸುೞಿದಾಡಿ ಕಾಲ್ವಿಡಿ

ದೆಳಸಿ ಕಲಾಲಾಪಮೊದವೆ ಜನನಿಯ ಮೊಲೆವಾ ।

ಲ್ಗಳನುಣ್ಬ ಶಿಶುಗಳಂತಿರೆ

ಕಳವೆಯ ಪಾಲ್ದೆನೆಯ ಪಾಲನುಂಡುವು ಗಿಳಿಗಳ್ ॥

ಈ ಪದ್ಯದಲ್ಲಿ ಗಿಳಿಗಳೆಂಬ ಉಪಮೇಯವೂ, ಶಿಶುಗಳೆಂಬ ಉಪಮಾನವೂ, ಅಂತಿರೆ ಎಂಬ ವಾಚಕ ಪದವೂ ಸ್ಪಷ್ಟವಾಗಿ ಉಕ್ತವಾಗಿರುವುದಲ್ಲದೆ ಶಿಶುಗಳಲ್ಲಿರುವ ಹಾಗೆಯೇ ಗಿಳಿಗಳಲ್ಲಿಯೂ ಕಂಡುಬರುವ ಬಳಸುವುದು, ಸುಳಿದಾಡುವುದು, ಹಾಲು ಕುಡಿಯುವುದೇ ಮೊದಲಾದ ಸಾಧಾರಣ ಧರ್ಮಗಳು ಸ್ಪಷ್ಟವಾಗಿ ಉಕ್ತವಾಗಿರುವುದರಿಂದ ಈ ಪದ್ಯವು ಪೂರ್ಣೋಪಮೆಯಾಗುತ್ತದೆ.

ಉಪಮಾನ, ಉಪಮೇಯ, ಸಾಧಾರಣಧರ್ಮ ವಾಚಕಶಬ್ದ ಇವುಗಳಲ್ಲಿ ಒಂದಾದರೂ ಕೆಲವಾದರೂ ಸ್ಪಷ್ಟವಾಗಿ ಉಕ್ತವಾಗದಿರುವ ಸಾದೃಶ್ಯಕ್ಕೆ ಲುಪ್ತೋಪಮೆಯೆಂದು ಹೆಸರು. ಇದರಲ್ಲಿ ಎಂಟು ವಿಧಗಳಿವೆ.

**2. ದೃಷ್ಟಾಂತ :** ಎರಡು ಬೇರೆ ಬೇರೆ ವಾಕ್ಯಗಳು ಪರಸ್ಪರ ಅರ್ಥ

ಸಾದೃಶ್ಯದಿಂದ ಒಂದರ ಪ್ರತಿಬಿಂಬ ಮತ್ತೊಂದು ಎಂದು ತೋರುವಂತಿದ್ದರೆ ಅದು ದೃಷ್ಟಾಂತಾಲಂಕಾರವಾಗುತ್ತದೆ.

ಉದಾ :

ಮೊದಲೆ ದುರಾತ್ಮಂ ಪ್ರಭುತೆಯು

ಮೊದವಲೊಡಂ ಜನಕೆ ಪಡೆಯದಿರನದವಳಲಂ ।

ಮದಿರೆಯನೀಂಟಿಸಿ ಕೋಡಗ

ಕಿದಿರೊಳ್ ಕೊಳ್ಳಿಯುಮನಿರಿಸೆ ಸುಡದಿರದೂರಂ ॥

ದುಷ್ಟನಾದನಿಗೆ ಪ್ರಭುತ್ವವೂ ಬಂದರೆ ಅವನು ಊರಿಗೆ ಹಿಂಸೆಗೊಡದಿರನು. ಕಪಿಗೆ ಕಳ್ಳು ಕುಡಿಸಿ ಒಂದು ಕೊಳ್ಳಿಯನ್ನೂ ಕೊಟ್ಟರೆ ಅದು ಊರನ್ನು ಸುಡದಿದ್ದೀತೆ ? ಎಂದು ಅರ್ಥವಾಗಿ ಇಲ್ಲಿ ಒಂದು ವಾಕ್ಯವು ಇನ್ನೊಂದನ್ನು ಸಮರ್ಥಿಸುವುದರಿಂದ ಇದು ದೃಷ್ಟಾಂತಾಲಂಕಾರ.

3. **ರೂಪಕ** : ಉಪಮಾನ, ಉಪಮೇಯ ವಸ್ತುಗಳಲ್ಲಿ ಒಂದು ಇನ್ನೊಂದರಂತೆ ಇದೆ ಎಂದು ಹೇಳದೆ ಉಪಮೇಯವೂ, ಉಪಮಾನವೂ ಒಂದೇ ಎಂದು ಕಲ್ಪಿಸಿಕೊಂಡು ಅಭೇದವಾಗಿ ವರ್ಣಿಸಿದಲ್ಲಿ ರೂಪಕಾಲಂಕಾರವಾಗುತ್ತದೆ.

ಉದಾ :

ಅರಸಾಗಲೊಡಂ ಮೆಯ್ಮಱೆ

ದು ರಾಜ್ಯಸುಖ ಸನ್ನಿಪಾತ ನಿದ್ರೆಯ ಕೈಕೊಂ ।

ಡಿರುಳುಂ ಪಗಲುಂ ಜಾಡ್ಯದೆ

ಮರವಟ್ಟೆಚ್ಚಱುವರಲ್ಲ ಮೆಂತುಂ ಭೂಪರ್ ॥

ಇಲ್ಲಿ ರಾಜ್ಯ ಸುಖವೆಂಬ ಸನ್ನಿಪಾತ ನಿದ್ರೆ ಎಂಬುದಾಗಿ ರಾಜ್ಯ ಸುಖವನ್ನು ಸನ್ನಿಪಾತ ನಿದ್ರೆಗೆ ಅಭಿನ್ನವಾಗಿ ಹೇಳಿರುವುದರಿಂದ ಇದು ರೂಪಕಾಲಂಕಾರ.



4. **ದೀಪಕ** : ಪ್ರಸ್ತುತವಾದ ಒಂದು ವಿಷಯವು ಅಪ್ರಸ್ತುತವಾದ ಮತ್ತೊಂದರೊಡನೆ ಸಂಬಂಧಿಸಲ್ಪಟ್ಟರೆ ಅದು ದೀಪಕಾಲಂಕಾರವಾಗುತ್ತದೆ.

ಉದಾ :

ಗಿಳಿವಱೆ ಮೆಱೆಯದ ನಂದನ

ಮಳಿ ಶಿಶು ವಿಹರಿಸದ ಪೂಗೊಳಂ ಕಳರವದಿಂ ।

ದೆಳೆಯಂಚೆಯಡಿಯಿಡದ ತ

ಣ್ಬುಳಿಲರ್ಭಕನಾಡದಂಗಳಂ ಮಂಜುಳಮೇ ॥

ಇಲ್ಲಿ ಅರ್ಭಕನು ಆಡದ ಅಂಗಳವು ಪ್ರಸ್ತುತ. ಅದು ಮಂಜುಳವಲ್ಲ, ಗಿಳಿಯ ಮರಿ ಮೆರೆಯದ ನಂದನವೇ ಮೊದಲಾದುವುಗಳು ಅಪ್ರಸ್ತುತ. ಇವೂ ಅದರಂತೆಯೇ ಮಂಜುಳವಲ್ಲ ಎಂದು ವರ್ಣಿತವಾಗಿರುವುದರಿಂದ ಇದು ದೀಪಾಕಾಲಂಕಾರ.

5. **ಶ್ಲೇಷೆ** : ಒಂದೇ ಶಬ್ದಕ್ಕೆ ಎರಡು ಅಥವಾ ಅದಕ್ಕಿಂತ ಹೆಚ್ಚು ಅರ್ಥ ಬರುವಂತೆ ಚಮತ್ಕಾರವಾಗಿ ಪದ ಪ್ರಯೋಗ ಮಾಡಿದಲ್ಲಿ ಶ್ಲೇಷಾಲಂಕಾರವಾಗುತ್ತದೆ.

ಉದಾ :

ಅತಿಶಯ ಪದಾರ್ಥನಿಕರ

ಪ್ರತೀತಿಯಂ ಪಡೆವ ಪಾದ ವಿನ್ಯಾಸಂ ಭೂ ।

ನುತಮಾಗದಲ್ತೆ ನಿರ್ದೋ

ಷತೆಯಿಂದಲ್ಲದೆ ಸಮಂತು ಕವಿಗಂ ರವಿಗಂ ॥

ಇಲ್ಲಿ ಪದಾರ್ಥ, ಪಾದ, ನಿರ್ದೋಷತೆ ಎಂಬ ಶಬ್ದಗಳು ಕವಿಯ ಪರವಾಗಿ ಶಬ್ದಾರ್ಥ, ಶ್ಲೋಕಪಾದ, ದೋಷ, ಶೂನ್ಯತೆ ಎಂಬ ಅರ್ಥದಿಂದಲೂ, ರವಿಯ

ಪರವಾಗಿ ಪ್ರಪಂಚದಲ್ಲಿರುವ ಪದಾರ್ಥ, ಕಿರಣ, ಹಗಲು ಎಂಬ ಅರ್ಥದಿಂದಲೂ ಬಂದಿರುವುದರಿಂದ ಇದು ಶ್ಲೇಷಾಲಂಕಾರ.

**6. ಅರ್ಥಾಂತರನ್ಯಾಸ :** ಸಾಮಾನ್ಯಾರ್ಥ, ವಿಶೇಷಾರ್ಥಗಳೆರಡೂ ಉಕ್ತವಾಗಿದ್ದು ಒಂದರಿಂದ ಇನ್ನೊಂದು ಸಮರ್ಥಿತವಾದರೆ ಅದು ಅರ್ಥಾಂತರನ್ಯಾಸ ಅಲಂಕಾರವಾಗುತ್ತದೆ.

ಉಣದಿರ್ಪಾ ಧನಮಿರ್ದೊಡೇನು ? ಸುತನಿರ್ದೇಂ ಮುಪ್ಪಿನಲ್ಲಾಗದಾ
ಒಣಗಲ್ಪೈರಿಗೆ ಬಾರದಿರ್ದ ಮಳೆ ತಾಂ ಬಂದೇನದಾಪತ್ತಿನೊಳ್
ಮಣಿದುಂ ನೋಡದ ಬಂಧುವೇತಕೆಣಿಸಲ್ ಕಾಲೋಚಿತ ಕೈದಿದಾ
ತೃಣವೇ ಪರ್ವತವಲ್ಲವೇ ? ಹರ ಹರಾ ಶ್ರೀ ಚೆನ್ನಸೋಮೇಶ್ವರಾ ॥

ಇಲ್ಲಿ ಕಾಲೋಚಿತಕ್ಕೈದಿದ ತೃಣವಾದರೂ ಪರ್ವತಕ್ಕೆ ಸಮಾನ ಎಂಬ ಮಾತು ಎಲ್ಲರಿಗೂ ಅನ್ವಯಿಸುವ ಮಾತಾಗಿದೆ. ಒಣಗುವ ಪೈರು, ಮುಪ್ಪಿನ ತಂದೆ, ಆಪತ್ತಿಗೊಳಗಾದ ವ್ಯಕ್ತಿ ಮೊದಲಾದವರಿಗೆ ಸಕಾಲದಲ್ಲಿ ಒದಗುವ ಸಹಾಯವು ಶ್ರೇಷ್ಠವಾದುದು ಎಂಬ ವಿಶೇಷ ಸಂಗತಿಯು ಸಾಮಾನ್ಯಾರ್ಥದಿಂದ ಸಮರ್ಥಿಸಲ್ಪಟ್ಟು ಅರ್ಥಾಂತರನ್ಯಾಸ ಅಲಂಕಾರವಾಗಿದೆ.